# ಧ್ವನಿಶಾಸ್ತ್ರ

ಸಂಪಾದಕ

ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ



ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ ಮಾಲೆ-೫

# ದ್ರಾವಿಡಶಾಸ್ತ್ರ


ಸಂಪಾದಕರು

ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ






ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

**DRAAVIDASHAASTRA**
A collection of Articals on Dravidology
Edited by
**Prof. Mallepuram G. Venkatesha**
Dept. of Dravidian Cultur Studies
Kannada University, Hampi
Vidyaranya 583 276

Published by
**Dr.H.C.Boralingaiah**
Director, Prasaranga
Kannada University, Hampi
Vidyaranya 583 276

Pages: XX+156 **Rs. 70/-**
First Impression: 2003
www.kavihampi.org



ಪ್ರಕಾಶನ
ಡಾ.ಹಿ.ಚಿ.ಬೋರಲಿಂಗಯ್ಯ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಬೆಲೆ ರೂ. ೭೦/-

ಮುಖಪುಟ : ಕೆ.ಕೆ. ಮಕಾಳಿ

ಡಿ.ಟಿ.ಪಿ.
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮುದ್ರಣ
ಸತ್ಯಶ್ರೀ ಪ್ರಿಂಟರ್ಸ್ ಪ್ರೈ.ಲಿ., ಬೆಂಗಳೂರು

# ಕನ್ನಡ ಪ್ರಜ್ಞೆಯನ್ನು ವಿಶ್ವಪ್ರಜ್ಞೆಯಾಗಿಸುವತ್ತ

ಸಾವಿರಾರು ವರ್ಷಗಳ ಸುದೀರ್ಘ ಮತ್ತು ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಕರ್ನಾಟಕದ ಆಧುನಿಕ ಇತಿಹಾಸದಲ್ಲಿ ಕರ್ನಾಟಕದ ಏಕೀಕರಣ ಒಂದು ಐತಿಹಾಸಿಕವೂ ಮತ್ತು ಮಹತ್ವಪೂರ್ಣವೂ ಆದ ವಿಶಿಷ್ಟ ಘಟನೆ. ಹಾಗೆಯೇ ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆ ಮತ್ತೊಂದು ಮಹತ್ವದ ಐತಿಹಾಸಿಕ ಘಟನೆ. ಕರ್ನಾಟಕದ ಇತರೆ ವಿಶ್ವವಿದ್ಯಾಲಯಗಳು ಕೇವಲ ಕೆಲವು ಜಿಲ್ಲೆಗಳಿಗೆ ಮಾತ್ರ ಪರಿಮಿತಗೊಂಡಿದ್ದರೆ ಕನ್ನಡ ವಿಶ್ವವಿದ್ಯಾಲಯದ ವ್ಯಾಪ್ತಿ ಅಖಂಡ ಕರ್ನಾಟಕ ಮಾತ್ರವಲ್ಲದೆ ಕನ್ನಡಿಗ ಮತ್ತು ಕನ್ನಡ ಸಂಸ್ಕೃತಿ ನೆಲೆಸಿರುವ ಎಲ್ಲ ದೇಶ ಮತ್ತು ವಿದೇಶಗಳನ್ನೂ ಒಳಗೊಂಡಿದೆ. ಈ ಕಾರಣದಿಂದ ನಮ್ಮ ವಿಶ್ವವಿದ್ಯಾಲಯದ ದಾರಿ ಮತ್ತು ಗುರಿ ಎರಡೂ ವಿಭಿನ್ನವೂ ಮತ್ತು ವೈಶಿಷ್ಟ್ಯಪೂರ್ಣವೂ ಆಗಿವೆ.

ಕನ್ನಡ ವಿಶ್ವವಿದ್ಯಾಲಯ ಕನ್ನಡ ನಾಡು, ನುಡಿ, ಸಂಸ್ಕೃತಿ ಮತ್ತು ಜನಜೀವನದ ಸರ್ವಮುಖಗಳ ವಿಶಿಷ್ಟವಾದ ಅಂತರಂಗ ಮತ್ತು ಬಹಿರಂಗ ಸಂಪತ್ತನ್ನು ಕುರಿತು ಅಧ್ಯಯನ ಮಾಡುವ, ಸಂಶೋಧಿಸುವ ಮತ್ತು ಅದರ ಅಧ್ಯಯನದ ಫಲಿತಗಳನ್ನು ಜಗತ್ತಿನಾದ್ಯಂತ ಪ್ರಸಾರ ಮಾಡಿ ಕರ್ನಾಟಕದ ಬಗೆಗಿನ ಅರಿವನ್ನು ಜನಸಮುದಾಯದಲ್ಲಿ ವಿಸ್ತರಿಸುವ ಹಾಗೂ ಅನಂತಮುಖಿಯಾದ ವಿಶ್ವಜ್ಞಾನವನ್ನು ಕನ್ನಡಜ್ಞಾನವನ್ನಾಗಿ ಪರಿವರ್ತಿಸಿ ಅದು ಕನ್ನಡಿಗರೆಲ್ಲರಿಗೆ ದಕ್ಕುವಂತೆ ಮಾಡುವ ಮೂಲಭೂತ ಆಶಯದ ಪ್ರತಿನಿಧಿಯಾಗಿ ಸ್ಥಾಪಿತಗೊಂಡಿದೆ. ಬೋಧನೆಗಿಂತ ಸಂಶೋಧನೆ, ಸೃಷ್ಟಿಗಿಂತ ವಿಶ್ವಂಭರ ದೃಷ್ಟಿ, ಶಿಥಿಲ ವಿವರಣೆಗಿಂತ ಅತುಳ ಸಾಧ್ಯತೆಗಳನ್ನೊಳಗೊಂಡ ಅನನ್ಯ ಅಭಿವ್ಯಕ್ತಿ, ನಾಡಿನ ಕೋಟಿ ಕೋಟಿ ಶ್ರೀಸಾಮಾನ್ಯರ ವಿವಿಧ ಪ್ರತಿಭಾಶಕ್ತಿ ಮತ್ತು ಸಾಮರ್ಥ್ಯಗಳ ಸದ್ಬಳಕೆಯ ಮೂಲಕ ಅವರ ಅಂತಃಪ್ರಜ್ಞೆಯನ್ನು ಎಚ್ಚರಿಸುವ, ವಿಕಸಿಸುವ ಶ್ರದ್ಧಾನ್ವಿತ ಕಾಯಕ ಇದರ ದಾರಿಯಾಗಿದೆ.

ಕನ್ನಡ ನಾಡನ್ನು ಕನ್ನಡ ವಿಶ್ವವಿದ್ಯಾಲಯದಲ್ಲಿ ನೋಡು, ಕನ್ನಡ ವಿಶ್ವವಿದ್ಯಾಲಯವನ್ನು ನೋಡಿದಲ್ಲದೆ ಕನ್ನಡ ನಾಡಿನ ಯಾತ್ರೆ ಸಂಪೂರ್ಣವಾಗದು, ಸಾರ್ಥಕವಾಗದು ಎಂಬಂತೆ ರೂಪುಗೊಳ್ಳುತ್ತಿರುವ ಮತ್ತು ರೂಪುಗೊಳ್ಳಬೇಕಾದ ಮಹಾ ಸಂಸ್ಥೆ ಇದು. ಕನ್ನಡಪ್ರಜ್ಞೆ

ತನ್ನ ಸತ್ವ ಮತ್ತು ಸ್ವತ್ವದೊಡನೆ ವಿಶ್ವಪ್ರಜ್ಞೆಯಾಗಿ ಅರಳಿ ನಳನಳಿಸಬೇಕು; ವಿಶ್ವಪ್ರಜ್ಞೆ ಕನ್ನಡ ದೇಶೀ ಪ್ರಜ್ಞೆಯೊಳಗೆ ಪ್ರವೇಶಿಸಿ, ಪ್ರವಹಿಸಿ, ಸಮನ್ವಯಗೊಂಡು, ಸಂಲಗ್ನಗೊಂಡು, ಸಮರಸಗೊಂಡು ಸಾಕ್ಷಾತ್ಕಾರಗೊಳ್ಳಬೇಕು ಎಂಬುದೇ ಇದರ ಗುರಿ. ಈ ಗುರಿಯ ಮೂಲಕ ಕನ್ನಡ ಕರ್ನಾಟಕತ್ವದ ಉಸಿರಾಗಿ, ವಿಶ್ವಪ್ರಜ್ಞೆಯ ಹಸಿರಾಗಿ, ಕನ್ನಡಮಾನವ ವಿಶ್ವಮಾನವ ನಾಗಿ ಬೆಳೆಯಲು ಸಾಧನವಾಗಬೇಕು. ಕನ್ನಡಿಗರೆಲ್ಲರ ಸಾಮೂಹಿಕ ಶ್ರಮ ಮತ್ತು ಪ್ರತಿಭೆಗಳ ಸಮಷ್ಟಿ ಪ್ರಕ್ರಿಯೆಯಿಂದ ಬೆಳಕಿನ ಈ ಮಹಾಪಥವನ್ನು ಕ್ರಮಿಸುವುದು ನಮ್ಮ ವಿಶ್ವವಿದ್ಯಾಲಯದ ಮಹತ್ತರ ಆಶಯ.

ನಾಗಾಲೋಟದಿಂದ ಕ್ರಮಿಸುತ್ತಿರುವ ಜಗತ್ತಿನ ವ್ಯಾಪಕ ಜ್ಞಾನ, ತಂತ್ರಜ್ಞಾನ ಮತ್ತು ವಿಜ್ಞಾನಗಳ ಶೋಧನೆ ಮತ್ತು ಚಿಂತನೆಗಳನ್ನು ಕನ್ನಡದಲ್ಲಿ ಸತ್ವಪೂರ್ಣವಾಗಿ ದಾಖಲಿಸಿ ಕನ್ನಡ ಓದುಗರ ಜ್ಞಾನವನ್ನು ವಿಸ್ತರಿಸಿ ಅವರಲ್ಲಿ ಪುಸ್ತಕ ಸಂಸ್ಕೃತಿಯನ್ನು ಪ್ರಸರಿಸುವ ವಿಶೇಷ ಹೊಣೆಯನ್ನು ಹೊತ್ತು ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗ ಅಸ್ತಿತ್ವಕ್ಕೆ ಬಂದಿದೆ. ಶ್ರವ್ಯ, ದೃಶ್ಯ ಮತ್ತು ವಾಚನ ಸಾಮಗ್ರಿಗಳ ಸಮರ್ಪಕ ಉತ್ಪಾದನೆ ಮತ್ತು ವಿತರಣಾ ಪ್ರಕ್ರಿಯೆಗಳ ಮೂಲಕ ಇದು ಈ ಗುರಿಯನ್ನು ತಲುಪಲು ಶಕ್ತಿಮೀರಿ ಪ್ರಯತ್ನಿಸುತ್ತಿದೆ. ಈಗಾಗಲೇ ೭೦೦ಕ್ಕೂ ಹೆಚ್ಚು ವೈವಿಧ್ಯಮಯ ಮತ್ತು ವೈಶಿಷ್ಟ್ಯಮಯ ಕೃತಿಗಳ ಮೂಲಕ ಕನ್ನಡ ಗ್ರಂಥಲೋಕದ ಅಂತರಂಗ ಮತ್ತು ಬಹಿರಂಗ ಸೌಂದರ್ಯಗಳನ್ನು ಉಜ್ವಲಿಸಿರುವ ಇದು ತನ್ನ ಮುಂದಿನ ಗುರಿಯ ಕಡೆಗೆ ಆಶಾದಾಯಕವಾಗಿ ಚಲಿಸುತ್ತಿದೆ.

ಭರತ ಖಂಡವನ್ನು ಆರ್ಯಾವರ್ತ ಎಂಬ ಹೆಸರಿನಲ್ಲಿ ಗುರುತಿಸುವ ಸಂಪ್ರದಾಯ ಪ್ರಾಚೀನ ಕಾಲದಿಂದ ನಡೆದುಬಂದಿದೆ. ಆದರೆ, ಆರ್ಯರು ಭಾರತಕ್ಕೆ ಬರುವುದಕ್ಕೆ ಮುನ್ನವೇ ಈ ದೇಶದಲ್ಲಿ ಹಲವಾರು ಜನಾಂಗಗಳು ಬದುಕಿ ತಮ್ಮ ಜೀವನ, ಕ್ರಿಯೆ, ಚಿಂತನೆ, ಸೃಜನಶೀಲತೆ ಹುಡುಕಾಟಗಳ ಮೂಲಕ ತಮ್ಮ ಬದುಕಿಗೆ ಒಂದು ವಿಶಿಷ್ಟ ಚೌಕಟ್ಟನ್ನು ನಿರ್ಮಿಸಿಕೊಂಡಿದ್ದರೆಂಬುದು ಮತ್ತು ಆ ಬದುಕು ಕೇವಲ ಏಕಮುಖಿಯಾಗಿರದೆ ಬಹುಮುಖಿಯಾಗಿತ್ತೆಂಬುದು ಸಂಶೋಧನೆಗಳಿಂದ ಸಾಬೀತಾಗಿದೆ. ಹಾಗೆಯೇ ಉತ್ತರ ಭಾರತವನ್ನು ಆರ್ಯಭೂಮಿಯೆಂದು ದಕ್ಷಿಣ ಭಾರತವನ್ನು ದ್ರಾವಿಡಭೂಮಿಯೆಂದು ಪ್ರತ್ಯೇಕಿಸುವ ಹಾಗೂ ಅವುಗಳ ವಿಭಿನ್ನತೆ, ವೈವಿಧ್ಯತೆ, ವಿಶಿಷ್ಟತೆಗಳನ್ನು ಭಿನ್ನ ಭಿನ್ನ ಮಾನದಂಡಗಳಿಂದ ವಿಶ್ಲೇಷಿಸುವ ಪರಿಪಾಟವೂ ನಡೆದುಬಂದಿದೆ. ಈ ಪರಿಕಲ್ಪನೆಗಳು ಒಂದು ನಿರ್ದಿಷ್ಟ ಜನಾಂಗ, ಒಂದು ನಿರ್ದಿಷ್ಟ ಭೌಗೋಳಿಕ ಪರಿಸರದಲ್ಲಿ ಬದುಕುತ್ತಾರೆ, ಸಾಯುತ್ತಾರೆ ಎಂಬ ಮೂಲ ಆಲೋಚನೆಯಿಂದ ಹುಟ್ಟಿಬಂದದ್ದು. ಆಧುನಿಕ ಕಾಲದಲ್ಲಿ ವೃತ್ತಿ, ಶಿಕ್ಷಣ, ಯುದ್ಧ, ಆಹಾರ ಮುಂತಾದ ಕಾರಣಗಳಿಗಾಗಿ ಒಂದು ಭೂಭಾಗದಿಂದ ಮತ್ತೊಂದು ಭೂಭಾಗಕ್ಕೆ ಜನ ತಾತ್ಕಾಲಿಕವಾಗಿ ಮತ್ತು ಖಾಯಂ ಆಗಿ ವಲಸೆ ಹೋಗುತ್ತಿರುವ ಪ್ರವೃತ್ತಿ ವಿಶೇಷವಾಗಿ ಮತ್ತು ವೇಗವಾಗಿ ಕಾಣಬರುತ್ತಿದೆ. ಪ್ರಾಚೀನ ಕಾಲದಲ್ಲಿ

ಇಂತಹ ವಲಸೆ ಪ್ರವೃತ್ತಿ ಅಷ್ಟೊಂದು ತೀವ್ರವೂ ವೇಗಗಾಮಿಯೂ ಆಗಿರದಿದ್ದರೂ ಹೊಸ ಹೊಸ ಜೀವನವನ್ನು, ಜೀವನ ಭೂಮಿಯನ್ನು ಹುಡುಕಿಕೊಂಡು ಅಲೆಯುವ ಪ್ರವೃತ್ತಿ ಸಾಕಷ್ಟು ದಟ್ಟವಾಗಿಯೇ ಇತ್ತು. ಆದ್ದರಿಂದ ಯಾವುದೇ ಒಂದು ಜನಾಂಗ ಅಥವಾ ಭೂಭಾಗ ಕರಾರುವಾಕ್ಕಾಗಿ ಇಂಥದೇ ಸಂಸ್ಕೃತಿಯ ಚೌಕಟ್ಟಿನಿಂದಲೇ ಉದ್ಭವಿಸಿದ್ದು ಮತ್ತು ಬೆಳೆದದ್ದು ಎಂದು ಹೇಳಲಾಗದು. ಪ್ರಾಚೀನ ಮಹಾಕಾವ್ಯಗಳೆನಿಸಿದ ರಾಮಾಯಣ, ಮಹಾಭಾರತಗಳಲ್ಲಿ ಕಂಡುಬರುವ ಬಗೆಬಗೆಯ ಜೀವನ ಕ್ರಮಗಳೇ ಈ ಚಲನಶೀಲತೆಯ ವಿಶಿಷ್ಟ ಸಂಕೇತಗಳಾಗಿವೆ. ಪರಸ್ಪರ ಯುದ್ಧ ಮತ್ತು ಆಕ್ರಮಣಗಳ ಕಾರಣದಿಂದಾಗಿ ಭಿನ್ನ ಭಿನ್ನ ಜನಾಂಗಗಳು ಪರಸ್ಪರ ಕಾದಾಡಿ ಒಮ್ಮೆ ಇವರು ಒಮ್ಮೆ ಅವರು ಮೇಲುಗೈ ಸಾಧಿಸಿದರೂ ಅಲ್ಲಿ ಖಚಿತ ಏಕಸಂಸ್ಕೃತಿಯೆನ್ನುವುದು ಶಿಥಿಲ ಬಹುಸಂಸ್ಕೃತಿಯಾಗಿ ಮೈದೋರಿದ್ದು ಕಂಡುಬರುತ್ತದೆ. ಮೂಲ ನಿವಾಸಿಗಳಾಗಿದ್ದ ದ್ರಾವಿಡರು (ಇವರಿಗಿಂತ ಪ್ರಾಚೀನ ಜನಾಂಗಗಳು ಭಾರತದ ಬೇರೆ ಬೇರೆ ಭಾಗದಲ್ಲಿ ನೆಲೆಸಿದ್ದರು) ಹೊರಗಡೆಯಿಂದ ಬಂದ ಆರ್ಯರ ಆಕ್ರಮಣದ ಫಲವಾಗಿ ಹಂತ ಹಂತವಾಗಿ ಕೆಳಸರಿದ ನಿದರ್ಶನಗಳನ್ನು ಚರಿತ್ರೆ ಬಿತ್ತರಿಸುತ್ತದೆ. ದಕ್ಷಿಣ ಭಾರತದ ಕಡೆಗೆ ಸರಿಯುತ್ತ ಬಂದ ದ್ರಾವಿಡರು ಒಂದು ನಿರ್ದಿಷ್ಟ ಪ್ರದೇಶದಲ್ಲಿ ನೆಲೆಸದೆ ದಕ್ಷಿಣ ಭಾರತದ ತುಂಬಿ ತುಂಬಿಕೊಂಡರೆಂದು ಊಹಿಸಬಹುದಾಗಿದೆ. ಹೀಗೆ ತುಂಬಿಕೊಳ್ಳುವಾಗ ಅಲ್ಲಿಯ ಮೂಲನಿವಾಸಿಗಳನ್ನು ಗೆದ್ದೋ, ಅವರೊಡನೆ ಸ್ನೇಹ, ಪ್ರೀತಿಗಳನ್ನು ಸಾಧಿಸಿ ಅವರೊಡನೆ ಬೆರೆತೋ ಹೊಸ ಸಂಸ್ಕೃತಿಯ ಉದಯಕ್ಕೆ ಕಾರಣರಾದರು. ದಟ್ಟವಾದ ಅರಣ್ಯಗಳಿಂದ ಆವೃತವಾಗಿದ್ದ ದಕ್ಷಿಣ ಭಾರತದ ಭಿನ್ನ ಭಿನ್ನ ಪ್ರದೇಶಗಳಲ್ಲಿ ವಾಸಿಸತೊಡಗಿದ ಅವರು ಕಾಲಕ್ರಮೇಣ ನಿಶ್ಚಿತ ನೆಲೆಗಳಲ್ಲಿ ನಿಂತು ತಮ್ಮ ಬದುಕನ್ನು ಮತ್ತು ಬದುಕಿನ ವಿಧಾನಗಳನ್ನು ರೂಪಿಸಿಕೊಂಡರು. ಇದರಿಂದಾಗಿ ಭಿನ್ನ ಜೀವನಕ್ರಮ ಮತ್ತು ಭಿನ್ನ ಭಾಷೆಗಳು ರೂಪು ತಳೆದವು. ತಮಿಳು, ತೆಲುಗು, ಕನ್ನಡ, ಮಲಯಾಳಂ, ತುಳು ಮುಂತಾದ ಭಾಷೆಗಳು ಮತ್ತು ಕಾಲಾಂತರದಲ್ಲಿ ಅವುಗಳ ಉಪ ಭಾಷೆಗಳು ಹುಟ್ಟಿಕೊಂಡು ತಮ್ಮ ಸಂಸ್ಕೃತಿಯನ್ನು ವಿಶಿಷ್ಟ ನೆಲೆಗಳಲ್ಲಿ ಮತ್ತು ರೂಪಗಳಲ್ಲಿ ಅಭಿವ್ಯಕ್ತಿಸತೊಡಗಿದವು. ಇದರಿಂದಾಗಿ ಕರ್ನಾಟಕ ಸಂಸ್ಕೃತಿ, ತಮಿಳು ಸಂಸ್ಕೃತಿ, ತೆಲುಗು ಸಂಸ್ಕೃತಿ ಇತ್ಯಾದಿ ವಿಭಾಗಗಳನ್ನು ಮಾಡಿಕೊಂಡು ಸಂಸ್ಕೃತಿತಜ್ಞರು ಅಧ್ಯಯನಕ್ಕೆ ತೊಡಗಿದರು. ಅದರ ಫಲವಾಗಿ ಹಲವು ಕೃತಿಗಳು ಹೊರಬಂದವು, ಮಾತ್ರವಲ್ಲದೆ ಪ್ರತಿಯೊಂದು ಭಾಷೆಯೂ ತನ್ನ ಅನನ್ಯತೆಯನ್ನು ತನ್ಮೂಲಕ ಗುರುತಿಸಿಕೊಳ್ಳಲು ಮತ್ತು ಪ್ರಕಟಿಸಲು ಸಜ್ಜಾಯಿತು. ಆದರೆ, ಈ ಭಾಷೆಗಳು ಮತ್ತು ಅವುಗಳನ್ನಾಡುವ ಜನ ಕಟ್ಟಿಕೊಂಡ ಸಂಸ್ಕೃತಿಗಳು ಶುದ್ಧಾಂಗವಾಗಿ ಭಿನ್ನವಾಗದೆ ಒಂದರೊಳಗೊಂದು ಬೆರೆತು ಹೋಗಿರುವುದು ಸುವೇದ್ಯ. ಮೊದ ಮೊದಲು ಅತ್ಯಂತ ಸುಲಭವಾಗಿ ಮತ್ತು ಕರಾರುವಾಕ್ಕಾಗಿ ಗುರುತಿಸಬಹುದಾಗಿದ್ದ ಪ್ರತ್ಯೇಕತೆಗಳು ಆಧುನಿಕ ವಿಜ್ಞಾನ , ತಂತ್ರಜ್ಞಾನ ಮತ್ತು ಸಂಕರಶೀಲ ಬದುಕಿನ

ಕಾರಣದಿಂದಾಗಿ ಒಂದರ ತೆಕ್ಕೆಯಲ್ಲಿ ಮತ್ತೊಂದು ಸೇರಿಕೊಂಡಿರುವುದು ವೇದ್ಯವಾಗುತ್ತದೆ. ಮತ್ತು ಇದೇ ಕಾರಣಕ್ಕಾಗಿ ಇದಮಿತ್ಥಂ ಎಂಬಂತೆ ಅತ್ಯಂತ ಖಚಿತವಾಗಿ ಅವುಗಳ ಪ್ರತ್ಯೇಕತೆಯನ್ನು ಗುರುತಿಸುವುದು ಕೂಡ ಕಷ್ಟವಾಗುತ್ತಿದೆ. ಒಂದು ಸಂಸ್ಕೃತಿಯ ಯಾವುದೋ ಅಂಶ ಮತ್ತಾವುದೋ ಸಂಸ್ಕೃತಿಯ ಪ್ರಭಾವಕ್ಕೆ ಕೆಲವೊಮ್ಮೆ ಮೇಲ್ಪದರದಲ್ಲಿ ಮತ್ತೆ ಕೆಲವೊಮ್ಮೆ ಅಂತರ್‌ಪದರದಲ್ಲಿ ಏಕೀಭವಿಸುತ್ತಿರುವಂತೆ ಭಾಸವಾದರೆ ಅದು ಸುಳ್ಳಲ್ಲ ಮತ್ತು ಅಪರಾಧವೂ ಅಲ್ಲ. ಭಾಷೆ, ಭೌಗೋಳಿಕ ಪರಿಸರ, ಜೀವನ ವಿಧಾನ, ಆಲೋಚನಾ ಧಾಟಿ, ಸೃಜನಶೀಲತೆಯ ಬಹುಸ್ತರಗಳು ಇವೆಲ್ಲವೂ ಒಂದರೊಡನೊಂದು ಕಂಡುಕೊಂಡಿವೆ. ಆದ್ದರಿಂದ ಈ ದಕ್ಷಿಣ ಭಾರತೀಯ ಭೌಗೋಳಿಕ ಚೌಕಟ್ಟುಗಳ ಮಧ್ಯೆ ಆಡಗಿರುವ ಭಾಷಾ ಮೂಲ ಸಂಸ್ಕೃತಿಯ ವಿವೇಚನೆಯನ್ನು ಮಾಡುವಾಗ ಒಮ್ಮೆ ಅವುಗಳನ್ನು ಭಿನ್ನವಾಗಿ ಮತ್ತೊಮ್ಮೆ ಅಖಂಡವಾಗಿ ನೋಡುವ ಅಗತ್ಯತೆ ಅಧಿಕವಾಗಿ ಕಂಡುಬರುತ್ತಿದೆ. ನಾಗರಿಕತೆಯ ನಾಗಾಲೋಟದ ಮತ್ತು ಶೀಘ್ರ ಸಂಕ್ರಮಣಶೀಲ ಗುಣದಿಂದಾಗಿ ದಕ್ಷಿಣದ ಬೇರೆ ಬೇರೆ ರಾಜ್ಯಗಳ ತೀವ್ರ ಚಲನಶೀಲತೆಯಿಂದಾಗಿ ಈ ಸಮನ್ವಯಶೀಲತೆ ಮತ್ತು ಸಂಸ್ಕೃತಿಲೀನತೆಗಳು ಸಾಂದ್ರವಾಗುತ್ತಿವೆ. ಆದ್ದರಿಂದ ದಕ್ಷಿಣ ಭಾರತದ ಜನಜೀವನದಲ್ಲೇ ಉತ್ತರ ಭಾರತಕ್ಕಿಂತ ಭಿನ್ನವಾದ ಒಂದು ವಿಶಿಷ್ಟ ಗುಣ ಗೋಚರಿಸುತ್ತಿದೆ. ಕನ್ನಡ, ತಮಿಳು, ತೆಲುಗು, ಮಲಯಾಳಂ ಮುಂತಾದ ಎಲ್ಲಾ ಭಾಷಿಕರಲ್ಲಿಯೂ ಸಮಾನತೆಯ ಅಂಶಗಳು ಅಧಿಕವಾಗುತ್ತ ಹೋಗುತ್ತಿರುವುದರಿಂದ ಘಟಕೀಕೃತ ಸಂಸ್ಕೃತಿಗಳು ಸಾರೂಪ್ಯವನ್ನು ಪಡೆಯುತ್ತಿರುವುದರಿಂದ ಈ ಸಮಾನತೆಯ ಅಂಶಗಳನ್ನು ಒಟ್ಟಾರೆಯಾಗಿ ಗಮನಿಸುತ್ತ ಇಡೀ ದ್ರಾವಿಡ ಸಂಸ್ಕೃತಿಯ ಪರಿಕಲ್ಪನೆಯನ್ನು ಕಟ್ಟಿಕೊಳ್ಳುವ ಅವಶ್ಯಕತೆ ಸನ್ನಿತವಾಗುತ್ತಿದೆ. ಈ ಎಲ್ಲ ಸಂಸ್ಕೃತಿಗಳನ್ನು ಅಖಂಡವಾಗಿ ಮತ್ತು ತೌಲನಿಕವಾಗಿ ಅಧ್ಯಯನಿಸುವ ಸಂದರ್ಭದಲ್ಲಿ ಅವುಗಳೆಲ್ಲಕ್ಕೂ ಸಮಾನವಾದ ತಾತ್ವಿಕ ಚೌಕಟ್ಟುಗಳನ್ನು ನಿರ್ಮಿಸಿಕೊಳ್ಳುವ ಮೂಲಕ ವಿಶಾಲ ನೆಲೆಯಲ್ಲಿ ನಮ್ಮ ಚಿಂತನೆಯ ಸೌಧವನ್ನು ಕಟ್ಟಬೇಕಾಗಿದೆ. ಈ ಹಿನ್ನೆಲೆಯಲ್ಲಿ ಭಿನ್ನ ಭಿನ್ನ ಸಂಸ್ಕೃತಿ ಘಟಕಗಳನ್ನು ಜೋಡಿಸಬಹುದಾದ ಅವುಗಳೊಳಗಿನ ಅನುರೂಪತೆಯನ್ನು ಸ್ಪಷ್ಟವಾಗಿ ಗುರುತಿಸಬಹುದಾದ ಒಂದು ತಾತ್ವಿಕ ಪರಿಕಲ್ಪನೆಯನ್ನು ನಾವು ಸೃಷ್ಟಿಸಿಕೊಳ್ಳಬೇಕಾಗಿದೆ. ವಿಶಾಲ ನೆಲೆಯ ಈ ತಾತ್ವಿಕ ಪರಿಕಲ್ಪನೆಯೇ ದ್ರಾವಿಡಶಾಸ್ತ್ರ.

ಮೇಲಿನ ಹಿನ್ನೆಲೆಯಲ್ಲಿ ನಮ್ಮ ವಿಶ್ವವಿದ್ಯಾಲಯದ ದ್ರಾವಿಡ ಅಧ್ಯಯನ ವಿಭಾಗವು ಒಂದೇ ಮೂಲದಿಂದ ಹೊರಟು ಭಿನ್ನ ಭಿನ್ನ ನೆಲೆಗಳನ್ನು ಸ್ಥಾಪಿಸಿಕೊಂಡರೂ ಮತ್ತೆ ಏಕಮುಖಿಯಾಗುವ ಆಂತರಿಕ ತುಡಿತ ಮತ್ತು ಸಾಂಸ್ಕೃತಿಕ ಆಶಯಗಳನ್ನು ಈ ಪರಿಕಲ್ಪನೆಗಳ ಮೂಲಕ ಜಿಜ್ಞಾಸೆಗೆ ಒಳಪಡಿಸುವ ಕಾರ್ಯವನ್ನು ದ್ರಾವಿಡಶಾಸ್ತ್ರ ಕೃತಿಯ ಮೂಲಕ ಪ್ರಾಯೋಗಿಕವಾಗಿ ಪ್ರಸ್ತುತಪಡಿಸುತ್ತಿದೆ. ದ್ರಾವಿಡ ಭಾಷೆಗಳ ಅಕ್ಷರ ವ್ಯವಸ್ಥೆಯಿಂದ ಹಿಡಿದು, ಅದರ ಪ್ರಧಾನ ಮತ್ತು ಉಪಭಾಷೆಗಳ ವೈಶಿಷ್ಟ್ಯಗಳನ್ನು, ಆರ್ಯ ದ್ರಾವಿಡರ ಪರಿಕಲ್ಪನೆಯ

ವಿಶ್ಲೇಷಣೆಯನ್ನು, ದ್ರಾವಿಡ ಸಂಸ್ಕೃತಿಯ ವಿಶಿಷ್ಟ ಮತ್ತು ಅನನ್ಯ ಆಯಾಮಗಳನ್ನು, ಈ ಸಂಸ್ಕೃತಿ ಚಿಂತನೆಯ ತಾತ್ವಿಕ ಹಿನ್ನೆಲೆಯನ್ನು, ಆರ್ಯ ದ್ರಾವಿಡ ಪರಿಕಲ್ಪನೆಯ ಸ್ವರೂಪವನ್ನು ಇಲ್ಲಿ ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿರುವುದು ಮಾತ್ರವಲ್ಲದೆ ದ್ರಾವಿಡ ಡೆಕ್ಕನ್ ದಕ್ಷಿಣ ಭಾರತ ಇವುಗಳ ಸಾರೂಪ್ಯ ಮತ್ತು ವಿಶೇಷತೆಗಳನ್ನು, ದ್ರಾವಿಡ ಜನಾಂಗ ಮತ್ತು ಸಂಸ್ಕೃತಿಗಳ ಅಧ್ಯಯನ ಸಾಹಸಿಗಳಾದ ಜರ್ಮನಿಯ ವಿದ್ವಾಂಸರನ್ನು, ದಕ್ಷಿಣ ಭಾರತದಲ್ಲಿ ನಡೆದ ಸಾಮಾಜಿಕ ಭಾಷಾವಿಜ್ಞಾನದ ಸಂಶೋಧನೆಯ ಸಾಧನೆ ಮತ್ತು ಸಾಧ್ಯತೆಗಳನ್ನು ಇಲ್ಲಿ ವಿವರಿಸಲಾಗಿದೆ. ಚೀನಾ ಯಾತ್ರಿಕನಾದ ಫಾಹಿಯಾನ್ ದಕ್ಷಿಣ ಸಾಮ್ರಾಜ್ಯವನ್ನು ಕಂಡ ಬಗೆ ಹಾಗೂ ದ್ರಾವಿಡ ದೇಶದ ವೇಮನ ಮುಂತಾದ ಅನುಭಾವಿಗಳ ಚಿಂತನೆಗಳಲ್ಲಿರುವ ವೈವಿಧ್ಯತೆಯಲ್ಲಿನ ಏಕತೆಯನ್ನು ವಿವೇಚಿಸಿರುವ ಬರಹಗಳು ಕೂಡ ಇಲ್ಲಿವೆ. ಇಲ್ಲಿನ ನಾಲ್ಕು ಲೇಖನಗಳು ಅನುವಾದಗಳಾಗಿದ್ದು, ಉಳಿದ ಏಳು ಲೇಖನಗಳು ಸ್ವತಂತ್ರ ಬರಹ ಗಳಾಗಿವೆ. ಕಥಾಕಥಿತ ನೆಲೆಯಲ್ಲಿ ಈ ದ್ರಾವಿಡ ಭಾಷಾ ಸಂಸ್ಕೃತಿಗಳ ಕೇವಲ ವಿವರಣೆಯನ್ನು ನೀಡದೆ ಅಥವಾ ಮಹತ್ವವನ್ನು ಉದ್ಘೋಷಿಸದೆ ನಿರ್ಭಾವುಕವಾದ ಸಾಧಾರಿತ ಚಿಂತನೆಗಳ ವಿಶಿಷ್ಟ ಚೌಕಟ್ಟಿನಲ್ಲಿ ಈ ಲೇಖನಗಳು ಮೂಡಿಬಂದಿವೆ. ದ್ರಾವಿಡ ಅಧ್ಯಯನಕ್ಕೆ ಈ ಸಂಪುಟದ ಲೇಖನಗಳು ವಿಶೇಷ ಆಯಾಮಗಳನ್ನು ಒದಗಿಸಿಕೊಡುತ್ತವೆ ಮತ್ತು ಪ್ರಬುದ್ಧವಾದ ಅಧ್ಯಯನ ಮತ್ತು ಆಲೋಚನೆಗಳ ಫಲವಾಗಿ ಈ ಲೇಖನಗಳು ಮೈದಳೆದಿರುವುದರಿಂದ ಇವು ಎತ್ತುವ ಪ್ರಶ್ನೆಗಳು, ಗುರುತಿಸಿರುವ ಹೊಸ ಅಂಶಗಳು ಈ ದಿಸೆಯಲ್ಲಿ ದ್ರಾವಿಡ ಸಂಸ್ಕೃತಿಯ ಹೊಸ ರೀತಿಯ ವಾಗ್ವಾದವನ್ನು ಹುಟ್ಟುಹಾಕಬಲ್ಲಷ್ಟು ಸಮರ್ಥವಾಗಿವೆ. ಸಂಪಾದಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರು ಈ ಕೃತಿಗೆ ಬರೆದಿರುವ ವಿಸ್ತಾರ ವಾದ ಪ್ರಸ್ತಾವನೆ ಅವರ ಆಳವಾದ ಅಧ್ಯಯನ ಮತ್ತು ಸೂಕ್ಷ್ಮವಾದ ಒಳನೋಟಗಳ ಪ್ರತೀಕವಾಗಿದ್ದು ಈ ಕೃತಿಯ ಮೌಲ್ಯವನ್ನು ಅಧಿಕಗೊಳಿಸಿದೆ. ಇಂಥದೊಂದು ಕೃತಿಯನ್ನು ದ್ರಾವಿಡ ಅಧ್ಯಯನ ವಿಭಾಗದ ಮೂಲಕ ದೊರಕಿಸಿಕೊಟ್ಟ ಸಂಪಾದಕರಿಗೆ ಮತ್ತು ಹೊಸ ರೀತಿಯ ಸಂಶೋಧನೆಯ ನೆಲೆಗಟ್ಟಿನ ಅಭ್ಯಾಸಪೂರ್ಣ ಲೇಖನಗಳನ್ನು ಬರೆದಿರುವ ಲೇಖಕರಿಗೆ ನನ್ನ ಅಭಿನಂದನೆಗಳು ಸಲ್ಲುತ್ತವೆ.

**ಡಾ. ಎಚ್.ಜೆ. ಲಕ್ಕಪ್ಪಗೌಡ**
ಕುಲಪತಿಯವರು

# ಸಂಪಾದಕನ ಮಾತು

## ಕಣ್ಣುಕಟ್ಟಿ ಕನ್ನಡಿಯ ತೋರುವಂತೆ

ಕನ್ನಡ ಸಾಂಸ್ಕೃತಿಕ ಇತಿಹಾಸದಲ್ಲಿ ಇಪ್ಪತ್ತನೆಯ ಶತಮಾನ ಒಂದು ಸುವರ್ಣ ಘಟ್ಟ. ಭಾಷೆ, ಛಂದಸ್ಸು, ಸಾಹಿತ್ಯ, ಲಲಿತಕಲೆ, ಶಾಸ್ತ್ರಸಾಹಿತ್ಯ ಇವೇ ಮುಂತಾದ ಪ್ರಕಾರಗಳಲ್ಲಿ ಕನ್ನಡವು ಪಡೆದಂಥ ಸಿದ್ಧಿ ಹಿಂದಿಲ್ಲ ಮುಂದಿಲ್ಲ. ಇದರ ಜತೆಗೆ ಬೇರೆ ಬೇರೆ ಭಾಷಾ ಸಾಹಿತ್ಯಗಳಿಂದ ಆದ ಆದಾನ-ಪ್ರದಾನಗಳು ಕನ್ನಡ ಸಂಸ್ಕೃತಿಗೆ ಕೋಡು ಮೂಡಿಸಿತು. ನಮ್ಮ ತಳಹದಿ ತಿಳಿಯಲು ಮೂಲದ ಬೇರುಗಳಿಗೆ ಹೋಗುವುದು ಸರಿಯಷ್ಟೆ. ಕನ್ನಡ ಸಂಸ್ಕೃತಿಯ ತಳಹದಿ ಅದರ ಆಕೃತಿ ಮತ್ತು ಆಶಯಗಳನ್ನು ನಾವು ತಿಳಿಯಬೇಕಾದರೆ ತಮಿಳು, ಮಲಯಾಳಂ, ತೆಲುಗು, ತುಳು ಜತೆಜತೆಗೆ ಮರಾಠಿ, ಭಾಷಾ ಸಾಹಿತ್ಯಗಳನ್ನು ಅರಿಯುವುದು ಅಗತ್ಯವಿದೆ. ಇಷ್ಟು ಮಾತ್ರವಲ್ಲ, ದ್ರಾವಿಡ ಸಂಸ್ಕೃತಿಯ ಉಪಭಾಷೆಗಳ ಅಧ್ಯಯನದ ಅಗತ್ಯವೂ ಇದೆ. ಇಪ್ಪತ್ತನೆಯ ಶತಮಾನವು ಹೀಗೇ ಹಲವು ಪ್ರಕಾರಗಳ, ಹಲವು ನೆಲೆಗಳ, ಹಲವು ತಾತ್ತ್ವಿಕ ಸಂಗತಿಗಳತ್ತ ಮುಖಕೊಟ್ಟು ನಿಂತಿತು. ಕನ್ನಡವು ಕನ್ನಡಿಯಾಗಬೇಕಾದರೆ ಕನ್ನಡ ಮಾತ್ರವಲ್ಲ, ತದಿತರ ಭಾಷಾಸಾಹಿತ್ಯಗಳ ಮೂಲಬೇರು ಗಳನ್ನು ತಿಳಿಯುವುದು ಅಗತ್ಯವೆಂಬ ಅಂಶಕ್ಕೆ ಒತ್ತು ನೀಡಿದೆ.

ಈಗ ನಾವು ದಕ್ಷಿಣಭಾರತದ ಸಾಂಸ್ಕೃತಿಕ ಇತಿಹಾಸದ ಪುನಾರಚನೆಯ ನೆಲೆಯಲ್ಲಿ ನಿಂತಿದ್ದೇವೆ. ಇದು ಅರ್ಥಾತ್ ದ್ರಾವಿಡ ಸಂಸ್ಕೃತಿಯ ಅಧ್ಯಯನವೂ ಆಗಿದೆ. ನಾವು 'ದ್ರಾವಿಡ' ಎಂಬ ಪರಿಭಾಷೆಯನ್ನು ಜಾನಾಂಗೀಯ ನೆಲೆಯಲ್ಲಿ ನೋಡಬೇಕಿಲ್ಲ. ಅದು ಆರ್ಯ ಮತ್ತು ದ್ರಾವಿಡ ಎಂಬ ಪೂರ್ವಕಲ್ಪಿತ ನೆಲೆಯಲ್ಲಿ ಹೇಗೋ ಹಿಂದೆ ನಿಂತಿದ್ದಿತು. ಈಗ ನಾವು ಅದರಿಂದ ಬಿಡುಗಡೆ ಪಡೆದಿದ್ದೇವೆ. ದ್ರಾವಿಡ ಸಂಸ್ಕೃತಿ ಎಂಬುದನ್ನು ನಾವು ವಿಶಾಲಾರ್ಥದಲ್ಲಿ ಆಧುನಿಕಾರ್ಥವಾಗಿ ಬಳಸುತ್ತಿದ್ದೇವೆ. ದ್ರಾವಿಡ ಸಂಸ್ಕೃತಿ ಎಂಬುದು ಎಲ್ಲ ಬಗೆಯ ದಕ್ಷಿಣ ಭಾರತದ ಮೂಲ ರೂಪಿಕೆಗಳನ್ನು ಹೊಂದಿದೆ. ದ್ರಾವಿಡ ಎಂಬುದನ್ನು ತಮಿಳು ಎಂದು ರಾಜಕೀಯ ನೆಲೆಯಲ್ಲಿ ವಿವರಿಸಿಕೊಳ್ಳುವ ಯತ್ನಗಳು ಹಿಂದೆ ನಡೆದುವು. ನಮ್ಮ ಹೊಸ ತಿಳುವಳಿಕೆಯ ಬೆಳಕಿನಲ್ಲಿ ಕೇವಲ ತಮಿಳು ಭಾಷಾ ಸಾಹಿತ್ಯಕ್ಕೆ ಮಾತ್ರ ಸಂಬಂಧಿಸದೆ ಅದು ವ್ಯಾಪಕಾರ್ಥದಲ್ಲಿ ಕನ್ನಡವೂ ಸೇರಿಕೊಂಡಂತೆ ತೆಲುಗು, ತುಳು, ಮಲಯಾಳಂ ಮತ್ತು ತದಿತರ ಉಪಭಾಷೆಗಳಿಗೂ ಉಪಭಾಷೆಯ ಸಂಸ್ಕೃತಿಗೂ ಸೇರಿದೆ. ದುರದೃಷ್ಟವಶಾತ್ 'ದ್ರಾವಿಡ' ಎಂಬುದು ನಮ್ಮ ಪ್ರಾರಂಭಿಕ ಸಂಸ್ಕೃತಿ ಅಧ್ಯಯನಗಳ

ನೆಲೆಯಲ್ಲಿ ಕೇವಲ ಏಕಸಂಸ್ಕೃತಿ ಘಟಕವೆಂದೇ ತಿಳಿಯಲಾಗಿತ್ತು. ಎಂ.ಬಿ.ಎಮಿನೊ ಮತ್ತು ಟಿ.ಬರೋ ಅವರು ಸಿದ್ಧಪಡಿಸಿರುವ 'ಡಿಇಡಿ' ಕೋಶವು ಈ ಅಪಪ್ರಥೆಯನ್ನು ನಿರಾಕರಿಸಿತು. ಕಿಟೆಲ್ ನಿಘಂಟು ಕೂಡ ಇದನ್ನು ಉಚ್ಚಾಟಿಸಿದೆ. ಈ ಸಂದರ್ಭದಲ್ಲೆ ನಾವು ಒಂದು ನೆನಪನ್ನು ಮಾಡಿಕೊಳ್ಳಬಹುದು, ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದಲ್ಲಿ ಸಂಸ್ಕೃತವೇ ಎಲ್ಲದಕ್ಕೂ. 'ತಾಯಿ' ಎಂಬ ಗ್ರಹಿಕೆಯಲ್ಲಿ ತಿಳಿದಂತೆ; ತಮಿಳು ಭಾಷಾ ಸಾಹಿತ್ಯವೇ ಉಳಿದವೆಲ್ಲಕ್ಕೂ ಮೂಲ ಎಂಬ ಗ್ರಹಿಕೆ ಇತ್ತು.

ಬಿ.ಎಂ.ಶ್ರೀ, ಶಂಬಾ ಜೋಶಿ, ಗೋವಿಂದ ಪೈ, ಆರ್. ನರಸಿಂಹಾಚಾರ್ಯ ಮೊದಲಾದವರು ತಮ್ಮತಮ್ಮ ಬರೆಹಗಳಲ್ಲಿ ಇದಕ್ಕೆ ಪ್ರತಿಶೋಧಾತ್ಮಕವಾಗಿ ಕೆಲವೊಮ್ಮೆ, ಪುನಾರಚನೆಯ ನೆಲೆಯಲ್ಲಿ ಮಗುದೊಮ್ಮೆ ವಿವರಿಸಿಕೊಂಡದ್ದುಂಟು. ನಾವೀಗ 'ತಮಿಳು' ಅರ್ಥಾತ್ ದ್ರಾವಿಡ ಎಂಬ ರಾಜಕೀಯ ಪರಿಭಾಷೆಯ ನೆಲೆಗಳಿಂದ ಹೊರಬಂದಿದ್ದೇವೆ. ಈ ಹೊತ್ತು ನಡೆಯುತ್ತಿರುವ 'ದ್ರಾವಿಡ ಅಧ್ಯಯನ' ಎಂಬುದು ವಿಶಾಲವೂ ವ್ಯಾಪಕವೂ ವಿಶಿಷ್ಟವೂ ಆದ ಚಹರೆಗಳನ್ನು ಹೊತ್ತಿದೆ. ಈ ಚಹರೆಗಳು ಭಾಷೆ ಮತ್ತು ಸಂಸ್ಕೃತಿಯ ಒಳಗಡೆ ವಿರೋಧೀ ನೆಲೆಗಳನ್ನು ಸೃಜಿಸುತ್ತಿಲ್ಲ. ಬದಲಾಗಿ ಅದು ಪರಸ್ಪರ ಕಂಡುಕೊಳ್ಳುವ, ಕೂಡಿಕೊಳ್ಳುವ, ತಿಳಿದುಕೊಳ್ಳುವ, ವಿಸ್ತರಣೆಗೊಳ್ಳುವ ಮಾದರಿಗಳನ್ನು ಹೊತ್ತಿದೆ. ಇದು ಒಂದು ಬಗೆಯಲ್ಲಿ ಶುಭಸಂಗತಿಯೇ ಹೌದು!! ದ್ರಾವಿಡ ಸಂಸ್ಕೃತಿ ಅಧ್ಯಯನವು ಒಂದು ರೀತಿಯಲ್ಲಿ ವಿಸ್ತರಣಾತ್ಮಕ ಅಧ್ಯಯನವೂ ಹೌದು, ಅದೇ ಹೊತ್ತಿಗೆ ಕಟ್ಟಿಕೊಂಡ ಕಲ್ಪಿತ ಚರಿತ್ರೆಗಳ ಮುರಿಯುವಿಕೆಯೂ ಹೌದು! ಕನ್ನಡ, ತಮಿಳು ಮತ್ತು ತೆಲುಗು ಸಾಹಿತ್ಯಗಳಲ್ಲಿರುವ 'ದೇಸಿಕ್ರಮ'ಗಳ ತುಲನಾತ್ಮಕ ಅಭ್ಯಾಸ ಮಾಡಿದರೆ, ಈ ಮುರಿಯುವಿಕೆ ಸಾಹಿತ್ಯದ ನೆಲೆಯಲ್ಲಿ ಸದಾ ನಡೆದಿರುವುದನ್ನು ಕಾಣುತ್ತೇವೆ.

ಮನುಷ್ಯ ಚರಿತ್ರೆಯನ್ನು ನಿರ್ಮಿಸುತ್ತಿಲ್ಲ. ಅವನು ಅದನ್ನು ನಿರ್ಮಿಸಲಾರ. ಚರಿತ್ರೆಯ ನಿರ್ಮಾಣ ಸಂಸ್ಕೃತಿಗೆ ಸೇರಿದ್ದು. ಚರಿತ್ರೆ ಕಲ್ಪಿತ ಕಟ್ಟಡವಲ್ಲ ಎಂಬುದು ಇದಕ್ಕಾಗಿಯೇ. ಭಾಷೆಯ ಚರಿತ್ರೆ, ಮನುಷ್ಯ ಚರಿತ್ರೆ, ಸಾಹಿತ್ಯ ಚರಿತ್ರೆ ಎಂಬುದು ಹಲವು ಎಳೆಗಳ ಕೂಡಾಟವೂ ಹೌದು, ಮುರಿದಾಟವೂ ಹೌದು. ಕೆಡವದೆ ಹೊಸದನ್ನು ಕಟ್ಟುವುದು ಅಸಾಧ್ಯವಷ್ಟೆ. 'ದ್ರಾವಿಡ' ಎಂಬ ಪರಿಕಲ್ಪನೆಯು ಹೀಗೆ ಮುರಿದುಕಟ್ಟಿರುವ ಹೊಸ ಕಟ್ಟಡವೇ ಆಗಿದೆ. ಒಂದು ಸಾಂಸ್ಕೃತಿಕ ಇತಿಹಾಸವು ಕಾಲಕಾಲಕ್ಕೆ ಪರಿಕಲ್ಪನೆಗಳನ್ನು ತನ್ನ ಅಗತ್ಯಕ್ಕೆ ತಕ್ಕಂತೆ, ಸಮಾಜಕ್ಕೆ ತಕ್ಕಂತೆ, ಮುರಿದುಕಟ್ಟುವ ಕ್ರಿಯೆಯಲ್ಲಿ ಸದಾ ತೊಡಗುತ್ತದೆ. ತಮಿಳಿನ ನಾಯನ್ಮಾರರು, ಆಳ್ವಾರರು, ತೆಲುಗಿನ ತತ್ತ್ವಪದಕಾರರು, ಕನ್ನಡದ ವಚನಕಾರರು ಹೀಗೆ ಇವರೆಲ್ಲ ಮುರಿದುಕಟ್ಟುವ ಕ್ರಿಯೆಯಲ್ಲಿ ತೊಡಗಿದವರೇ. ಹೀಗೆ ಮುರಿಯುವ ಸ್ವಾತಂತ್ರ್ಯ ಮಾರ್ಗಕ್ಕಿಲ್ಲ. ಆದರೆ, ಮುರಿದು ಕಟ್ಟುವ ಸ್ವಾತಂತ್ರ್ಯ ದೇಸಿ ಕ್ರಮಕ್ಕುಂಟು. ಈ ದೇಸಿಯು ಅವಧೂತ, ಸಿದ್ಧ, ಭೈರವ, ಗೋರಕ್ಷ ಈ ಬಗೆಯ ಸಾಂಸ್ಕೃತಿಕ ಶಕ್ತಿವಲಯದ ರಚನೆಯನ್ನು ಮಾಡುತ್ತದೆ. ಈ ರಚನೆಗಳು ಪುನಾರಚನೆಗಳಾಗಿ, ಕಲ್ಪಿತ ಚರಿತೆಗಳನ್ನು ಮುರಿಯುವ ಹಂಬಲದಲ್ಲಿ ತೊಡಗುತ್ತವೆ.

ನಾವೀಗ ಇಪ್ಪತ್ತೊಂದನೆಯ ಶತಮಾನದಲ್ಲಿ ಇದ್ದೇವೆ. ನಮ್ಮ ಅಧ್ಯಯನಗಳು ಕೇವಲ ಪ್ರದರ್ಶನಾತ್ಮಕವಾಗದೆ, ನಮ್ಮ ಒಡಲುರಿಗೆ ಬೇಕಾದ ಆಹಾರವನ್ನು, ರಕ್ತವನ್ನು ಕೂಡಿಕಟ್ಟುವ ಅಧ್ಯಯನಗಳಿಂದಲೇ ಪರಿಚಯಗೊಳಿಸಿಕೊಳ್ಳಬೇಕಾಗಿದೆ. ಇಷ್ಟು ಮಾತ್ರವಲ್ಲ, ಏಕರೂಪೀ ಘಟಕಗಳ ಮಾದರಿಯನ್ನು ಮುರಿದು ಬಹುರೂಪೀ ಮಾದರಿಗಳಲ್ಲಿ ಮುನ್ನಡೆಯಬೇಕಾಗಿದೆ. ಆಗ ಭಾಷೆ, ಸಾಹಿತ್ಯ, ಲಲಿತಕಲೆ, ಮಾನವಶಾಸ್ತ್ರ, ವಂಶಶಾಸ್ತ್ರ, ಖಗೋಳ, ಭೂಗೋಳಗಳು ಬೇರೆ ಬೇರೆ ಎನ್ನಿಸದೆ ಅವು ಒಂದರೊಳಗೊಂದು ಸೇರಿಕೊಂಡು ದೀಪಗಳಾಗಿ, ಕನ್ನಡಿಗಳಾಗಿ ಸಂಸ್ಕೃತಿಯನ್ನು ಪೋಷಿಸುತ್ತವೆ; ನಮಗೆ ದಾರಿಗಳಾಗುತ್ತವೆ.

ಕನ್ನಡ, ತಮಿಳು, ಮಲಯಾಳಂ, ತೆಲುಗು, ತುಳು ಮತ್ತು ದ್ರಾವಿಡದ ಇತರೆ ಉಪಭಾಷೆಗಳು ಕೇವಲ ಚಾರಿತ್ರಿಕ ಗತಿಯನ್ನು ಮಾತ್ರ ಅನುಸರಿಸದೆ, ಅವು ಒಂದರೊಳ ಗೊಂದು ಅನಾದಿಕಾಲದಿಂದ ಮಾಡಿಕೊಂಡ ಕೊಡುಕೊಳ್ಳುವಿಕೆಗಳ ಚೈತನ್ಯದಲ್ಲಿ ಮುಳುಗಿ ದ್ದುವು. ಅವು ನಿಜಾರ್ಥದಲ್ಲಿ ಪೋಷ್ಯ ಪೋಷಕ ಭಾವವನ್ನು ಹೊತ್ತಿದ್ದುವು. ನಾವೀಗ ಕಟ್ಟಿಕೊಳ್ಳಲು ಬಯಸುತ್ತಿರುವ ಸಾಂಸ್ಕೃತಿಕ ಜಗತ್ತು ಈ ಮಾದರಿಯ ಮುಂದುವರಿಕೆಯೇ ಆಗಬೇಕಾಗಿದೆ. ನಾವು ನಿನ್ನೆಗಳನ್ನು ತಿಳಿಯದೆ ಇಂದಿನ ಗತಿಯನ್ನೂ ನಾಳಿನ ದಾರಿಯನ್ನೂ ಹೇಗೆ ತಿಳಿಯಬಲ್ಲೆವು? ಹೊಸ ದಾರಿಗಳ ನಿರ್ಮಾಣಕ್ಕೆ ಹೊಸ ಪರಿಕ್ರಮಗಳು ಬೇಕು. ಆದರೆ, ಹಳೆಯ ಉಪಕರಣಗಳಿಗೆ ಹೊಸ ಆಶಯವನ್ನು ತಂದುಕೊಳ್ಳುವುದೂ ಅಗತ್ಯವಿದೆ. ನಾವು ಹೊಸ ಉಪಕ್ರಮಗಳನ್ನೂ ಉಪಕರಣಗಳನ್ನೂ ದೂರ ತಳ್ಳಿಲ್ಲ. ಆದರೆ, ಅವುಗಳನ್ನು ಬಳಸಿಕೊಳ್ಳಬೇಕಾದ ಮಾರ್ಗೋಪಾಯಗಳನ್ನು ಹುಡುಕಿಕೊಳ್ಳುವ ಅಗತ್ಯವಿದೆ. ಬಸವಣ್ಣ ತನ್ನೊಂದು ವಚನದಲ್ಲಿ ಈ ಆಶಯವನ್ನು 'ಕಣ್ಣ ಕಟ್ಟಿ ಕನ್ನಡಿಯ ತೋರುವಂತೆ' ಎಂದು ವಿಡಂಬಿಸಿದ್ದಾನೆ. ಈ ಮಾತು ವ್ಯಕ್ತಿಗೆ ಹೇಗೆ ಅನ್ವಯವೋ ಸಮಾಜಕ್ಕೂ ಸಮಾಜ ರೂಪಿಸಿರುವ ಭಾಷೆಗೂ ಆ ಭಾಷೆಯ ಮೂಲಕ ರೂಪಕಗೊಳ್ಳುತ್ತಿರುವ ತಾತ್ತ್ವಿಕವಿಶ್ವಕ್ಕೂ ಅನ್ವಯವೇ. ಪ್ರತಿಯೊಬ್ಬರು ಭಾಷೆ ಮತ್ತು ಸಂಸ್ಕತಿಯ ಕನ್ನಡಿಯಲ್ಲಿ ತಮ್ಮನ್ನು ತಾವು ನೋಡಿಕೊಂಡೇ ಮುಂದುವರಿಯುತ್ತಾರೆ. ಕನ್ನಡಿಯಿಲ್ಲದೆ ಮುಖವಿಲ್ಲ, ಮನಸ್ಸಿಲ್ಲ, ಭಾಷೆಯಿಲ್ಲ, ಸಂಸ್ಕೃತಿಯೂ ಇಲ್ಲ. ಇಂಥ ಕನ್ನಡಿಗಳು ಕಣ್ಣ ಕಟ್ಟಿಕೊಂಡ ಆಶಯಗಳಾಗಿ ಇರಕೂಡದು ಅಷ್ಟೇ. ಆದರೆ, ಅವು ಅವರ ಜಗತ್ತನ್ನು ವಿಸ್ತರಣೆಗೊಳಿಸುತ್ತ ಹೋಗಬೇಕು.

ಈಗಾಗಲೇ ಹಳತಾದ ಪರಿಕಲ್ಪನೆಗಳನ್ನು ಮೂಲೆಯಲ್ಲಿಟ್ಟು, ಹೊಸ ಪರಿಕಲ್ಪನೆಗಳ, ಆಂತರಿಕ ವಿನ್ಯಾಸಗಳ ಮೂಲಕ 'ದ್ರಾವಿಡವಿಶ್ವ'ವನ್ನು ಅದರೊಳಗಿನ ನೂರಾರು, ಸಹಸ್ರಾರು ಅಗಮ್ಯ ಮುಖಗಳನ್ನು ಹುಡುಕುವ ಧೈರ್ಯಕ್ಕೆ ಕೈಯಿಕ್ಕಬೇಕಾಗಿದೆ. ಭಾರತೀಯ ಮಟ್ಟದಲ್ಲಿ ದ್ರಾವಿಡವು ಹಳೆಯ-ಪಳೆಯ ಮುಖವೇನೋ ಹೌದು. ಆದರೆ, ನಮಗದು ಕಾಂಡಪಟವಾಗಿ ಪರಿಣಮಿಸುತ್ತಿದೆ. ನಾವು ಈಗ ತೆರೆಯನ್ನು ಸರಿಸಿ ಕೂಡುವ ನೆಲೆಗೆ ನಮ್ಮನ್ನು ನಾವೇ ಒಯ್ಯುಕೊಳ್ಳಬೇಕಾಗಿದೆ. ಹೊಸ ಅಧ್ಯಯನಗಳು ಆಗ ಪ್ರದರ್ಶನಾತ್ಮಕವಾಗದೆ, ನಮ್ಮ ಸಹಜೀವನದ ಭಾಗವೇ ಆಗುತ್ತವೆ.

೨

ದ್ರಾವಿಡ ಅಧ್ಯಯನಗಳ ಇತಿಹಾಸಕ್ಕೆ ಎರಡು ನೂರಕ್ಕೂ ದೀರ್ಘಕಾಲದ ಇತಿಹಾಸವುಂಟು. ಈ ಇತಿಹಾಸ ಆರಂಭವಾಗುವುದು ವಸಾಹತುಶಾಹಿ ಕಾಲಘಟ್ಟದಲ್ಲೆಂಬುದು ಕುತೂಹಲಕರ ವಿಷಯ. ಭಾರತೀಯ ಪಂಡಿತರು ಸಂಸ್ಕೃತ ಆಕರಗಳ ಮೂಲಕ ದಕ್ಷಿಣ ಭಾರತ ಅಥವ ದಖ್ಖನ್ ಚರಿತ್ರೆಯ ಆಕೃತಿಯನ್ನು ಕಟ್ಟುತ್ತಿದ್ದರೆ, ಆಯಾಯ ದ್ರಾವಿಡ ಪ್ರದೇಶಗಳ ದೇಸೀ ಪಂಡಿತರು ತಮ್ಮ ತಮ್ಮ ಸ್ಥಳೀಯ ಚರಿತ್ರೆಯ ಮೂಲಕ ದ್ರಾವಿಡ ಇತಿಹಾಸದ ಆಕೃತಿಯನ್ನು ಕಟ್ಟುತ್ತಿದ್ದರು. ಈ ಅಂಶವು ಅಧ್ಯಯನಕ್ಕೆ ಹೊಸ ಬಾಗಿಲನ್ನು ತೆರೆಯುತ್ತಿತ್ತು. ಸ್ಥಳೀಯ ಲಭ್ಯವಿವರಗಳೆಂದರೆ: ಕಾವ್ಯ, ನಾಟಕ, ಆಚರಣೆ, ಐತಿಹ್ಯಗಳು ಆಯಾ ಪ್ರದೇಶಗಳ ವೈಶಿಷ್ಟ್ಯವನ್ನು ಒಳಗೊಂಡಿರುತ್ತವಷ್ಟೆ. ಇವುಗಳು ಆಯಾ ಪ್ರದೇಶಗಳ ದೇಸೀ ಸಂಸ್ಕೃತಿಯ ನಿರ್ವಚನಕ್ಕೆ ತೊಡಗುತ್ತವೆ. ಕರ್ನಾಟಕ, ತಮಿಳುನಾಡು, ಕೇರಳ, ಆಂಧ್ರ, ತುಳು ಮತ್ತು ದಕ್ಷಿಣ ಮಹಾರಾಷ್ಟ್ರಗಳು ತಮ್ಮ ಅಸ್ಮಿತತೆಯನ್ನು ಹುಡುಕಿಕೊಳ್ಳುತ್ತಿದ್ದ ಪರಿಯೂ ಇದೇ ಆಗಿತ್ತು. ದೇಸೀ ಎಂಬುದು ಅವರ ಮನೆಯ ಹಿತ್ತಿಲು ಮತ್ತು ಜಗುಲಿ: ಊರಿನ ತೋಪು, ಊರ ಮುಂದಿನ ಗುಡಿ. ಇವು ಒಂದು ದೇಸೀ ಸಂಸ್ಕೃತಿಯ ಗ್ರಾಮೀಣ ರೂಪಕಗಳಾಗಿದ್ದುವು. ಇವು ದಕ್ಷಿಣ ಭಾರತಕ್ಕೆ ಸಮಾನವಾದ ರೂಪಕಗಳೇ ಸರಿ. ದಖ್ಖನ್-ದಕ್ಷಿಣ ಭಾರತದ ಒಟ್ಟು ನೈಸರ್ಗಿಕ-ಗ್ರಾಮೀಣರೂಪ ಇದಕ್ಕಿಂತ ಭಿನ್ನವಲ್ಲ. ಊರೊಳಗಣ ಜಗತ್ತನ್ನು ಗುಡಿ ಪ್ರತಿಮಿಸುತ್ತಿದ್ದರೆ ಕುಟುಂಬದೊಳಗಣ ಜಗತ್ತನ್ನು ಹಿತ್ತಿಲು ಹಾಗೂ ಮನೆಮುಂದಿನ ಜಗುಲಿಗಳು ಪ್ರತಿನಿಧಿಸುತ್ತಿದ್ದುವು. ಸೀಮೆಯೊಳಗಣ ಜಗತ್ತನ್ನು ಊರ ಹೊರಗಿನ 'ತೋಪು' ನಿರ್ಧರಿಸುವುದನ್ನು ನಾವು ಪ್ರಮುಖವಾಗಿ ಇಲ್ಲಿ ಗಮನಿಸಬೇಕಾಗಿದೆ. ಒಂದು ದೇಸೀಜಗತ್ತು ತೋಪು, ಊರಗುಡಿ, ಹಿತ್ತಿಲು ಮತ್ತು ಜಗುಲಿಗಳನ್ನು ಬಿಟ್ಟು ಬದುಕುವುದಿಲ್ಲ. ಇವು ಸಾಂಸ್ಕೃತಿಕ ರೂಪಕಗಳೇ ಸರಿ. ಈ ರೂಪಕಗಳ ಜತೆ ಜನರು ಬದುಕುತ್ತಿದ್ದರು. ಅವರ ಆಸೆ-ಅಪೇಕ್ಷೆಗಳು, ನೋಟ-ಕಾಣ್ಕೆಗಳು, ನಡೆ-ನುಡಿಗಳು ಈ ನಾಲ್ಕು ರೂಪಕಗಳು ವ್ಯಂಜಿಸುತ್ತಿದ್ದುವು.

ದಕ್ಷಿಣ ಭಾರತದ ಅಧ್ಯಯನವನ್ನು ಮಾಡುವ ನಮ್ಮ ಚರಿತ್ರಕಾರರು, ಜನಾಂಗದ ವಿವರಗಳನ್ನು, ಆಚರಣೆಯ ವಿವರಗಳನ್ನು ಸಂಸ್ಕೃತಿ ಸಾಮಗ್ರಿಗಳನ್ನು ತಮ್ಮ ವ್ಯಾಖ್ಯಾನಕ್ಕೆ ಬಳಸಿಕೊಳ್ಳುತ್ತಾರೆ. ಅದೇ ನಮ್ಮ ಸಂಸ್ಕೃತಿಶಾಸ್ತ್ರಜ್ಞರು, ಕಥೆ, ಹಾಡು, ಆಚರಣೆ, ಮತೀಯ ವಿವರಗಳನ್ನು ಪಡೆದು ಆ ಮೂಲಕ ಸಂಸ್ಕೃತಿ ವ್ಯಾಖ್ಯಾನಕ್ಕೆ ತೊಡಗುತ್ತಾರೆ. ಸಮಾಜಶಾಸ್ತ್ರಜ್ಞರಾದರೊ ಚಳುವಳಿ, ಬದಲಾದ ಸಾಮಾಜಿಕ ಸ್ಥಿತಿಗತಿಗಳಿಗೆ ಕಾರಣವಾದ ಆರ್ಥಿಕ ಏರುಪೇರುಗಳನ್ನು ಹಿಡಿದು ತಮ್ಮ ವ್ಯಾಖ್ಯಾನಕ್ಕೆ ಬಳಸಿಕೊಳ್ಳುತ್ತಾರೆ. ಇದು ಎಲ್ಲ ಜ್ಞಾನ ಶಿಸ್ತುಗಳಿಗೆ ಸಂಬಂಧಿಸಿದ ಅಧ್ಯಯನ ಕ್ರಮಗಳಾಗಿವೆ.

ಆದರೆ, ಈ ಅಧ್ಯಯನ ಕ್ರಮಗಳು ಒಂದು ನಿರ್ದಿಷ್ಟ ಚೌಕಟ್ಟಿನ ಆಕೃತಿಯಲ್ಲೆ ಸುತ್ತಾಡುತ್ತವೆ. ಈ ಬಗೆಯ ಅಧ್ಯಯನ ಕ್ರಮಗಳು ನೀಡುವ ವಿವರಗಳು ಹೆಚ್ಚು ತಾರ್ಕಿಕವೂ

ಚಾರಿತ್ರಿಕವೂ ಆದ ನೆಲೆಗಳ ಜತೆ ಸಂಬಂಧವನ್ನು ಹೊಂದಿರುತ್ತವೆ. ಈ ಬಗೆಯ ನಿರ್ದಿಷ್ಟ ಕ್ರಮಗಳು ಅಧ್ಯಯನದ ಹಿಂದೆ ವಸಾಹತುಶಾಹಿ ಹುಟ್ಟಿಸಿದ ಶೈಕ್ಷಣಿಕ ತರ್ಕಗಳು ಹೆಚ್ಚು ಕೆಲಸ ಮಾಡುತ್ತಿರುತ್ತವೆ. ಇವೆಲ್ಲವೂ ಆಯಾ ಶಾಸ್ತ್ರಗಳ ನಿಶ್ಚಿತ ಚೌಕಟ್ಟು ಹಾಗೂ ಬಂಧಗಳನ್ನು ಅವಲಂಬಿಸಿವೆ. ಈ ನಿಶ್ಚಿತ ಚೌಕಟ್ಟುಗಳು ಕೇವಲ ನಿಶ್ಚಿತ ಆಶಯವನ್ನು ಮಾತ್ರ ಹೊರತರಬಲ್ಲುವೆಂಬ ಅಂಶವನ್ನು ಈವರೆಗಿನ ಅಧ್ಯಯನಗಳು ಹೇಳುತ್ತಿವೆ. ಕೆಲವು ಅಧ್ಯಯನಗಳು ಇವಕ್ಕೆ ಅಪವಾದಗಳೆನಿಸಿವೆ.

ದಕ್ಷಿಣ ಭಾರತ ಅಧ್ಯಯನವನ್ನು ತೋಪು, ಹಿತ್ತಿಲು, ಊರಗುಡಿ ಮತ್ತು ಜಗುಲಿಗಳೆಂಬ ಸಾಂಸ್ಕೃತಿಕ ಮುಖ್ಯ ಪ್ರತೀಕಗಳ ಜತೆ ವ್ಯಾಖ್ಯಾನಿಸಿದರೆ ಹೇಗೆ? ಈ ಪ್ರಶ್ನೆಯು ನಮ್ಮ ಪ್ರತೀಕಗಳ ಮೂಲಕವೇ ನಮ್ಮ ಒಳಸಂಸ್ಕೃತಿಯ ನೇಯ್ಗೆಯನ್ನು ತಿಳಿಯಲು ಸಾಧ್ಯವೆಂಬ ಆಸೆ ನಮ್ಮ ಎದುರಿಗಿದೆ. ಈ ಹೊತ್ತಿನ ಜಾಗತೀಕರಣ ಈ ಹೊತ್ತಿನದಲ್ಲ, ಇದು ಬ್ರಿಟಿಷ್ ವಸಾಹತುಶಾಹಿ ಪ್ರಾರಂಭವಾದ ತಕ್ಷಣವೇ ಒಳಕ್ಕೆ ಬಂದಿದೆ. ಅದು ನಮ್ಮ ಹೆಗಲಿಗೆ ಏರಿ ನಾಲ್ಕು ಶತಮಾನಗಳು ಕಳೆದು ಹೋಗಿವೆ. ಈ ನಾಲ್ಕು ಶತಮಾನಗಳಲ್ಲಿ ಹಲವಾರು ಶಾಸ್ತ್ರವಿಧಾನಗಳು ಚಾಲ್ತಿಗೆ ಬಂದಿವೆ. ಅವು ಅಲ್ಲಲ್ಲೆ ಮುರುಟಿಕೊಂಡಿವೆ. ಈ 'ಜಾಗತೀಕರಣ'ವೆಂಬ ರಾಕ್ಷಸ ಗಿಡ ಕಂಡೂ ಕಾಣದಂತೆ, ಕೇಳಿಸಿಯೂ ಕೇಳದಂತೆ, ಸ್ಪರ್ಶಿಯೂ ಸ್ಪರ್ಶಿಸದಂತೆ ನಮ್ಮ ಹೆಗಲಿಗೆ ಏರಿಕೂತಿದೆ. ನಾವು ಇದನ್ನು ಕಿತ್ತುಹಾಕಬೇಕು. ಆದರೆ, ಕೀಳಬೇಕಾದ 'ಪ್ರಮೇಯವಿಧಾನ'ಗಳು ನಮ್ಮೊಡನೆ ಇಲ್ಲ, ಅವು ಇಂದು ನಾಶವಾಗಿವೆ. ಆದರೆ, ನಿನ್ನೆ ಇದ್ದ ಈ ಬಗೆಯ ಪ್ರತೀಕಗಳು ಪ್ರಾಚೀನ ಮತ್ತು ಮಧ್ಯಕಾಲೀನ ದಕ್ಷಿಣ ಭಾರತದ ತಾತ್ವಿಕ ಚರಿತ್ರೆ ತಿಳಿಯಲು ಹೊಸ ರೂಪಕಗಳ ಜತೆ, ಹೊಸ ಪ್ರತೀಕಗಳ ಜತೆ ನಾವು ಇಂದು ಕೈಗೊಡಿಸಬೇಕಾಗಿದೆ. ಇವು ಭಾಷಿಕವಾಗಿ ಸ್ಥಿರವಾಗಿದ್ದರೂ ಅವು ಒಳಗೆ ಚಲನೆಯ ನೆಲೆಯನ್ನು ಸದಾ ಪಡೆದಿವೆ. 'ತೋಪು' ಎಂಬುದು ಗ್ರಾಮವನ್ನು ವ್ಯಾಖ್ಯಾನಿಸಿಕೊಳ್ಳಲು ಇರುವ ಮುಖ್ಯ ರಹದಾರಿ ಎಂಬ ನಮ್ರ ತಿಳಿವಳಿಕೆ ನನ್ನದು. ಒಂದು ಕಾವ್ಯ, ಒಂದು ಕತೆ, ಒಂದು ಕಾದಂಬರಿ ಈ ತೋಪಿನ ಪ್ರತೀಕದ ಮೂಲಕವೇ ಒಂದು ಪ್ರದೇಶದ ಸಾಂಸ್ಕೃತಿಕ ಸಂಗತಿಗಳನ್ನು ತೆರೆಯುತ್ತ ಹೋಗುತ್ತದೆ. ಚರಿತ್ರೆಯ ಪುನರ್‌ನಿರ್ಮಾಣ ಕ್ರಮವೆಂಬುದು ಹೀಗೆ ಚರಿತ್ರೆಯ ಸಂಗತಿಗಳ ಜತೆ ಸೇರುವಂಥದ್ದು.

ನಾವು ಇಂದು ಒಂದು ಬಗೆಯ ಅಧ್ಯಯನ ಕ್ರಮಗಳಿಗೆ ಒಳಗಾಗಿದ್ದೇವೆ. ಇದು ಪೂರ್ವಕಲ್ಪಿತ ಪ್ರವೇಶದಲ್ಲಿ ಹುದುಗಿಹೋಗಿರುವ ಕಥೆಯಾಗಿದೆ. ಈ ಕಥಾನಕದಿಂದ ನಾವು ಇಂದು ಹೊರಬರಬೇಕಾಗಿದೆ. ಆದರೆ, ಹೊರಬರುವುದು ಹೇಗೆಂಬುದೇ ಈಗಿರುವ ಪ್ರಶ್ನೆ. ಈ ಪ್ರಶ್ನೆಗೆ ನಾವು ಸ್ಪಷ್ಟ ಉತ್ತರ ಕಂಡುಕೊಳ್ಳದೆ ಇದ್ದರೆ, ಇತ್ತ ಜಾಗತೀಕರಣವೆಂಬ ರಾಕ್ಷಸನನ್ನು ಕಿತ್ತು ಒಗೆಯುವುದಾದರೂ ಹೇಗೆ ಹೇಳಿ!

ದಕ್ಷಿಣ ಭಾರತ, ದಖ್ಖಿನ್ ಪ್ರದೇಶ, ದ್ರಾವಿಡ ಪ್ರದೇಶ ಈ ಬಗೆಯ ಮಾತುಗಳು ಕೇವಲ ಅಧ್ಯಯನದ ಶಿಸ್ತುಗಳು ಮಾತ್ರವಲ್ಲ. ಒಟ್ಟು ಸಮುದಾಯದ, ಒಟ್ಟು ಸಮಾಜದ,

ಒಟ್ಟು ಸಾಂಸ್ಕೃತಿಕ ಘಟಕಗಳ ಏರು-ಇಳುವುಗಳ ಪ್ರಶ್ನೆಯಾಗಿದೆ. ಇಷ್ಟು ಮಾತ್ರವಲ್ಲ, ಆತಂಕಗಳ ಆಚೆ ನಾವು ಸಾಗಬೇಕಾದ ಹಾದಿಯನ್ನು ಕುರಿತು ಇವು ಹೇಳುತ್ತಿವೆ. ಈ ಸಂಕಟವು ಆರ್ಥಿಕ, ರಾಜಕೀಯ, ಸಾಮಾಜಿಕ ವಿಪ್ಲವ ಹಾಗೂ ತಳ್ಳಾಟಗಳಲ್ಲಿ ನುಗ್ಗುನುಸಿಯಾಗಕೂಡದು ಅಷ್ಟೆ. 'ದ್ರಾವಿಡ ಅಧ್ಯಯನ' ಎಂಬ ಅಸ್ತಿತ್ವ ಗೊಳ್ಳುತ್ತಿರುವ ಪ್ರವೇಶದಲ್ಲಿ ನಾವು ಇದನ್ನು ಗಮನಿಸಬೇಕಾಗಿದೆ. ಇಂದಿನ ಗಡಿ-ಸೀಮೆಗಳ ಸಮಸ್ಯೆ, ಜಲವಿವಾದಗಳ ಸಮಸ್ಯೆ, ರಾಜಕೀಯ ಸಂಬಂಧಗಳ ಸಮಸ್ಯೆ-ಇವುಗಳು ಇಂದು ನಮ್ಮ ಹೆಗಲಿಗೇರಿ ಕುಳಿತಿರಬೇಕಾದರೆ ನಮ್ಮ ಅಧ್ಯಯನ ಕ್ರಮಗಳು, ಶಾಸ್ತ್ರವಿಧಾನಗಳು, ಕಾಣುವ ಕ್ರಮಗಳು ಬದಲಾಗಬೇಕು. 'ದ್ರಾವಿಡ ಅಧ್ಯಯನ' ಎಂಬುದು ಕಟ್ಟುವ, ಕೊಡುವ ದಿಕ್ಕನ್ನು ಕುರಿತು ಹೇಳುವತ್ತ ಸಾಗುವ ಹಂಬಲವು ನಮ್ಮ ಉದ್ದೇಶವಾಗಬೇಕು.

೩

ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗವು ೨೦೦೨ರ ಡಿಸೆಂಬರ್ ತಿಂಗಳಲ್ಲಿ ಅನಂತಪುರದ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯದ ಸಹಯೋಗದೊಡನೆ ದ್ರಾವಿಡ ವ್ಯಾಕರಣಗಳ ಕುರಿತು ರಾಷ್ಟ್ರೀಯ ವಿಚಾರ ಸಂಕಿರಣವನ್ನು ಏರ್ಪಡಿಸಿತ್ತು. ಈ ವಿಚಾರ ಸಂಕಿರಣಕ್ಕೆ ದಕ್ಷಿಣ ಭಾರತದ ಬೇರೆ ಬೇರೆ ಭಾಗಗಳಿಂದ ಭಾಷಾ ವಿದ್ವಾಂಸರು ಬಂದಿದ್ದರು. ನಾನು ಅವರ ಮಾತುಗಳನ್ನು ಕೇಳುತ್ತ ಕೇಳುತ್ತ-ಈ ಹೊತ್ತು ದಕ್ಷಿಣ ಭಾರತದ ಭಾಷಾಸಾಹಿತ್ಯಗಳ ಪರಸ್ಪರ ಅನುಸಂಧಾನದ ಪ್ರಮಾಣಗಳು ಪಡೆದಿರುವ ಅಂತರಗಳನ್ನು, ಅವು ದಿಕ್ಕೆಟ್ಟು ಕೂತಿರುವ ಬಗೆಗಳನ್ನು ಕುರಿತು ಚಿಂತಿಸುತ್ತಿದ್ದೆ. ಪ್ರಾಚೀನವೊ ಆಧುನಿಕವೊ ಆದ ಕನ್ನಡದ ಕೃತಿಯೊಂದು ತೆಲುಗಿಗೂ, ತಮಿಳಿಗೂ, ಮಲೆಯಾಳಕ್ಕೂ ಇನ್ನೂ ಹೋಗದಿರುವ ಕೊರತೆ ಎಷ್ಟಿದೆಯೆಂಬುದನ್ನು ಅಲ್ಲಿ ನಾನು ಅನುಭವಿಸಿದೆ. ನಾವು ಕೇವಲ ಕನ್ನಡದ ನೆಲದಲ್ಲಿ ಕುಳಿತು ತಮಿಳು, ತೆಲುಗು, ಮಲಯಾಳಂ ಭಾಷೆಗಳನ್ನು, ಆಯಾ ಸಾಹಿತ್ಯ ಪರಿವಾರಗಳನ್ನು ಕುರಿತು ಚಿಂತಿಸುವುದಲ್ಲ. ನಾವು ಹಾಗೆ ಚಿಂತಿಸಿದರೆ ನಿಜಾರ್ಥದಲ್ಲಿ ಆ ಭಾಷಾಸಾಹಿತ್ಯಗಳು ನಮ್ಮ ಮನಸ್ಸನ್ನು ಪ್ರವೇಶಿಸಲಾರವು. ಈವರೆಗೂ ನಾವು ನಮ್ಮ ನೆಲದಲ್ಲೆ ಕುಳಿತು ಇನ್ನೊಂದು ಸಾಹಿತ್ಯ ಆಕೃತಿಯನ್ನು ಕುರಿತು ಚಿಂತಿಸುತ್ತಿದ್ದೇವೆ, ಪರಿಭಾವಿಸುತ್ತಿದ್ದೇವೆ. ಇದು ಎಷ್ಟು ಸರಿ?

ಈ ಹಿನ್ನೆಲೆಯಲ್ಲಿ ನಮ್ಮ ನಮ್ಮಲ್ಲೆ ಸೋದರ ಭಾಷೆಗಳ ಜತೆಗಿರುವ ನಮ್ಮ ಸಂಬಂಧಗಳನ್ನು ಕುರಿತು ಆಳವಾಗಿ, ಸೂಕ್ಷ್ಮವಾಗಿ ಈಗ ಚಿಂತಿಸಬೇಕಾಗಿದೆ. ನಾವು ಅನುವಾದಗೊಂಡ ಕೃತಿಯೊಂದನ್ನು ನಮ್ಮ ನೆಲದಲ್ಲೆ ಪರಿಭಾವಿಸುತ್ತೇವೆಯಷ್ಟೆ. ಆದರೆ, ಆ ಕೃತಿ ಇನ್ನೊಂದು ರಾಜ್ಯದ ಭೌಗೋಳಿಕ, ಸಾಂಸ್ಕೃತಿಕ, ಸಾಮಾಜಿಕ, ನಿತ್ಯವ್ಯಾಪಾರಕ್ಕೆ ಸೇರಿದ್ದು. ಆದ್ದರಿಂದ, ಕೇವಲ ನನ್ನ ಭಾಷೆಯ ನುಡಿಗಟ್ಟಿನಲ್ಲೆ ಆ ಭಾಷಾ ಸಂಸ್ಕೃತಿಯ ಸಾಹಿತ್ಯಿಕ-ಸಾಂಸ್ಕೃತಿಕ ಪದರನ್ನು ತಿಳಿಯುವುದು ಅಸಾಧ್ಯದ ಮಾತು. ಹೀಗಾಗಿ, ಭಾಷೆ-

ಭಾಷೆಯೊಂದರ ಜತೆಗಿನ ಸಹಸಂಬಂಧಗಳು ಹೇಗಿರಬೇಕು? ಅವು ಯಾವ ಬಗೆಯ ಕ್ರಮಗಳನ್ನು ವಹಿಸಬೇಕು? ಸಾಂಸ್ಥಿಕವೊ ಸಾಂಘಿಕವೊ ಆದ ನೆಲೆಗಳಲ್ಲಿ ಪ್ರವೇಶಿಸುವ, ಅನುಸಂಧಾನಿಸುವ ಬಗೆಗಳು ಯಾವುವು? ಈ ಬಗೆಯ ಪ್ರಶ್ನೆಗಳನ್ನು ನಾವು ಅತಿ ತುರ್ತಾಗಿ ಈಗ ಕೇಳಿಕೊಳ್ಳಬೇಕಾಗಿದೆ. ಈಗಾಗಲೆ ನಾವು ಕೇಳಬೇಕಾದ ಪ್ರಶ್ನೆಗಳಿಗಿಂತ, ನಮಗೆ ನಾವೇ ಕೊಟ್ಟುಕೊಂಡ ಉತ್ತರಗಳು ಹುಸಿಗಳಾಗಿ ಅದೇ ನಮ್ಮ ಸತ್ಯಸಾಕ್ಷಾತ್ಕಾರಗಳಾಗಿ ಕಾಣಿಸಿಕೊಂಡು ಬಿಟ್ಟಿವೆ. ನಾವು ಆ ದಾರಿಯಲ್ಲಿ ಬಹುದೂರ ನಡೆದು ಬಂದಿದ್ದೇವೆ. ಇನ್ನು ಈ ಬಗೆಯ ಮಾರ್ಗಕ್ರಮಗಳು ಸಾಕೆಂದು ಅನ್ನಿಸುವುದಿಲ್ಲವೆ?.

ಈ ಮಾತನ್ನು ಇನ್ನೂ ಕೆಲವು ಬಗೆಗಳಲ್ಲಿ ವಿವರಿಸಿಕೊಳ್ಳಬೇಕೆಂದು ನನಗೆ ತೋರುತ್ತದೆ. ದಕ್ಷಿಣ ಭಾರತೀಯ ಭಾಷಾ-ಸಾಹಿತ್ಯಗಳ ಜತೆಗಿನ ಸಂಬಂಧಗಳನ್ನು ನಾವು ಕೇವಲ ರಾಜಕೀಯಾತ್ಮಕ ಪರಿಭಾಷೆಯಲ್ಲೆ ನೋಡುತ್ತಿದ್ದೇವೆ. ಕಳೆದ ೨೦ನೇ ಶತಮಾನ ದಲ್ಲಿ ರಾಜಕೀಯ ಪರಿಭಾಷೆಯಲ್ಲೆ ಮಾತಾಡಿಕೊಂಡೆವು. ಇನ್ನು ನಾವು ರಾಜಕೀಯ ಪರಿಭಾಷೆಯಿಂದ ಹೊರಬಂದು ಸಾಂಸ್ಕೃತಿಕ ಪರಿಭಾಷೆಯಲ್ಲಿ ಮಾತಾಡಿಕೊಳ್ಳಬೇಕಾದ ಅಗತ್ಯವಿದೆ. ರಾಜಕೀಯವು ಸಾಂಸ್ಕೃತಿಕ ಪರಿಭಾಷೆಯ ಒಂದು ಕವಲಾಗಿ ಇಟ್ಟುಕೊಳ್ಳಬೇಕೇ ಹೊರತು; ಅದೇ ಮುಖ್ಯವೂ ನಮ್ಮನ್ನು ನಿಯಂತ್ರಿಸುವ ಮೌಲ್ಯವೂ ಆಗಕೂಡದೆಂಬ ವಿಚಾರ ಇಂದು ಅಗತ್ಯ. ನನ್ನ ಈ ಮಾತು ಅನುವಾದದ ಬಗೆಗಳನ್ನು ಕುರಿತು ಚಿಂತಿಸುತ್ತಿದೆಯೆ? ಹಾಗೆಂದೇ ನನ್ನ ಉತ್ತರ. ಈಗ ನಮ್ಮ ಸಂಘ-ಸಂಸ್ಥೆಗಳು ಕೇವಲ 'ಅನುವಾದ' ಮಾಡುತ್ತಿವೆ. ಅವು ಒಂದು ಹಂತದಲ್ಲಿ ನಮಗೆ ಉಪಯುಕ್ತ ಮಾತ್ರ. ನಾವು ಕೇವಲಾನುವಾದದಿಂದ ಇನ್ನು ಬಹುದೂರ ಕ್ರಮಿಸಬೇಕಾಗಿದೆ. ಈ ಕ್ರಮಿಸುವ ಹಾದಿ ಯಾವುದಾಗಬೇಕು? ಈ ಹೊತ್ತಿನ ನಮ್ಮ ರಾಜಕೀಯ ವಿದ್ವೇಷಗಳು ಸಾಮಾಜಿಕ ವಿಘಟನೆಗಳು ನಮ್ಮನಮ್ಮ ರಾಜ್ಯಗಳಲ್ಲೆ ಮಿಶ್ರಣಗೊಳಿಸಿಕೊಳ್ಳುತ್ತಿರುವ ಆಶಯಗಳನ್ನು ರೂಪಿಸುತ್ತಿವೆ. ನಮ್ಮ ಜನ ಮತ್ತು ನಮ್ಮ ಭಾಷೆ ನಮ್ಮ-ನಮ್ಮ ಪರಿಧಿಯಲ್ಲೆ ಕ್ರಮಗೊಳ್ಳುವ ಸ್ಥಿತಿಯಲ್ಲಿ ಬೆಳೆಯುತ್ತಿವೆಯೆಂದು ಅನ್ನಿಸುತ್ತಿದೆ. ರಾಜ್ಯರಾಜ್ಯಗಳ ನಡುವಣ ಅಂತರಗಳು ಎಷ್ಟು ಹೆಚ್ಚುತ್ತಿವೆಯೋ ಅಷ್ಟೇ ಮಟ್ಟಿಗೆ ಜಾಗತೀಕರಣವೆಂಬ ಅಲೆಯು 'ವಿಶ್ವಗ್ರಾಮ'ಗಳಾಗಿ ರೂಪಾಂತರಗೊಳ್ಳುತ್ತಿರುವ, ಪರಿವರ್ತಿಸುತ್ತಿರುವ ಹುನ್ನಾರವನ್ನು ಆರ್ಥಿಕ ನೆಲೆಯಿಂದ ಕಂಡು-ಕಾಣದಂತೆ ರೂಪಗೊಳ್ಳುತ್ತಿದೆ. ನಾವು ಈ 'ಸತ್ಯ'ಗಳನ್ನು ತಿಳಿಯುವ ಬಗೆ ಯಾವುದು? ಅಥವ ಈ 'ಸತ್ಯ'ಗಳನ್ನು ಆಕೃತಿಗಳಾಗಿ ಪಡೆಯುತ್ತಿರುವ ಬಗೆ ಯಾವುದು? ಅಂತಿಮವಾಗಿ ಸಾಹಿತ್ಯಿಕ ರೂಪಕಗಳು ಈ ಸತ್ಯಗಳನ್ನು ಬೆಳಗಿಸುತ್ತಿವೆಯೆಂದೇ ನನಗೆ ತೋರುತ್ತದೆ.

ಅನುವಾದ ಎಂಬುದು ಅಂತಿಮವಾಗಿ ಸಾಂಸ್ಕೃತಿಕ ಪ್ರಕ್ರಿಯೆಯೇ. ನಾವು ಈ ನಿಟ್ಟಿನಲ್ಲಿ ಹೆಚ್ಚು ಗಮನ ಹರಿಸಿಲ್ಲ. ಆದ್ದರಿಂದ ನಾವೀಗ ಕೆಲವು ಬಿಡಿನೋಟಗಳೊಳಗೆ ಸಿಲುಕಿ ಬಿಟ್ಟಿದ್ದೇವೆ. ಇಂಥ 'ಬಿಡಿನೋಟ'ಗಳು ಅನುವಾದಕ್ಕೆ ಸಾಂಸ್ಕೃತಿಕ ಗುರುತ್ವವನ್ನು ತಂದುಕೊಡುವುದಿಲ್ಲ. ಆದ್ದರಿಂದ ನಾವು 'ಬಿಡಿ' ಪ್ರಕ್ರಿಯೆಯಿಂದ 'ಇಡಿ' ಪ್ರಕ್ರಿಯೆಯ

ಕಡೆಗೆ ಹೋಗಬೇಕಾಗಿದೆ. ಈ ಸಾಹಸವು ಅನುವಾದಕ್ಕೆ ಹೊಸನೆಲೆಯನ್ನೂ ಹೊಸ ಕಂಪನ್ನೂ ಹೊಸ ಬಗೆಯನ್ನೂ ತಂದುಕೊಡುತ್ತವೆಂಬ ವಿಶ್ವಾಸ ನನ್ನದು. ಈ ಸಾಂಸ್ಕೃತಿಕ ಅನುವಾದ ಎನ್ನುವ ನನ್ನ ವ್ಯಾಖ್ಯಾನದಲ್ಲಿ ಕೇವಲ ಸೃಜನಶೀಲ-ಸೃಜನೇತರ ಎಂಬ ಸಾಮಾನ್ಯೀಕೃತ ಪರಿಭಾಷೆಗಳಿಂದ ಹೊರಚಾಚಿ ನಾವು ನಿಲ್ಲಬೇಕಾಗಿದೆ. ಈ ಹೊತ್ತು ಸೃಜನಶೀಲ-ಸೃಜನೇತರ ಎಂಬ ಮಾತುಗಳೇ ಅರ್ಥಹೀನ. ಇಂಥ ಮಾತುಗಳು ನಮ್ಮ ಹಾದಿಗೆ ಮಂಜನ್ನು ಕವಿಸಬಹುದು. ನಾವು ಈ ಮಿಥ್ಯಾಪರಿಕಲ್ಪನೆಗಳಿಂದ ದೂರನಿಂತು ಯೋಚಿಸಬೇಕಾಗಿದೆ. ಹೀಗೆ ಹೊಸದಾರಿ ಹಿಡಿದಾಗ, ಹೆಜ್ಜೆಯೂ ಉಸಿರೂ ಹೊಸದೇ ಆಗುತ್ತದೆ, ಆಗುವುದು ಸಹಜವಾಗಿರುತ್ತದೆ. ಆಗ 'ಅನುವಾದ' ಎಂಬ ಮಾತು, ಹೊಸ ಬೆಳಕನ್ನು ಹಿಡಿದು ನಿಲ್ಲಲು ಸಾಧ್ಯವಾಗುತ್ತದೆ. ಅನುವಾದ ಎಂಬ ಪಠ್ಯೀಕೃತ ಮಾತು ನೆಲೆ ತಪ್ಪಿ, ಅದು ವಿಶಾಲಾರ್ಥದ ಸಾಂಸ್ಕೃತಿಕ ಭೋಗಭೂಮಿಗೆ ಬಂದು ನಿಲ್ಲಲು ಸಾಧ್ಯವಾಗುತ್ತದೆ. ಈ ಭೋಗಭೂಮಿಯಲ್ಲಿ ಜನ ಕಾಣಿಸುತ್ತಾರೆ. ಅಲ್ಲಿ ಮಣ್ಣು, ಹೂವು, ಹೀಚು, ಕಾಯಿ, ಕಾಂಡ, ಟಿಸಿಲು, ಟೊಂಗೆ, ಬೆಟ್ಟ, ಹೆಬ್ಬಂಡೆ ಹಾಗೂ ಸಮಸ್ತ ಮಾನವಜಾತಿ ಸೇರಿ ಎಲ್ಲ ಜೀವ ಒಂದಾಗಿ ನಿಲ್ಲುತ್ತವೆ. ಅಂತಿಮವಾಗಿ ಸಾಂಸ್ಕೃತಿಕ ಅನುವಾದ ಎಂಬುದು ಈ ಎಲ್ಲ ಜೀವಸಂಕುಲಗಳ ಸಖ್ಯಗಳ ಬಗೆಯೇ ಆಗಿದೆ. ನಾವು ಈ ಮಹಾಕಥನದ ವಿರಾಟ್ ರೂಪದಲ್ಲಿ ದ್ರಾವಿಡ ಅನುವಾದವನ್ನು ಪರಿಭಾವಿಸಬೇಕಾಗಿದೆ.

ದಕ್ಷಿಣ ಭಾರತದ ಭಾಷಾ-ಸಾಹಿತ್ಯ-ಸಂಸ್ಕೃತಿಗಳು ಪಾರಸ್ಪರಿಕ ಸಂಬಂಧದ ನೆಲೆಗಳನ್ನು ಪಡೆಯಬೇಕೆಂಬುದೇ ನನ್ನ ಒಟ್ಟು ಮಾತಿನ ಇರಾದೆ. ನಮ್ಮ ಜೀವಸಂಬಂಧಿ ಪಡಿಪಾಟಲು ಗಳು ನಮ್ಮಲ್ಲಿ ಒಕ್ಕೂಟದ ನೆಲೆಯನ್ನು ನಿರೀಕ್ಷಿಸಬೇಕಿತ್ತು. ಭಾಷೆಗೆ ಸಂಬಂಧಿಸಿದಂತೆ ದಕ್ಷಿಣದಲ್ಲಿ ನಡೆದ ಚಳುವಳಿಗಳು, ಸಾಮಾಜಿಕ ವಿನ್ಯಾಸಕ್ಕೆ ಸಂಬಂಧಿಸಿದಂತೆ ನಡೆದ ಚಳುವಳಿಗಳು, ಅಂತಿಮವಾಗಿ ರಾಜಕೀಯ ಪ್ರಭುತ್ವದ ಸ್ವರೂಪವನ್ನು ಪಡೆದುವು. ಕಳೆದ ಶತಮಾನದ ಉದ್ದಕ್ಕೂ ನಡೆದ ಚಳುವಳಿ, ಹೋರಾಟ, ಪ್ರಗತಿಮುಖಿಗಳು ವಿದ್ರೋಹದ ಚಟುವಟಿಕೆಗಳೇ ಆದುವು. 'ರಾಜಕಾರಣ' ಎಂಬುದು ಸಂಸ್ಕೃತಿ ಮತ್ತು ಭಾಷೆಯನ್ನು 'ಮೇಲುನೆಲೆ'ಗೆ ಒಯ್ಯಬೇಕಿತ್ತು. ಆದರೆ, ಅದು 'ಕೆಳನೆಲೆ'ಗೆ ಒಯ್ಯುವ ಸಾಧನವಾಗಿ ಬಳಕೆಯಾಗಿಬಿಟ್ಟಿದೆ. ಈ ಎಲ್ಲ ನಿಷ್ಠುರಗಳಿಂದ ನಾವು ದಿಕ್ಕೆಡುವಂತಿಲ್ಲ. ಜನ-ಜನರ ನಡುವೆ ಅನುರಾಗ, ಭಾಷೆ-ಭಾಷೆಯ ನಡುವೆ ಕೊಡುಕೊಳೆ, ಸಂಸ್ಕೃತಿ-ಸಂಸ್ಕೃತಿಗಳೊಳಗೆ ಜೀವಸಖ್ಯ ಇವು ಈಗ ಆಗಬೇಕಾಗಿದೆ. ದಕ್ಷಿಣಕ್ಕೂ ಉತ್ತರಕ್ಕೂ ಇರುವ ಸಾಂಸ್ಕೃತಿಕ ಅಂತರ ಎರಡು ಸಾವಿರವರ್ಷಕ್ಕೂ ಮಿಕ್ಕಿದ್ದು. ಆದರೆ, ದಕ್ಷಿಣದ ಸೋದರ ರಾಜ್ಯಗಳ ಜತೆಗಿರುವ ಅಂತರ ಕಾಲಸಂಬಂಧಿಯಾದದ್ದು. ನಾವು ಈ ಕಾಲವನ್ನು ಮೀರಬಹುದು. ಹಾಗೆ ಮೀರುವುದು ನಮ್ಮ ಧ್ಯೇಯವೂ ಆಗಬೇಕು. ಇದು ಸಾಹಿತ್ಯಿಕ-ಸಾಂಸ್ಕೃತಿಕ ಮೇಲು ಮೇಲಿನ ಅಥವ ಹೊರತೋರಿಕೆಯ ಆದಾನ-ಪ್ರದಾನಗಳಂತಹ ಸೀಮಿತ ರಾಜಕಾರಣ ದಿಂದ ಸಾಧ್ಯವಾಗುವುದಿಲ್ಲ. ಅದರ ಬದಲು ಆಳವೂ ಸೂಕ್ಷ್ಮವೂ ಜೀವಸಖ್ಯವೂ ಆದ

ಆಂತರಿಕ ಸಂಬಂಧಗಳಿಂದ ಮಾತ್ರ ಸಾಧ್ಯವಾಗಬೇಕಾಗಿದೆ. ಸಹಸ್ರಮಾನದ ಹೊಸ್ತಿಲಲ್ಲಿ ನಿಂತಿರುವ ನಾವು ಇಂಥ ಆಂತರಿಕ ಸಂಬಂಧಗಳನ್ನು ಕಲೆಗಳ ಮೂಲಕ, ಸಾಹಿತ್ಯಿಕ-ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ, ಒದಗಿಸಿಕೊಳ್ಳಬೇಕಾಗಿದೆ, ಬೆಳೆಸಿಕೊಳ್ಳಬೇಕಾಗಿದೆ. ಇದು ನಮ್ಮ ಹಿರೀಕರು ಇಟ್ಟುಕೊಂಡ ಆದರ್ಶ. ನಾವು ಗಡಿ-ಸೀಮೆಗಳ ಅಂತರಗಳನ್ನು ಮೀರಿಯೂ ಬೆಳೆಯಬೇಕೆನ್ನುವುದು ನಮ್ಮ ಪೂರ್ವಿಕರ ಸದಾಶಯ. ಈ ಅಂಶವನ್ನು ಇನ್ನೊಂದು ಬಗೆಯಿಂದ ನೋಡಬಹುದೆ ?

೪

ಭಾಷೆ ಮತ್ತು ಸಂಸ್ಕೃತಿ ಕುರಿತ ಆಧುನಿಕ ಸಂವಾದಕ್ಕೆ ಹತ್ತಿರಹತ್ತಿರ ಇನ್ನೂರು ವರ್ಷಗಳು ಕಳೆದುವು. ಈ ನಡುವೆ ಆರ್ಯ-ದ್ರಾವಿಡ ಎಂಬ ಜನಾಂಗಿಕ ಪರಿಕಲ್ಪನೆಗಳು, ದೇಸಿ-ಮಾರ್ಗ ಎಂಬಂತಹ ಸಾಹಿತ್ಯಿಕ ಪರಿಕಲ್ಪನೆಗಳು, ಇಂಡಿಯಾ-ಭಾರತ-ಆರ್ಯಾವರ್ತ, ಸಿಂಧೂ-ಹಿಂದೂದೇಶ ಎಂಬಂತಹ ರಾಷ್ಟ್ರನಾಮದ ಪರಿಕಲ್ಪನೆಗಳು ಬಂದುವು. ಅವು ಯಾವು ಯಾವುದೋ ಕಾರಣಕ್ಕೆ ಇನ್ನೂ ನಮ್ಮೊಳಗೆ ಗುದ್ದಾಟಗಳನ್ನು ನಡೆಸುತ್ತಲೇ ಇವೆ. ವಿದ್ವಾಂಸರು, ಬಲ್ಲಿದರು, ತಿಳಿದವರು, ಸಾಮಾನ್ಯರು, ಜನಸಾಮಾನ್ಯರು ಹೀಗೆ ಎಲ್ಲರೂ 'ಸಂವಾದ'ಗಳ ಮೂಲಕವೊ 'ವಾಗ್ವಾದ'ಗಳ ಮೂಲಕವೊ ಈ ಸಂಗತಿಗಳನ್ನು ಬೆಳೆಸುತ್ತಿದ್ದಾರೆ. ಈ ಬೆಳಸುವಿಕೆಗೆ ಮೂಲ, ಭಾಷೆ ಮತ್ತು ಸಂಸ್ಕೃತಿ ಎಂಬಂತಹ 'ಲೋಕಕಲ್ಪನೆ'ಗಳೇ ಕಾರಣವಾಗಿವೆ.

ಭಾಷೆ ಎಂಬುದು ಒಂದು ಮಾಧ್ಯಮವೆಂಬ ತಿಳಿವಳಿಕೆ ಆಧುನಿಕದ್ದು. ಆದರೆ, ಇದು ಅಂತರಂಗದ ಒಳತಿಳಿವಿನ ಸಾಧನ ಎಂದು ಪ್ರಾಚೀನರು ತಿಳಿದಿದ್ದರು. ಭಾಷೆ ಒಂದೆಡೆ ಸತ್ಯವನ್ನೂ ಲೋಕಸತ್ಯವನ್ನೂ ಮಿಥ್ಯವನ್ನೂ ಸೂಚಿಸುವ ಸಂಕೇತವೆಂಬ ಪರಿಕಲ್ಪನೆ ಇದೆ. ಆದರೆ, 'ಭಾಷೆ' ಎಂಬುದನ್ನು ಏಕಾಕಾರವೆಂದು ತಿಳಿದಾಗ ಮಾತ್ರ ಇಂಥ ಅನಾಹುತಕ್ಕೆ ದಾರಿಯಾಗುತ್ತದೆ. ಆದರೆ, ಭಾಷೆಯು ಸಂಸ್ಕೃತಿಯ ಒಡಲೊಳಗೆ ಮಿಡಿಯುವ ಸಾಧನ ಎಂದಾಗ ಈ ಅನಾಹುತದಿಂದ ನಾವು ಪಾರಾಗಬಲ್ಲೆವು. 'ಸಂಸ್ಕೃತಿ' ಎಂಬುದು ಭಾಷೆಯ ಮೂಲಕ, ಭಾವದ ಮೂಲಕ, ನಡೆವಳಿಗಳ ಮೂಲಕ ಮೈದೋರುವ ಒಂದು ಆಶಯ. ಈ ಆಶಯವು ಭಾಷೆಯ ಬೇರನ್ನು ತನ್ನ ಅಂತರಂಗದಲ್ಲಿ ಇರಿಸಿಕೊಂಡಿರುತ್ತದೆ. ಭಾಷೆ ಮತ್ತು ಸಂಸ್ಕೃತಿಗಳಿಗೆ ಒಂದು ಬಿಟ್ಟು ಬಿಡಲಾರದ ಸಂಬಂಧಗಳಿವೆಯೆಂಬ ಸತ್ಯವನ್ನು ತಿಳಿದೇ ನೂರಾರು ವರ್ಷಗಳು ಸಂದುವು. ಭಾಷೆ ಒಂಟಿಯಾದಾಗ ಅದು 'ಪ್ರಾಣಘಾತುಕ', 'ಉರಿವ ನಾಲಗೆ', 'ಉಲಿವ ಉಯ್ಯಲೆ' ಆಗುತ್ತದೆ. ಆದರೆ, ಭಾಷೆಯು ಸಂಸ್ಕೃತಿಯ ಮೈಯಲ್ಲಿ ಕೂತು ಅರಳಿಕೊಂಡಾಗ 'ಮಾತೆಂಬುದು ಜ್ಯೋತಿರ್ಲಿಂಗ', 'ನಡೆಯಲ್ಲಿ ನುಡಿ ತುಂಬಿ ನುಡಿಯಲ್ಲಿ ನಡೆ ತುಂಬಿ ; ನಡೆ-ನುಡಿಯೆರಡನು ಪರಿಪೂರ್ಣ ತುಂಬಿ' ಆಗುತ್ತದೆ. ಈ ಸತ್ಯ ಸಾರ್ವಕಾಲಿಕವಾದುದು.

ನಾನು ಈ ಮೇಲಿನ ಮಾತುಗಳನ್ನು ಆಡಲು ಸದ್ಯದ ಸಾಮಾಜಿಕ ಹಾಗೂ ರಾಜಕೀಯ

ಕಾರಣಗಳೇ ಮೂಲಕಾರಣಗಳಾಗಿವೆ. ಆ ಕಾರಣಗಳ ಹಿನ್ನೆಲೆಯಲ್ಲೆ ಭಾಷೆ ಮತ್ತು ಸಂಸ್ಕೃತಿ, ಕುರಿತು ಚರ್ಚಿಸಲು ತೊಡಗಿದ್ದೇನೆ. ನಾವು ಈ ಹೊತ್ತು ಇವೆರಡನ್ನು 'ಲೋಕಕಲ್ಪನೆ'ಗಳೆಂದೇ ತಿಳಿಯಬೇಕು. ಆಗ ಕೆಲವು ಸತ್ಯಗಳೂ ರಹಸ್ಯಗಳೂ ನಮ್ಮ ಪಾಲಾಗುತ್ತವೆ. ಆ ರಹಸ್ಯವು ನಮ್ಮ ಅಂತರಂಗದ ಪಿಸುಮಾತುಗಳಾಗುವುದು ಇಂದಿನ ಅಗತ್ಯಗಳಲ್ಲಿ ಒಂದೆಂದು ನಾನು ತಿಳಿಯುತ್ತೇನೆ.

ನಮಗೆ ಸ್ವಾತಂತ್ರ್ಯ ಬಂದು ಐವತ್ತೈದು ವರ್ಷಗಳು ತುಂಬಿದುವು. ದಕ್ಷಿಣ ಮತ್ತು ಉತ್ತರ ಭಾರತಗಳೆಂಬ ರಾಜಕೀಯ ವಿಭಾಗ ಕ್ರಮವಾಗಲಿ, ಭಾಷಿಕ ರಾಜ್ಯರಾಜ್ಯಗಳ ಭಾಷಿಕ ಗಡಿಕ್ರಮಗಳಾಗಲಿ ನಾವು ಪಡೆದ ಸ್ವಾತಂತ್ರ್ಯಕ್ಕೆ ಒಂದು ವಿಶಾಲಾರ್ಥವನ್ನು ಈವರೆಗೂ ಪಡೆಯಲಾಗಿಲ್ಲ. ಈ ಎಲ್ಲ ಕ್ರಮಗಳು ಕೇವಲ ರಾಜಕೀಯ ವಿನ್ಯಾಸವನ್ನು ಪಡೆದಿವೆಯೇ ಹೊರತು ಸಾಂಸ್ಕೃತಿಕ ಆಪ್ತಬಾಂಧವ್ಯವನ್ನು ಇನ್ನೂವರೆಗೂ ಪಡೆದಿಲ್ಲ. ಒಂದು ನೆಲೆಯಲ್ಲಿ ನೋಡಿದರೆ ಇಂದಿನ ಭಾರತದ ಮನಃಸ್ಥಿತಿಯೇ ಆತಂಕಕಾರಿಯಾಗಿದೆ. ಈ ಆತಂಕಗಳು ನಮ್ಮನ್ನು ಎಲ್ಲಿಗೆ ಕೊಂಡೊಯ್ಯಬಲ್ಲುದೋ ತಿಳಿಯದಾಗಿದೆ. ನಾವು ಈ ಸಮಸ್ಯೆಯನ್ನು ಅರ್ಥಮಾಡಿಕೊಳ್ಳಬೇಕಾದರೆ 'ಭಾಷೆ' ಎಂಬ ಸಂಸ್ಕೃತಿ ಸಂಪತ್ತನ್ನು ಮನುಷ್ಯ ಸಮಾಜದ ಬೇರಿನಿಂದ ಹೊರತೆಗೆದು ಏಕರೂಪಿಗೊಳಿಸಿದ್ದು. ಭಾಷೆ 'ಪ್ರಾಣಘಾತುಕ' ಆಗುವುದು ಇಲ್ಲೇ. ಅದು ರಾಜಕಾರಣದ ಕೈಯಲ್ಲಿ 'ಉಲಿವ ಉಯ್ಯಲೆ' ಆಗುವುದು ಅನಿವಾರ್ಯ ಮತ್ತು ಸಂಭವನೀಯ! ನಾವು ಯಾವಾಗ 'ಭಾಷೆ'ಯನ್ನು ಮಿಥ್ಯಾ ಸಾಧನವಾಗಿ ಬಳಸಿ ಕೊಳ್ಳುತ್ತೇವೋ ಆಗ ನೆಲ-ಜಲ-ಸಂಪತ್ತು-ಸಂಬಂಧಗಳು ರಾಜಕಾರಣದ ನೆಲೆಯನ್ನು ಮುಟ್ಟಿಬಿಡುತ್ತವೆ. 'ಹೆಜಮನಿ' ಪ್ರಾರಂಭವಾಗುವುದೇ ಇಂಥ ಕಡೆಗಳಲ್ಲೇ. ಇಂದು ರಾಷ್ಟ್ರ ರಾಜಕಾರಣ ತನಗೆ ಗೊತ್ತಿದ್ದೂ ಗೊತ್ತಿಲ್ಲದೆಯೋ ಇಂಥ 'ರಾಜಕಾರಣ'ದ ನೇಣಿನಲ್ಲಿ ಬಂಧಿಯಾಗಿದೆ.

ನಾವು ಇಪ್ಪತ್ತೊಂದನೆಯ ಶತಮಾನದಲ್ಲಿ ನಿಂತಿದ್ದೇವೆಯಷ್ಟೆ. ದಕ್ಷಿಣ-ಉತ್ತರ ಎಂಬಂತಹ ವಿಭಾಗೀಯ ಕ್ರಮಗಳು ಕೇವಲ ಹೊರಸತ್ಯಗಳಾಗಿವೆಯೇ ಹೊರತು ಅವು ಒಳಸತ್ಯಗಳಲ್ಲ ಎಂಬಂತಹ ನಿಲುವುಗಳನ್ನು ಪ್ರತಿಯೊಬ್ಬರೂ ತಾಳಬೇಕಾಗಿದೆ. ಸಂಸ್ಕೃತಿಯ ಒಳಮುದ್ದಾಟಗಳನ್ನು ಮರೆತು ನಡೆಯುತ್ತಿರುವ ಅಪಾಯದಲ್ಲೆ 'ಭಾಷೆ'ಯ ಮೇಲಾಟದ ಪ್ರಶ್ನೆ ಹುದುಗಿಕೊಂಡಿದೆಯೆಂದು ನಾನು ತಿಳಿಯುತ್ತೇನೆ. ಸಾಂಸ್ಕೃತಿಕ ಭಿನ್ನತೆಗಳಲ್ಲೂ ಒಂದು ಬಗೆಯ ಸಾಂಸ್ಕೃತಿಕ ಅನನ್ಯತೆಗಳೂ ಒಡಗೂಡಿ ನೆಲೆನಿಂತಿರುತ್ತವೆ. ಈ ನೆಲೆಗೆ ವಾಹಕವಾಗಿ 'ಭಾಷೆ' ಸಂಚರಿಸುತ್ತಿದೆ. ಕನ್ನಡ-ತಮಿಳು ತೆಲುಗು-ಕನ್ನಡ ಎಂಬುವು ಭಾಷಿಕ ಮೇಲಾಟ ವಾದಾಗ ಸಾಂಸ್ಕೃತಿಕ ಏರುಪೇರುಗಳು ಪ್ರಾರಂಭವಾಗುತ್ತವೆ. ಅದು ಮುಂದೆ ನೆಲ-ಜಲ-ಸಂಬಂಧಗಳನ್ನು ಹಳಸು ಮಾಡಿಬಿಡುತ್ತವೆ. ಒಳಗಿನ ಕಾಲಾಗ್ನಿ ಸಮಾಜದ ಬಡಬಾಗ್ನಿಯಾಗಿ ಸುಟ್ಟು ಹಾಕಲು ಯತ್ನಿಸುತ್ತದೆ. ಇದು 'ಭಾಷೆ'ಯನ್ನು ರಾಜಕಾರಣ ಗೊಳಿಸಿದಾಗ ಆಗುವ ಅನಾಹುತ. ಇಂಥ ಅನಾಹುತಗಳು ಸ್ವಾತಂತ್ರ್ಯಪೂರ್ವದಲ್ಲೂ ನಡೆದಿವೆ. ಸ್ವಾತಂತ್ರ್ಯೋತ್ತರ

ಭಾರತದ ನಂತರವೂ ನಡೆಯುತ್ತಿದೆ. ರಾಜಕಾರಣವು ಇಂಥ 'ನಿತ್ಯ ನರಕ'ದಲ್ಲಿ ತನ್ನ 'ಏಕರೂಪೀ ಆಶಯ'ವನ್ನು ಸಾಂಕೇತಿಕಗೊಳಿಸುತ್ತಿದೆ. ರಾಜ ಕಾರಣವು ವೈಯಕ್ತಿಕ ನೆಲೆಯಲ್ಲಿ ಸಂಚರಿಸಿದಾಗ 'ಸಾಮೂಹಿಕ ನಾಶ' ಆಗುವ ಬಗೆಯನ್ನು ಕಳೆದ ಶತಮಾನದ ಕೊನೆಯ ದಶಕಗಳಲ್ಲಿ ಆದ 'ಕಾವೇರಿ ವಿವಾದ'ವು ನಮ್ಮ ಕಣ್ಣು ಮುಂದೆ ಸಾಕ್ಷಿಯಾಗಿ ಇನ್ನೂ ನಿಂತಿದೆ. ಇಂದೂ ಕೂಡ ಅದೊಂದು ರಾಜಕಾರಣದ ಪ್ರಶ್ನೆಯಾಗಿದೆಯೇ ಹೊರತು ಮನುಷ್ಯ-ಮನುಷ್ಯರ ನಡುವಿನ ಪ್ರಶ್ನೆಯಾಗಿಲ್ಲ. ಒಂದು ತಂತ್ರವು ಹೇಗೆ ಹಲವು ರೂಪಗಳನ್ನು ಧರಿಸಿ ನಿಲ್ಲಬಲ್ಲುದೆಂಬುದಕ್ಕೆ ಇದೊಂದು ದೊಡ್ಡ ಉದಾಹರಣೆ. ಗ್ರಾಮ, ಪಟ್ಟಣ, ನಗರ, ರಾಜ್ಯ ಎಂಬುದು ಸಾಮಾಜಿಕ ಅನುಕೂಲದ ನೆಲೆಯೇ ಹೊರತು; ಅವು ಸಾಂಸ್ಕೃತಿಕ ಅನನ್ಯತೆಯನ್ನು ರೂಪಿಸುವ ಆಶಯವೇನಲ್ಲ. ಈ ಅಂಶವನ್ನು ರಾಷ್ಟ್ರ ಚಿಂತನೆಯ ಪ್ರತಿಯೊಬ್ಬ ನೇತಾರನೂ ತಿಳಿಯುವ ಅಗತ್ಯವಿದೆ. ಇಲ್ಲದೆ ಹೋದರೆ, ಇಂದಿನ ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣವೆಂಬ ಭೂತಗಳು ನಮ್ಮ ರಾಜ್ಯಗಳ ನಡುವಣ ಸಾಂಸ್ಕೃತಿಕ ಬಂಧುತ್ವವನ್ನು ಸಂಪೂರ್ಣ ನಿರ್ನಾಮಗೊಳಿಸಬಲ್ಲುವು. ಜೀವನಕ್ಕೆ ಏಕಾಂತವೂ ಬೇಕು ಲೋಕಾಂತವೂ ಬೇಕು. ಇವು ಒಂದಕ್ಕೊಂದು ಪೂರಕ. ತಮಿಳು-ಕನ್ನಡ, ಕನ್ನಡ-ತೆಲುಗು, ಕನ್ನಡ-ತುಳು, ಮಲೆಯಾಳಂ-ತುಳು, ಮಲೆಯಾಳಂ-ಕನ್ನಡ ಎಂಬುದು ಕೇವಲ ಭಾಷಿಕ ಮನೋರಾಜ್ಯಗಳಲ್ಲೆ ನೋಡ ಬೇಕಿಲ್ಲ. ಹಾಗೆ ನೋಡಿದಾಗ ರಾಜ್ಯ-ರಾಜ್ಯಗಳ ಬಿಕ್ಕಟ್ಟು ಇನ್ನಷ್ಟು ಹದಗೆಡುತ್ತದೆ. ಇಂಥ ಬಿಕ್ಕಟ್ಟು ಮತ್ತು ಇಕ್ಕಟ್ಟುಗಳಿಂದ ನಾವು ಸದ್ಯವೇ ಪಾರಾಗಬೇಕಾಗಿದೆ.

'ದ್ರಾವಿಡಶಾಸ್ತ್ರ' ಎಂಬ ಹೆಸರಿನಲ್ಲಿ ಸಂಕಲನಗೊಳ್ಳುತ್ತಿರುವ ಇಲ್ಲಿಯ ಲೇಖನಗಳು ತಾತ್ತ್ವಿಕ ಸೂತ್ರವನ್ನು ಕಟ್ಟುವ ಹಂಬಲವನ್ನು ಹೊತ್ತಿವೆ. ಈ ಪ್ರಕಟಣೆಯು ಸಾಂಸ್ಕೃತಿಕ ಬಂಧುತ್ವದ ಹೆಜ್ಜೆಗುರುತಾಗಿದೆ. ಇಲ್ಲಿರುವ ಲೇಖನಗಳು ಇಪ್ಪತ್ತೊಂದನೇ ಶತಮಾನದ ಮೊದಲಲ್ಲಿ ಹಳೆಯ-ಪಳೆಯ ಮುಖಗಳನ್ನು ಪಕ್ಕಕ್ಕಿಟ್ಟು ಹೊಸ ಆಶಯಗಳನ್ನು ರೂಪಿಸುವ ಉದ್ದೇಶವನ್ನು ಹೊಂದಿವೆ. ಇಂಥ ಲೇಖನಗಳು 'ದ್ರಾವಿಡ ವಿಶ್ವ'ವನ್ನು ಕಟ್ಟಲು ಬೇಕಾದ ಹೊರ-ಒಳ ಸಾಮರ್ಥ್ಯಗಳನ್ನು ನಮಗೆ ನೀಡಿವೆ.

ಈ ಪುಸ್ತಕವು ನಮ್ಮ ವಿಭಾಗದ ಮಾಲೆಯಾಗಿದೆ. ಪುಸ್ತಕ ಈ ರೂಪದಲ್ಲಿ ಹೊರಬರಲು ಮಾನ್ಯ ಕುಲಪತಿಗಳಾದ ಡಾ. ಎಚ್.ಜೆ.ಲಕ್ಕಪ್ಪಗೌಡ ಅವರು ಕಾರಣರಾಗಿದ್ದಾರೆ. ಪ್ರಸಾರಾಂಗದ ನಿರ್ದೇಶಕರಾದ ಡಾ. ಹಿ.ಚಿ.ಬೋರಲಿಂಗಯ್ಯ ಇವರ ಉತ್ಸಾಹ, ಪ್ರೇರಣೆಗಳೂ ನಮಗೆ ಸಹಕಾರಿಯಾಗಿವೆ. ಇವರಿಬ್ಬರಿಗೂ ಕೃತಜ್ಞತೆಗಳು ಸಲ್ಲುತ್ತವೆ. ಲೇಖನಗಳನ್ನು ಬಳಸಿಕೊಳ್ಳಲು ಅನುಮತಿಸಿದ ಎಲ್ಲ ಲೇಖಕರಿಗೂ ಮುಖಪುಟ ವಿನ್ಯಾಸ ಮಾಡಿದವರಿಗೂ ಮುದ್ರಿಸಿಕೊಟ್ಟ ಗೆಳೆಯರನ್ನು ಆದರದಿಂದ ಸ್ಮರಣೆ ಮಾಡಿಕೊಳ್ಳುತ್ತೇನೆ. ವಿಭಾಗದ ಸಹೋದ್ಯೋಗಿ ಮಿತ್ರರ ಸಹಕಾರ ನನ್ನ ಜತೆಗಿದೆ. ಅವರಿಗೂ ನನ್ನ ವಂದನೆಗಳು.

**ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ**

# ಪರಿವಿಡಿ

೧. ದ್ರಾವಿಡ ಆರ್ಯ ಪರಿಕಲ್ಪನೆ / ೧

*ಪ್ರೊ. ಎಸ್.ಎಸ್.ಹಿರೇಮಠ*

೨. ದ್ರಾವಿಡ ಸಂಸ್ಕೃತಿ ಚಿಂತನೆಯ ತಾತ್ವಿಕ ಹಿನ್ನೆಲೆ / ೫

*ಪ್ರೊ. ಎಸ್.ಎಸ್.ಹಿರೇಮಠ*

೩. ಆರ್ಯ ದ್ರಾವಿಡ ಪರಿಕಲ್ಪನೆ / ೧೪

*ವೆಂಕಟರಾಜ ಪುಣಿಂಚತ್ತಾಯ*

೪. ದ್ರಾವಿಡರ ಸಂಸ್ಕೃತಿ / ೧೬

*ಡಾ. ಮೋಹನ ಕುಂಟಾರ್*

೫. ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಕುಳವ ಭಾಷೆಯ ವೈಶಿಷ್ಟ್ಯಗಳು / ೨೦

*ಡಾ. ಬಿ.ಪಿ.ರಾಮಯ್ಯ*

೬. ದ್ರಾವಿಡ ಭಾಷೆಗಳ ಕಾಗುಣಿತ ವ್ಯವಸ್ಥೆ / ೩೬

*ಡಾ. ಸಾಂಬಮೂರ್ತಿ*

೭. ದ್ರಾವಿಡ-ಡೆಕ್ಕನ್-ದಕ್ಷಿಣ ಭಾರತ / ೪೪

*ಡಾ. ಮಾಧವ ಪೆರಾಜೆ*

೮. ಜರ್ಮನಿಯ ಪ್ರಸಿದ್ಧ ದ್ರಾವಿಡಾಧ್ಯಯನಕಾರರು / ೬೪

*ಇಂಗ್ಲೀಶ್ ಮೂಲ : ಹರ್ಬರ್ಟ್ ಹರ್ರಿಂಗ್*

*ಅನುವಾದ : ಡಾ. ಎ.ಸುಬ್ಬಣ್ಣ ರೈ*

೯. ದಕ್ಷಿಣ ಭಾರತದಲ್ಲಿ ಸಾಮಾಜಿಕ ಭಾಷಾವಿಜ್ಞಾನದ ಸಂಶೋಧನೆ / ೮೨
ಸಾಧನೆಗಳು ಮತ್ತು ಸಾಧ್ಯತೆಗಳು

*ಇಂಗ್ಲಿಶ್ ಮೂಲ : ಫ್ರಾಂಕ್ಲಿನ್ ಸಿ.ಸೌತ್‌ವರ್ತ್*

*ಅನುವಾದ : ಡಾ. ಎ.ಸುಬ್ಬಣ್ಣ ರೈ*

೧೦. ಫಾಹಿಯಾನನು ಕಂಡ ದಕ್ಷಿಣ ಸಾಮ್ರಾಜ್ಯ / ೧೧೫

*ಇಂಗ್ಲಿಶ್ ಮೂಲ : ಥೋಮಸ್ ಫೋಕಸ್*

*ಅನುವಾದ : ಡಾ. ಮಾಧವ ಪೆರಾಜೆ*

೧೧. ವೇಮನ ಮತ್ತು ಇತರ ಅನುಭಾವಿಗಳು / ೧೩೯
*ತೆಲುಗು ಮೂಲ : ರಾಳ್ಳಪಲ್ಲಿ ಅನಂತಕೃಷ್ಣ ಶರ್ಮ*
*ಅನುವಾದ : ಸಿ. ವೆಂಕಟೇಶ*

ನಮ್ಮ ಲೇಖಕರು / ೧೫೭

೧

# ದ್ರಾವಿಡ - ಆರ್ಯ ಪರಿಕಲ್ಪನೆ

## ಪ್ರೊ. ಎಸ್.ಎಸ್.ಹಿರೇಮಠ

ಆರ್ಯ ಮತ್ತು ದ್ರಾವಿಡ ಎಂಬ ಪರಿಕಲ್ಪನೆಗಳು ಜಾನಾಂಗೀಯ (ರೇಸಿಯಲ್)ವಲ್ಲ ಎಂಬುದನ್ನು ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ. ಭಾರತೀಯ ಸಂದರ್ಭದಲ್ಲಿ ಸಾಂಸ್ಕೃತಿಕವಾಗಿ ವೈದಿಕ ಮತ್ತು ಆದಕ್ಕೂ ಪೂರ್ವದಲ್ಲಿದ್ದ ದೇಶೀಯ ಪರಂಪರೆಯನ್ನು ಅವೈದಿಕ ಎಂದೋ ದ್ರಾವಿಡ ಎಂದೋ ಹೇಳುತ್ತಾ ಬಂದಿರುವುದೂ ಸ್ಪಷ್ಟವಿದೆ. ವೈದಿಕವಲ್ಲದ್ದನ್ನು ಅವೈದಿಕ ಎಂದು ಹೇಳುವುದಕ್ಕಿಂತ ದ್ರಾವಿಡ ಎಂಬ ಪರಿಕಲ್ಪನೆಯನ್ನು ಬಳಸುವುದೇ ಹೆಚ್ಚು ಸೂಕ್ತ. ಪ್ರಖ್ಯಾತ ತತ್ತ್ವಶಾಸ್ತ್ರಜ್ಞ ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರು ದ್ರಾವಿಡ ಎಂಬ ಪದವನ್ನು ಬಳಸುವುದೇ ಇಲ್ಲ. ಅವೈದಿಕ ಎಂದೇ ಬಳಸುತ್ತಾರೆ. ದ್ರಾವಿಡರಲ್ಲೂ ಆಸ್ಟ್ರೊಲೈಡ್, ನೀಗ್ರೊಯೆಟ, ಮೆಡಿಟರೇನಿಯನ್ ಜನ ಮೂಲ ರಕ್ತದ ಬೆರಕೆ ಇರುವುದರಿಂದ ದ್ರಾವಿಡವನ್ನು ಬಹುಮೂಲೀಯ ಜನಸಂಸರ್ಗ ಸಮುದಾಯವೆಂದೇ ಭಾವಿಸಬೇಕು. ಭಾಷಿಕವಾಗಿ ಆರ್ಯ. ದ್ರಾವಿಡ ಪದ ಪರಿಕಲ್ಪನೆಗಳಲ್ಲಿ ಸ್ಪಷ್ಟ ವ್ಯತ್ಯಾಸವಿದ್ದೇ ಇದೆ. ಆದರೆ ಇವು ಬರೀ ಭಾಷಾಶಾಸ್ತ್ರೀಯ ವ್ಯತ್ಯಾಸಗಳಷ್ಟೇ ಅಲ್ಲ. ಸಾಂಸ್ಕೃತಿಕವಾಗಿ ಮತ್ತು ತತ್ತ್ವಶಾಸ್ತ್ರೀಯವಾಗಿ ಅವುಗಳ ಪರಂಪರೆಯಲ್ಲಿ ಅನನ್ಯತೆಗಳಿವೆ. ಕಲಬೆರಕೆಯೂ ಇರುವುದರಿಂದ ಒಂದು ಬಗೆಯ ಸಂಕೀರ್ಣ ಸನ್ನಿವೇಶ ನಿರ್ಮಾಣಗೊಂಡಿದೆ. ಆದರೆ ನಮ್ಮ ದೇಶದ ಸಾಮಾಜಿಕಾರ್ಥಿಕ ಬೆಳವಣಿಗೆಯಲ್ಲಿ ಎಲ್ಲ ಹಂತಗಳ ಜನಕುಲಗಳನ್ನು ಮತ್ತು ಜಾತಿ ವ್ಯವಸ್ಥೆಯಲ್ಲಿ ಬುಡಕಟ್ಟು ಮೂಲದ ಆಶಯಗಳು ಉಳಿದು ಬಂದಿರುವುದರಿಂದ ಆರ್ಯ ಅಥವಾ ವೈದಿಕ ಮತ್ತು ದ್ರಾವಿಡ ಸಂಸ್ಕೃತಿಯ ವಿಭಿನ್ನತೆಗಳನ್ನು ಸ್ಪಷ್ಟವಾಗಿ ಗಮನಿಸಬಹುದಾಗಿದೆ. ಈ ಸಂದರ್ಭದಲ್ಲಿ ಆರ್ಯ ಎಂಬ ಪದಕ್ಕಿಂತ ವೈದಿಕ ಎಂಬ ಪದ ಬಳಕೆ ಹೆಚ್ಚು ಸೂಕ್ತವೆಂಬುದನ್ನು ಗಮನಿಸಬೇಕು. ಭಾರತದಲ್ಲಿ ಸಮಾಜಶಾಸ್ತ್ರವಲ್ಲ, ಜಾತಿಶಾಸ್ತ್ರದ ಅಧ್ಯಯನದ ಅಗತ್ಯವಿದೆ. ವೈದಿಕ ಮತ್ತು ದ್ರಾವಿಡ ಪರಂಪರೆಗಳ ಹಿನ್ನಲೆಯಲ್ಲಿ ಜಾತಿ ವ್ಯವಸ್ಥೆಯ ಅಧ್ಯಯನದಲ್ಲೂ ಸಾಕಷ್ಟು ಒಳನೋಟಗಳು ದಕ್ಕುವ ಸಾಧ್ಯತೆ ಇದೆ.

ವೈದಿಕವು ಶೋಷಕವೆಂದು ದ್ರಾವಿಡವು ಶೋಷಿತವೆಂದು ಸರಳೀಕರಿಸುವುದು ಸರಿಯಲ್ಲ. ಆದರೆ ವೈದಿಕ ಶೋಷಕವರ್ಗ, ಸಾಂಸ್ಕೃತಿಕವಾಗಿ ಹೆಜಿಮನಿ ಸ್ಥಾಪಿಸಿತು. ದ್ರಾವಿಡರಲ್ಲಿದ್ದ ಮೇಲ್ವರ್ಗಗಳು ವೈದಿಕೀಕರಣಗೊಳ್ಳುತ್ತ ಹೋದವು ಇಲ್ಲವೇ ಉತ್ತರ ಮೂಲದ ಅವೈದಿಕ ಮತಗಳಾದ ಜೈನ ಬೌದ್ಧಗಳಿಗೆ ಮಾರುಹೋದವು ಎಂಬುದೇ ಕುತೂಹಲ ಅಂಶ.

ದಕ್ಷಿಣ ಭಾರತದ ನಾಲ್ಕು ರಾಜ್ಯಗಳ ನಾಲ್ಕು ಭಾಷೆಗಳಾದ ತಮಿಳು ಕನ್ನಡ ತೆಲುಗು ಮಲಯಾಳಗಳು ಉತ್ತರದ ಆರ್ಯಮೂಲದ ವೈದಿಕ ಸಂಸ್ಕೃತಿಯನ್ನು ವಿರೋಧಿಸುವ ಮೂಲ ನೆಲೆಗಳಂತೆ ಕಂಡರೂ ಅವುಗಳ ಚಾರಿತ್ರಿಕ ಅನುಭವಗಳು ಬೇರೆಬೇರೆಯಾಗಿವೆ. ಉದಾ: ತಮಿಳುನಾಡಿನಲ್ಲಿ ಈಚೆಗೆ ಪೆರಿಯಾರ್ ಅವರ ಹೋರಾಟದ ರಾಜಕೀಯ, ಸಾಂಸ್ಕೃತಿಕ ಅಯಾಮವಿದೆ. ಅಂಥದು ಉಳಿದ ಮೂರು ನಾಡುಗಳಲಿಲ್ಲ. ಉತ್ತರ ಭಾರತದಲ್ಲಿ ಹರಡಿ ಕೊಂಡಿದ್ದ ದ್ರಾವಿಡರು ಆರ್ಯವೈದಿಕರ ಭಾಷೆ ಮತ್ತು ಸಂಸ್ಕೃತಿ ದಬ್ಬಾಳಿಕೆಯಲ್ಲಿ ತೇಲಿ ಹೋದರು. ದಕ್ಷಿಣ ಭಾರತದಲ್ಲಿ ವೈದಿಕರ ದಬ್ಬಾಳಿಕೆಯಿಂದ (ಪ್ರಭುತ್ವದ ಬೆಂಬಲ ವಿದ್ದುದರಿಂದ) ವೈದಿಕೀಕರಣವೂ ನಡೆಯಿತು. (ಅಗ್ರಹಾರ ವ್ಯವಸ್ಥೆಯೇ ಇದಕ್ಕೆ ಭೌತಿಕ ಆಧಾರ.) ಇಡೀ ದೇಶದಲ್ಲಿ ವಿಸ್ಮೃತಿಗೀಡಾಗಿರುವ ದ್ರಾವಿಡ ಸಂಸ್ಕೃತಿಯ ಮೂಲ ಬೇರು ಗಳನ್ನು ಶೋಷಿತ ಜನ ಜಾತಿ ವರ್ಗಗಳ ಮಾನವಕುಲ ಶಾಸ್ತ್ರೀಯ ಆಧ್ಯಯನದ ಮೂಲಕ ನಾವು ಶೋಧಿಸಬೇಕಿದೆ. ಅದು ಸಿಂಧೂ ನಾಗರಿಕತೆಯಿಂದಲೂ ಉಳಿದು ಬಂದಿರುವ ಸಾಧ್ಯತೆ ಇದೆ. ವರ್ಗ ಮತ್ತು ಜಾತಿ ಹೋರಾಟಗಳ ಸಂದರ್ಭದಲ್ಲಿಯೇ ಈ ಸೂಕ್ಷ್ಮಗಳನ್ನು ಗಮನಿಸಬೇಕಾದುದರ ಜರೂರನ್ನು ನಿರ್ಲಕ್ಷಿಸುವುದು ಆರೋಗ್ಯವಲ್ಲ. ಈ ಹಿನ್ನೆಲೆ ಯಲ್ಲಿಯೇ ಪೆರಿಯಾರ್ ಅವರ ಸಿದ್ಧಾಂತ ಮತ್ತು ಚಳುವಳಿಗಳ ಮಹತ್ವವನ್ನು ಮತ್ತು ಇತಿಮಿತಿಯನ್ನು ಗಮನಿಸಬೇಕಾಗಿದೆ.

ಸಮಕಾಲೀನ ಸಂದರ್ಭದಲ್ಲಿ ವರ್ಗ ಜಾತಿ ಪರಿಕಲ್ಪನೆಗಳಂತೆ ವೈದಿಕ (ಆರ್ಯ) ದ್ರಾವಿಡ ಪರಿಕಲ್ಪನೆಗಳೂ ಪ್ರಸ್ತುತವೇ. ಯಜಮಾನೀ ಸಂಸ್ಕೃತಿ ಮತ್ತು ನಿರ್ಲಕ್ಷಿತ ನೆಲೆಗಳ ಬಹುಮುಖಿ ಸಂಸ್ಕೃತಿಗಳ ತಾಕಲಾಟಗಳ ಅರ್ಥದಲ್ಲೂ ವೈದಿಕ -ದ್ರಾವಿಡ ದ್ವಂದ್ವಕ್ಕೆ, ಸಂಘರ್ಷಕ್ಕೆ ಬೆಲೆ ಇದೆ.

ಭಾರತದ ವಾಮಪಂಥೀಯ ಚಿಂತಕರು ಈಬಗೆಯ ತಾತ್ತ್ವಿಕ ಸೂಕ್ಷ್ಮಗಳನ್ನು ಚರ್ಚಿಸಲಿಲ್ಲ. ಅದು ಪ್ರಗತಿಪರ ಚಿಂತನೆಯ ಒಂದು ದೊಡ್ಡ ಕೊರತೆ. ಇಂದು ಇದು ಒಂದು ಸವಾಲು. ವಿಚಿತ್ರವಾದರೂ ಆರೋಗ್ಯಕರ ಬೆಳವಣಿಗೆ ಎಂದರೆ ವಾಮಪಂಥೀಯ ಯುವ ಚಿಂತಕರಲ್ಲಿ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರು ಎಂಬ ವಿರೋಧಿ ನೆಲೆಗಳು ಖಚಿತಗೊಳ್ಳುತ್ತಿರುವುದು, ಅವರ ನಡುವೆ ತಾತ್ತ್ವಿಕ ಜಗಳ ತೀವ್ರಗೊಳ್ಳುತ್ತಿರುವುದು. ಬ್ರಾಹ್ಮಣರು ವೈದಿಕ ಪರಂಪರೆಗೂ ಬ್ರಾಹ್ಮಣೇತರರು ದ್ರಾವಿಡ ಪರಂಪರೆಗೂ ಆತುಕೊಳ್ಳು ತ್ತಿರುವುದು ಅನಿವಾರ್ಯವೇ, ಸಹಜವೇ. ಹಿಂದೆಯೂ ಬ್ರಾಹ್ಮಣ ಜಾತಿಯಲ್ಲಿರುವ ವೈದಿಕಶಾಹಿ ವಿರೋಧಿ ಗುಂಪುಗಳಾದ ಲೋಕಾಯತರು. ಚಾರ್ವಾಕರು ಎಂದೆಲ್ಲಾ ಇದ್ದರು ಅವರು

ದ್ರಾವಿಡ ಪರಂಪರೆಯನ್ನು ಬೆಂಬಲಿಸಿದ್ದರೆಂದಲ್ಲ. ಇನ್ನೊಂದೆಡೆ ದ್ರಾವಿಡರಲ್ಲಿದ್ದ ಆದಿಮ ತಂತ್ರ, ಯೋಗ, ಸಾಂಖ್ಯ ಮೊದಲಾದ ಭೌತವಾದಗಳನ್ನು ಕೆಲವು ಬ್ರಾಹ್ಮಣರು ಅಪ್ಪಿಕೊಳ್ಳು ತ್ತಿದ್ದರು. ದ್ರಾವಿಡರಲ್ಲಿದ್ದ ಕೆಲವರು (ವಾಲ್ಮೀಕಿ, ವ್ಯಾಸ ಮೊದಲಾದವರು) ಬ್ರಾಹ್ಮಣ ರಾದಂತೆ, ಬ್ರಾಹ್ಮಣರೂ ದ್ರಾವಿಡೀಕರಣಗೊಳ್ಳುತ್ತಿದ್ದರು. ಆದರೆ ಇಂಥ ಉದಾಹರಣೆಗಳು ಅಪವಾದಗಳು ಅಷ್ಟೇ. ಈ ಒಳಜಗಳಗಳಲ್ಲಿ ವೈದಿಕೀಕರಣದ ದಾಳಿ ದಬ್ಬಾಳಿಕೆಯೇ ಗೆದ್ದಿತೆಂದು ದೇವಿಪ್ರಸಾದರ ಅಧ್ಯಯನಗಳು ನಮಗೆ ತೋರಿಸಿಕೊಟ್ಟಿವೆ.

ಟಿಪ್ಪಣಿ ರೂಪದ ಪ್ರತಿಕ್ರಿಯೆ ಇದಾಗಿರುವುದರಿಂದ ಈ ಚರ್ಚೆಯನ್ನು ಇಲ್ಲಿಗೆ ನಿಲ್ಲಿಸುತ್ತೇನೆ.

**ದ್ರಾವಿಡ ಸಂಸ್ಕೃತಿ ಪರಿಕಲ್ಪನೆ**

ಮೇಲಿನ ಚರ್ಚೆಯ ಹಿನ್ನೆಲೆಯಲ್ಲಿ ಮತ್ತು ಅದರ ಮುಂದುವರಿದ ಭಾಗದಂತೆ ಈ ಶೀರ್ಷಿಕೆಯ ವಿಷಯವನ್ನು ಟಿಪ್ಪಣಿಸಬಹುದು.

ಭಾಷಿಕ ನೆಲೆಯಲ್ಲಿ ಇಂಡೋ ಆರ್ಯರ ಭಾಷಾವರ್ಗದಂತೆ ದ್ರಾವಿಡ ಭಾಷಾವರ್ಗದ ಭಾಷೆಗಳೇ ಭಾರತದಲ್ಲಿ ನೂರಾರಿವೆ. ಇವುಗಳಲ್ಲಿ ಕನ್ನಡ, ತಮಿಳು, ತೆಲುಗು, ಮಲಯಾಳ ಗಳಿಗೆ ಮಾತ್ರ ಲಿಖಿತ ಪರಂಪರೆಯಿದೆ ಎಂಬುದರ ಅರ್ಥ ಈ ಭಾಷಿಕ ಜನಕುಲಗಳಷ್ಟೇ ವರ್ಗ ಜಾತಿ ಶೋಷಣೆಗೆ ಒಳಪಟ್ಟವು ಎಂದು. ದೇಶದ ನಾಗರಿಕತೆ ಮತ್ತು ಸಂಸ್ಕೃತಿಯ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಇವು ಭಾಗಿಯಾದವು. ಈ ನಾಲ್ಕನ್ನು ಹೊರತುಪಡಿಸಿ ಉಳಿದ ದ್ರಾವಿಡ ಭಾಷೆಗಳನ್ನು ಮಾತಾಡುವ ಜನಕುಲಗಳು ಬುಡಕಟ್ಟು ಸ್ಥಿತಿಯಲ್ಲೇ ಉಳಿದಿವೆ. ಹಾಗಾಗಿ, ದ್ರಾವಿಡ ಸಂಸ್ಕೃತಿಯ ಸ್ಪಷ್ಟಚಿತ್ರವನ್ನು ಕಟ್ಟಿಕೊಳ್ಳಲು ಸಾಧ್ಯವಾಗುತ್ತಿದೆ. ಆದರೆ ದ್ರಾವಿಡ ಜನಕುಲಗಳ ಶಾಸ್ತ್ರಬದ್ಧ ಅಧ್ಯಯನಗಳು ಇಲ್ಲದಿರುವುದರಿಂದ ದ್ರಾವಿಡ ಸಂಸ್ಕೃತಿಯ ಖಚಿತ ಪರಿಕಲ್ಪನೆಯನ್ನು ಮುಂದಿಡಲು ಆಗುತ್ತಿಲ್ಲ. ಕ್ಷೇತ್ರಕಾರ್ಯ ಮತ್ತು ಸಮೀಚಿನ ಜ್ಞಾನಶಿಸ್ತುಗಳ ಪೂರ್ವ ಸಿದ್ಧತೆಯೊಂದಿಗೆ ದೇಶದ ಜನಕುಲಗಳ ಸಂಸ್ಕೃತಿ ಶೋಧನೆಯಾಗುವುದಾದರೆ ವಿದ್ವತ್ ಕ್ಷೇತ್ರದಲ್ಲೇ ಹೊಸ ಬೆಳಕು ಬೀಳುವ ಸಾಧ್ಯತೆ ಇದೆ. ಕನಿಷ್ಠ ಪಕ್ಷ ದಕ್ಷಿಣದ ನಾಲ್ಕು ರಾಜ್ಯಗಳ ಜನಕುಲಗಳ ಸಂಸ್ಕೃತಿ ಪರಂಪರೆಯ ತೌಲನಿಕ ವ್ಯಾಸಂಗವಾಗಬೇಕಿದೆ. ದ್ರಾವಿಡ ಸಂಸ್ಕೃತಿ ಸತ್ತುಹೋದ ಪರಿಕಲ್ಪನೆಯಲ್ಲ. ಜೀವಂತವಿರುವ, ನಿರ್ಲಕ್ಷ್ಯಕ್ಕೀಡಾಗಿರುವ, ಅವಶ್ಯವಾಗಿ ಶೋಧಿತವಾಗ ಬೇಕಿರುವಂಥದ್ದು. ಸಿಂಧೂ ನಾಗರಿಕತೆ ಯಿಂದ ಹೊಂದುಗಡಿಯದಂತೆ ದೇಶವ್ಯಾಪಿಯಾಗಿ ಹರಿದು ಬಂದಿರುವ ಇದರ ವಿರಾಟ್ ಸ್ವರೂಪವನ್ನು ಅಧ್ಯಯನಿಸುವ ಅಗತ್ಯವಿದೆ.

ಇಂದು ಬುಡಕಟ್ಟುಗಳು ಮತ್ತು ಜಾತಿಗಳು ವಾಸ್ತವಾಂಶಗಳಾಗಿದ್ದರೂ ಅವುಗಳಲ್ಲಿ ಅಂತರವಾಹಿನಿಯಾಗಿರುವುದು ದ್ರಾವಿಡ, ವೈದಿಕ ಸಂಸ್ಕೃತಿಗಳೇ ಮತ್ತು ಇವುಗಳ ಸಮನ್ವಯಿತ ರೂಪಗಳೇ. ಸಂಘರ್ಷ ಮತ್ತು ಸಮನ್ವಯದ ನೆಲೆಗಳನ್ನು ಪೂರ್ವಗ್ರಹೀತವಲ್ಲದ, ಸತ್ಯನಿಷ್ಠ ದೃಷ್ಟಿಕೋನದಿಂದ ವೈಜ್ಞಾನಿಕವಾಗಿ ವ್ಯಾಸಂಗಿಸುವ ಅಗತ್ಯವಿದೆ. ಭಾಷಿಕವಾಗಿ ಮರಾಠಿ

ಇಂಡೊ ಆರ್ಯನ್ ಭಾಷಾವರ್ಗಕ್ಕೆ ಸೇರಿದರೂ ಮರಾಠಿ ಧನ್ಗರರು ದ್ರಾವಿಡ ಕುರುಬರೇ. ಇದೇ ಮಾತನ್ನು ದೇಶವ್ಯಾಪಿಯಾಗಿರುವ ದಲಿತ, ಗೊಲ್ಲ, ಯಾದವ ಮೊದಲಾದವರ ಬಗೆಗೂ ಹೇಳಲು ಸಾಧ್ಯವಿದೆ. ಆಯಾಯಾ ಪ್ರದೇಶಗಳಲ್ಲಿ ಆಯಾಯಾ ಜನಕುಲಗಳಲ್ಲಿ ಉಳಿದು ಬಂದಿರುವ ದ್ರಾವಿಡ ಸಂಸ್ಕೃತಿ ಪರಂಪರೆಯನ್ನು ಗುರುತಿಸಬೇಕಾಗಿದೆ. ಅಂತಿಮವಾಗಿ ಅವರಲ್ಲೇ ಮೂಲ ಕೃಷಿಕರು ಮತ್ತು ಮೂಲ ಪಶುಪಾಲಕರು ಎಂದು ವೃತ್ತಿನೆಲೆಯ ಎರಡು ಪ್ರಧಾನ ಗುಂಪುಗಳಾಗುತ್ತವೆ. ಆರ್ಯ. ವೈದಿಕರಂತೂ ಪಶುಪಾಲಕ ಸಂಸ್ಕೃತಿಯವರೆಂಬುದು ಸರ್ವವಿದಿತ. ಆದರೆ, ದ್ರಾವಿಡರಲ್ಲಿದ್ದ ಪಶಾಪಾಲಕರಿಗೂ ವೈದಿಕ ಪಶುಪಾಲಕರಿಗೂ ಸ್ಪಷ್ಟ ವ್ಯತ್ಯಾಸಗಳಿದ್ದವು. ಹಾಗಾಗಿ ದ್ರಾವಿಡ ಸಂಸ್ಕೃತಿಯಲ್ಲಿ ಹಟ್ಟಿ ಸಂಸ್ಕೃತಿ (ಪಶುಪಾಲಕರು )ಮತ್ತು ಹಳ್ಳಿಸಂಸ್ಕೃತಿ (ನೆಲಸುಗಾರ ಕೃಷಿಕರು) ಎಂಬ ಪ್ರಧಾನ ನೆಲೆಗಳಿವೆ. ನನ್ನ ಅಲ್ಪಮಟ್ಟಿನ ಶೋಧನೆಯ ಪ್ರಕಾರ ಮೂಲ ಕೃಷಿಕರ ಹಳ್ಳಿಸಂಸ್ಕೃತಿಯ ನಿರ್ಮಾತೃಗಳು, ಇಂದಿನ ದಲಿತ ಮೂಲದ ಹೊಲೆಯರು, ಮಾದಿಗರು (ಅಸ್ಪೃಶ್ಯರು). ಪಶುಪಾಲಕರಿಗಿಂತ ಕೃಷಿಕ ಸಮುದಾಯ ನಾಗರಿಕತೆ ಸಂಸ್ಕೃತಿಯ ಬೆಳವಣಿಗೆಯಲ್ಲಿ ಮುಂದಿರುತ್ತದೆಂಬುದನ್ನು ಜಗತ್ತಿನ ಹಲವಾರು ನಾಗರಿಕತೆಗಳ ಅಧ್ಯಯನಗಳು ತೋರಿಸಿಕೊಟ್ಟಿವೆ. ಆದರೆ ದಾಳಿ ದಬ್ಬಾಳಿಕೆಯಲ್ಲಿ ಮುಂದುವರೆದ ಸಂಸ್ಕೃತಿಗಳು ನಾಶವಾದದ್ದೋ ಸೋತದ್ದೋ ಇದೆ. ಈ ಮಾತುಗಳು ಹೊಲೆಯ ಮಾದಿಗ ಮೊದಲಾದ ಜನ ಸಮುದಾಯಗಳಿಗೆ ಅನ್ವಯಿಸುತ್ತವೆ. ಪಶುಪಾಲಕ ವೃತ್ತಿಯಲ್ಲೇ ಒಳಜಾತಿಗಳು ಸೃಷ್ಟಿಯಾದಂತೆ ಕೃಷಿಕ ವೃತ್ತಿ, ಉಪವೃತ್ತಿ, ಪೂರಕ ವೃತ್ತಿಗಳ ಜಾತಿಗಳಾದವು. ಪಶುಪಾಲಕರು ಕೃಷಿಕರಾದರು, ಕೃಷಿಕರು ಪಶುಪಾಲನೆಯನ್ನು ಆಳವಡಿಸಿಕೊಂಡರು. ಹೀಗಾದಾಗಲೆಲ್ಲ ಹೊಸ ಹೊಸ ಜಾತಿಗಳು ಹುಟ್ಟಿಕೊಂಡವು.

ನನ್ನ ಹಲವಾರು ಲೇಖನಗಳು ಮತ್ತು ಗ್ರಂಥಗಳಲ್ಲಿ ಈ ವಿಷಯದ ವಿವರವಾದ ಚರ್ಚೆಯಿರುವುದರಿಂದ ಸದ್ಯಕ್ಕೆ ಈ ಟಿಪ್ಪಣಿಯನ್ನು ಇಷ್ಟಕ್ಕೆ ನಿಲ್ಲಿಸಬಹುದು.



## ೨

# ದ್ರಾವಿಡ ಸಂಸ್ಕೃತಿ ಚಿಂತನೆಯ ತಾತ್ತ್ವಿಕ ಹಿನ್ನೆಲೆ

ಪ್ರೊ. ಎಸ್.ಎಸ್.ಹಿರೇಮಠ

ಭಾರತೀಯ ಸಮಾಜವು ಜಾತಿಬದ್ಧವಾಗಿರುವುದರಿಂದ ಜಾತಿಗಳ ವೈಜ್ಞಾನಿಕ ಅಧ್ಯಯನವಷ್ಟೇ ಭಾರತದ ವಸ್ತುನಿಷ್ಠವಾದ ಮತ್ತು ಸಮಗ್ರವಾದ ಕಲ್ಪನೆಯನ್ನು ತಂದು ಕೊಡಬಲ್ಲದು. ಭಾರತದಲ್ಲಿ ಸಮಾಜ 'ಜಾತಿ'ಯ ರೂಪದಲ್ಲಿರುವುದರಿಂದ 'ಸಮಾಜಶಾಸ್ತ್ರ'ವು (ಸೋಶಿಯಾಲಾಜಿ) ಇಲ್ಲಿ 'ಜಾತಿಶಾಸ್ತ್ರ' (ಕಾಸ್ಟಾಲಾಜಿ) ವಾಗಬೇಕಾ ದುದು ಅನಿವಾರ್ಯ.

'ಆರ್ಯ-ವೈದಿಕ' ಮತ್ತು 'ದ್ರಾವಿಡ' ಎಂಬ ನೆಲೆಯ ಅಧ್ಯಯನದ ಮಹತ್ವವು

೧. ದ್ರಾವಿಡ ಭಾಷೆಗಳನ್ನಾಡುವ ಜನ ಸಮೂಹಗಳ ತೌಲನಿಕ ವ್ಯಾಸಂಗದಿಂದಲೂ

೨. ವೈದಿಕಾರ್ಯ ಮತ್ತು ದ್ರಾವಿಡ ಜಾತಿಗಳ ತುಲನೆಯಿಂದಲೂ ಖಚಿತಗೊಳ್ಳುತ್ತದೆ.

ಶತಮಾನ ಹಿಂದೆ ಥರ್‌ಸ್ಟನ್ ದಕ್ಷಿಣ ಭಾರತದ ಜಾತಿಗಳು ಮತ್ತು ಬಡಕಟ್ಟುಗಳ ಸಾಮಾಜಿಕ ವಿವರಗಳನ್ನು ಏಳು ಸಂಪುಟಗಳಲ್ಲಿ ಪ್ರಕಟಿಸಿದ. ಈ ಅಪರೂಪದ ಮಾಹಿತಿ ಸಂಗ್ರಹ ಕಾರ್ಯದಲ್ಲಿ ಕೊಲೆನಿಯಲ್ ಹಿತಾಸಕ್ತಿ ಕೆಲಸ ಮಾಡಿದರೂ ದ್ರಾವಿಡ ಪರಂಪರೆಯ ಶೋಧನೆಗೆ ಈ ಸಂಗತಿಗಳು ಮೂಲ ಸಾಮಗ್ರಿಯನ್ನು ಒದಗಿಸುತ್ತವೆ.

ಅನಂತಕೃಷ್ಣ ಆಯ್ಯರ್ ಮತ್ತು ನಂಜುಂಡಯ್ಯ ಇದೇ ಬಗೆಯ ಕೆಲಸವನ್ನು ಕರ್ನಾಟಕಕ್ಕೆ, ಸಂಬಂಧಿಸಿದಂತೆ ಕೈಗೊಂಡರು. ಅಲ್ಲಿ ಕೊಲೊನಿಯಲ್ ಅಲ್ಲ ಮೇಲ್ವರ್ಗ ಮತ್ತು ಮೇಲ್ ಜಾತಿಯ ಪೂರ್ವಾಗ್ರಹಗಳು ಕೆಲಸ ಮಾಡಿವೆ.

ಶತಮಾನದ ಹಿಂದಿನ ಈ ಬಗೆಯ ಮಾಹಿತಿಗೆ ಇಂದಿಗಿಂತ ಹೆಚ್ಚಿನ ಪ್ರಾಚ್ಯರೂಪ ಇರುತ್ತದೆ. ಬಂಡವಾಳಶಾಹಿ ವ್ಯವಸ್ಥೆಯ ಹುಟ್ಟಿನ ಮೊದಲ ಹಂತದ ಅನುಭವಗಳು ಪ್ರಾಚ್ಯಸ್ಥಿತಿಯನ್ನು ಉಳಿಸಿಕೊಂಡಿರುವುದು ಸಹಜವೇ. ಏಕೆಂದರೆ : ಭಾರತೀಯ ಪರಂಪರೆಗೆ ಬಂಡವಾಳಶಾಹಿಯಷ್ಟೇ ನಿರ್ಣಾಯಕವಾದ ಬಲು ದೊಡ್ಡ ಹೊಡೆತವನ್ನು ಅದು ನೀಡಲಿತ್ತು.

ದಕ್ಷಿಣ ಭಾರತದ ನಾಲ್ಕು ರಾಜ್ಯಗಳ ಕನ್ನಡ, ತೆಲುಗು, ತಮಿಳು ಮತ್ತು ಮಲಯಾಳಂ ಭಾಷೆಗಳು ದ್ರಾವಿಡ ಮೂಲದವು. ಅವಕ್ಕೆ ಮಾತ್ರ ಸಹಸ್ರಾರು ವರ್ಷಗಳ ಲಿಪಿ ಪರಂಪರೆಯಿದೆ.

ಅಂದರೆ ಇವನ್ನು ಮಾತನಾಡುವ ಜನ ಸಮೂಹಗಳಷ್ಟೇ ವರ್ಗ ಶೋಷಣೆಗೆ ಗುರಿಯಾದವು. ನಾಗರಿಕತೆ ಮತ್ತು ಸಂಸ್ಕೃತಿಯ ಮೇಲು ಮೇಲಿನ ಘಟ್ಟಗಳನ್ನು ಏರುತ್ತ ಬಂದವು. ಆದರೆ ಉಳಿದ ನೂರಾರು ದ್ರಾವಿಡ ಭಾಷೆಗಳನ್ನು ಆಡುವ ಜನ ಸಮುದಾಯ ವರ್ಗ-ವರ್ಣಗಳ ಹಿಡಿತಕ್ಕೆ ಸುಲಭದಲ್ಲಿ ಸಿಕ್ಕಲಿಲ್ಲ. ಅಂದರೆ ಅವು ತಮ್ಮ ಬುಡಕಟ್ಟು ಸ್ವರೂಪದಲ್ಲೇ ಪರಿವರ್ತನೆಗೊಳ್ಳುತ್ತ ಬದುಕುಳಿದವು. ದಕ್ಷಿಣ ಭಾರತದ ಭೌಗೋಲಿಕ ಸನ್ನಿವೇಶಗಳು ಇಂಥ ಜೀವನ ಸ್ಥಿತಿಗೆ ಅನುಕೂಲಕರವೆ ಇವೆ. ಮಧುರೈ ಜಿಲ್ಲೆಯ ಕಾಡುಗಳಲ್ಲಿರುವ 'ಪಳಿಯನ್'ರು ಅನಾಗರಿಕ ಸ್ಥಿತಿಯಲ್ಲಿರುವ ಒಂದು ಬುಡಕಟ್ಟು. ಇಂಥ ಹಲವಾರು ಜನ ಕುಲಗಳು ದಕ್ಷಿಣದಲ್ಲಿವೆ.

ಈ ಸಂಗತಿಯನ್ನು ಹೀಗೆಯೂ ಹೇಳಬಹುದು ದ್ರಾವಿಡ ಕುಲಗಳ ಅಭ್ಯಾಸದ ಒಂದು ವೈಶಿಷ್ಟ್ಯವೆಂದರೆ : ಸಾಮಾಜಿಕಾರ್ಥಿಕ ಬೆಳವಣಿಗೆಯ ಎಲ್ಲ ಹಂತಗಳಲ್ಲಿ ಬದುಕುತ್ತಿರುವ ಜನವರ್ಗಗಳನ್ನು ಕಾಣಲು ಸಾಧ್ಯವಿರುವುದು. ತೀರ ಅನಾಗರಿಕವೆಂದು ತೋರುವ ಬುಡಕಟ್ಟುಗಳಿಂದ ಮೊದಲು ಮಾಡಿಕೊಂಡು ನಾಗರಿಕತೆಯ ಬೇರೆ ಬೇರೆ ಸ್ಥಿತ್ಯಂತರಗಳಲ್ಲಿರುವ ಜನಕುಲಗಳು ಆರ್ಯವೈದಿಕ ಸಂಸ್ಕೃತಿ ಪರಂಪರೆಗಿಂತ ತಾವು ಸ್ಪಷ್ಟವಾಗಿ ಭಿನ್ನ ವಿರುವುದನ್ನು ನಿರೂಪಿಸುತ್ತವೆ.

ಹೀಗೆ ಹೇಳಿದರೂ ದ್ರಾವಿಡ ಅಥವಾ ಕನ್ನಡ ಕುಲಗಳ ಕಾಲಾನುಕ್ರಮದ ಸಾಮಾಜಿಕಾರ್ಥಿಕ ಪ್ರಗತಿಯ 'ಇಡೀ' ಚರಿತ್ರೆಯನ್ನು ಸಮಗ್ರವಾಗಿ ಕಟ್ಟಿಕೊಳ್ಳಲು ಸಾಧ್ಯವೆಂದು ಅರ್ಥವಲ್ಲ. ಏಕೆಂದರೆ ಕನ್ನಡ ಕುಲಗಳಿಗೆ ಸಂಬಂಧವಿಲ್ಲದ ವಿಭಿನ್ನ ಕುಲಗಳು ಕಾಲಕಾಲಕ್ಕೆ ವಲಸೆ ಬಂದು ನೆಲೆಯೂರಿರುವ ಸಾಧ್ಯತೆಗಳಿವೆ. ಅವು ತಮ್ಮ ಪ್ರತ್ಯೇಕ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೆಣಗಿವೆ. ಇದಕ್ಕೆ 'ಜಾತಿ' ಪದ್ಧತಿಯೂ ವರವಾಗಿ ಪರಿಣಮಿಸಿದೆ. ಆದರೆ ಅವು ತಮ್ಮ ಮಾತೃಭಾಷೆಯನ್ನು ಕಳಕೊಳ್ಳುತ್ತ 'ಕನ್ನಡ'ವಾಗಿರುವ ಸಾಧ್ಯತೆಯಿದೆ. ಉದಾಹರಣೆಗೆ ಆಂಧ್ರ ಮೂಲದ ಮಾದಿಗರು ಕನ್ನಡ ನಾಡಿಗೆ ವಲಸೆ ಬಂದು ನೆಲೆಗೊಂಡು ಕನ್ನಡ ಮಾದಿಗರಾದರು. ಆಂಧ್ರದ ಯಾನಾಡಿ, ಚಂಚ್, ಬೇಡ ಮತ್ತು ವೇಡನ್‌ರು ಒಂದೇ ಮೂಲದವರಾಗಿದ್ದು ದ್ರಾವಿಡರ ಆಗಮನದ ಮೊದಲೆ ಇಲ್ಲಿದ್ದ ಜನಕುಲಗಳಾಗಿರುವ ಸಾಧ್ಯತೆಯಿದೆ. ಒಡಿಸಾದ ಸವರರ (ಶಬರ) ಬಗ್ಗೆ ಸಿಗುವ ವಿವರಗಳೂ ಈ ಊಹೆಯನ್ನು ಬಲಪಡಿಸುತ್ತವೆ. (ಏಳು ಗಂಡಂದಿರನ್ನು ಹೊಂದಿರುವ ಯನಾಡಿ ಹೆಂಗಸು ಸಮುದಾಯದಲ್ಲಿ ಅತ್ಯಂತ ಗೌರವಾನ್ವಿತಳೆಂದು ಪರಿಗಣಿಸಲ್ಪಡುತ್ತಾಳೆ. ಇವರಲ್ಲಿ ಹೊನ್ನವರೆ ಗಿಡದ (ತಂಗಡಿ) ಹೂ ತಾಳಿಯ ಪರ್ಯಾಯವಾಗಿದೆ. ಇಂಥ ಹಲವಾರು ಕುತೂಹಲಕಾರಿ ಪ್ರಾಚ್ಯ ಸಂಗತಿಗಳು ಸಾಂಸ್ಕೃತಿಕ ಶೋಧನೆಗೆ ಆಕರಗಳಾಗಿವೆ.

ಸಾಮ್ಯವಿರುವ ದ್ರಾವಿಡ ನಾಗರಿಕ ಮತ್ತು ಅನಾಗರಿಕ ಕುಲಗಳ ಪಾರಸ್ಪರಿಕ ಸಂಬಂಧವನ್ನು ಒಮ್ಮೊಮ್ಮೆ ಇದಮಿತ್ಥಂ ಎಂದು ಪ್ರತಿಷ್ಠಾಪಿಸಲು ತೊಂದರೆಯಾಗುತ್ತದೆ. ಉದಾ: ಕಾಡು ಕುರುಬರು ಮತ್ತು ಊರು ಕುರುಬರ ಆಂತರಿಕ ಸಂಬಂಧದ ಎಳೆ ತೀರ ತೆಳುವಾಗಿದೆ. ಈ

ಬಗೆಯ ಗ್ರಹಿಕೆಗೆ ಸಮಗ್ರವಾದ ಅಧ್ಯಯನದ ಕೊರತೆಯೂ ಇರಬಹುದು. ಇಷ್ಟಾಗಿಯೂ ಹಲವಾರು ಕುಲಗಳ ನಡುವೆ ಇರುವ ಸಾಮ್ಯತೆಗಳು ಅವುಗಳ ಒಂದು ಮೂಲದ ಬಗೆಗೆ ಸೂಚನೆ ನೀಡುತ್ತವೆ. ನೀಲಗಿರಿಯ ದ್ರಾವಿಡ ಪಶುಪಾಲಕ ಕುಲಗಳು. ಇಬ್ಬರ ಹೈನುಗಾರಿಕೆ ಮತ್ತು ಪಶುಪಾಲಕ ಸಂಸ್ಕೃತಿಯಲ್ಲಿ ಆಶ್ಚರ್ಯಕರವಾದ ಸಾಮ್ಯತೆಗಳಿವೆ. ಅವು, ಇವೆರಡೂ ಒಂದೇ ಮೂಲದವೆಂಬುದನ್ನು ನಿರ್ದೇಶಿಸುತ್ತದೆಯೇ ಎಂಬ ಸಂಗತಿ ಶೋಧಿತವಾಗಬೇಕಷ್ಟೇ. ಆದರೆ ವೇದಕಾಲೀನ ಪಶುಪಾಲಕ ಆರ್ಯವೈದಿಕದ ಸಂಸ್ಕೃತಿಗಿಂತ ಇವು ಪೂರ್ಣ ಭಿನ್ನವಾಗಿವೆ. ಇದು ಆರ್ಯವೈದಿಕರಿಗಿಂತ ಭಿನ್ನವಾದ 'ದ್ರಾವಿಡತನ'ವನ್ನು ಸಂಸ್ಥಾಪಿಸಲು ಸಹಾಯಕವಾಗುವ ಅಂಶ.

ದ್ರಾವಿಡ ಪರಂಪರೆ ತನ್ನ ಸಂಸ್ಕೃತಿ ಪರಂಪರೆಯ ಮೂಲಕ ಮೊದಲಿನಿಂದಲೂ ಆರ್ಯವೈದಿಕ ಪರಂಪರೆಯನ್ನು ವಿರೋಧಿಸುತ್ತ ಬಂದಿದೆ. ಈ ವೈರುಧ್ಯ ದಕ್ಷಿಣ ಭಾರತದ ಚಾರಿತ್ರಿಕ ಬೆಳವಣಿಗೆಯ ಪ್ರಧಾನ ಸಂಗತಿಗಳಲ್ಲೊಂದು. ಇದು ಭಾರತದ ಚರಿತ್ರೆಯ ಗಮನಾರ್ಹ ವಿಷಯವೂ ಹೌದು. ಲಿಖಿತ ಪರಂಪರೆಯಲ್ಲಿ ಇದರ ಸ್ವರೂಪ ಬೇರೊಂದು ಬಗೆಯಲ್ಲಿ ಉದ್ದಕ್ಕೂ ಉಳಿದು ಬಂದಿದೆ. ಮೇಲ್‌ರಚನಾಂಗಗಳಲ್ಲಿರುವ 'ಭಕ್ತಿ ಚಳುವಳಿ' ಇಂಥ ಒಂದು ಉತ್ತಮ ನಿದರ್ಶನ.

ದಕ್ಷಿಣ ಭಾರತದ ನಾಲ್ಕು ದ್ರಾವಿಡ ರಾಜ್ಯಗಳ ನಾಲ್ಕು ಭಾಷೆಗಳ ಗಡಿಗಳನ್ನು ಮೀರಿ ವೃತ್ತಿಜನಕುಲಗಳು ತಮ್ಮ ಅನನ್ಯ ಸಂಸ್ಕೃತಿ ಪರಂಪರೆಯನ್ನು ಬದುಕಿರುವುದು ದ್ರಾವಿಡ ಜನಕುಲಗಳ ವಿರಾಟ್ ಸ್ವರೂಪಕ್ಕೆ ಅಡಿಪಾಯದಂತಿವೆ. ಭಾಷಿಕ ಮಿತಿಗಳನ್ನು ದಾಟಿ ತೌಲನಿಕವಾಗಿ ವೃತ್ತಿಕುಲಗಳನ್ನು ಅಧ್ಯಯನ ಮಾಡುವುದರ ಮೂಲಕ ಇದು ಖಚಿತಗೊಳಿಸಿಕೊಳ್ಳಬಹುದು.

ದ್ರಾವಿಡ ಕುಲಗಳನ್ನು ವೈದಿಕ ಮೂಲದ ವರ್ಣಜಾತಿಗಳ ಜತೆ ಹೋಲಿಸಿದಾಗ, ಶೋಷಣೆಯನ್ನು ಆಧರಿಸಿ ಹುಟ್ಟಿದ ವೈದಿಕಾರ್ಯರ 'ವರ್ಣ' ಮತ್ತು ಹಿಂದೂ ಧರ್ಮೀಯ ಪರಂಪರೆಯ ಭಿನ್ನಚಿತ್ರ ಸಿಗುತ್ತದೆ. ದ್ರಾವಿಡ ಬುಡಕಟ್ಟು ಕುಲಗಳು "ಜಾತಿ"ಗಳಾಗಿ ಬೆಳೆದುದಕ್ಕೂ, ವೈದಿಕಾರ್ಯರ 'ವರ್ಣ' ವ್ಯವಸ್ಥೆಗೂ ಸಂಬಂಧವೇ ಇಲ್ಲ. ಆದರೆ ಶೋಷಣೆಗೆ 'ವರ್ಣ' ಪದ್ಧತಿಯೇ ಆಧಾರವಾಗಿದ್ದುದರಿಂದ ಮೇಲ್ಪದರದಲ್ಲಾದರೂ ಅದನ್ನು ದ್ರಾವಿಡ ನಾಡುಗಳ ಮೇಲೆ ಹೇರಲಾಯಿತು, ಮತ್ತು ದ್ರಾವಿಡ ಕುಲಗಳನ್ನು 'ಜಾತಿ'ಗಳೆಂದು ಶ್ರೇಣೀಕರಣಕ್ಕೆ ಅಳವಡಿಸಲಾಯಿತು. ವೈದಿಕರ 'ಸ್ಮೃತಿ' ಗ್ರಂಥಗಳಲ್ಲಿ ಕುರುಬ, ಬೇಡ, ಗೊಲ್ಲ, ಮಾದಿಗ, ಹೊಲೆಯ, ಉಪ್ಪಾರ, ಲಿಂಗಾಯತ, ಒಕ್ಕಲಿಗ ಮೊದಲಾದ ಕುಲಗಳ ಹೆಸರುಗಳೇ ಇಲ್ಲ ಎಂಬುದು ಮೇಲಿನ ವಿಚಾರಕ್ಕೆ ಒಂದು ಸಣ್ಣ ಸಾಕ್ಷಿ. ದ್ರಾವಿಡ ಮತ್ತು ವೈದಿಕ ಪರಿವರ್ತಿತ ತುಲನೆಯಿಂದ ವರ್ಗವರ್ಣ ಶೋಷಣೆಯ ಆಧಾರದ ಪರಿವರ್ತಿತ ಮೌಲ್ಯಗಳನ್ನು ಮತ್ತು ಶಿಷ್ಟ ಸಂಸ್ಕೃತಿ ನಿರ್ಮಾಣದ ಗೊಂದಲವನ್ನು ಎತ್ತಿ ತೋರಿಸಲು ಶಕ್ಯವಿದೆ. ಇದನ್ನು ಪ್ರತಿಭಟಿಸಿ ನಿಲ್ಲುವ ಛಾತಿಯನ್ನು ದ್ರಾವಿಡ ಕುಲಪರಂಪರೆ ತೋರಿಸುತ್ತದೆ. ಹೀಗೆ ಭಾರತದ

ಪ್ರಧಾನ ಸಾಂಸ್ಕೃತಿಕ ಮುಖಾಮುಖಿ, ವೈರುದ್ಧ್ಯ, ಸಂಘರ್ಷಗಳ ಚರಿತ್ರೆ ಉದ್ಘಾಟನೆಗೊಳ್ಳುತ್ತದೆ.

ಏಕರೂಪಿ, ಏಕಮುಖಿ, ಕೇಂದ್ರೀಕೃತ ಚಿಂತನಾ ವಿಧಾನದ ಸಾರ್ವಭೌಮತೆಯನ್ನು ಛಿದ್ರಗೊಳಿಸಿ ಹೊಸ ಮಾದರಿಗಳ (ಚಿಂತನಾ ಮಾದರಿ ಮತ್ತು ಜೀವನ ವಿಧಾನ ಮಾದರಿ) ಸ್ಥಾಪನೆಗೆ ಸಾಧ್ಯವಾಗುತ್ತದೆ. ಆಗಲೆ ಅಸ್ತಿತ್ವದಲ್ಲಿದ್ದು ಉಸಿರು ಹಿಡಿದಿರುವ ಜೀವನ ವಿಧಾನವನ್ನು 'ಹೊಸತೆಂಬಂತೆ' ಅರ್ಥೈಸುವುದು 'ಚಿಂತನಾ ಮಾದರಿ'ಯ ಪ್ರತಿಷ್ಠಾಪನೆಯೇ ಹೌದು! ಹಾಗಾಗಿ ಈ ಚಿಂತನೆ ಹೊಸ ಜೀವನ ವಿಧಾನವನ್ನು ಹುಟ್ಟುಹಾಕುವುದಿಲ್ಲ' ಇರುವ 'ಆಚಾರ'ಗಳನ್ನು ಮೊದಲು ಸರಿಯಾಗಿ ಅರ್ಥೈಸಲು ಮತ್ತು ಅದರಿಂದ ಇತ್ಯಾತ್ಮಕವಾದ ಹೊಸ ಜೀವದ್ರವ್ಯವನ್ನು ಚಿಂತನೆಗೆ ಎಳೆದು ತರುವುದು ಉದ್ದೇಶ.

ಆಚಾರ ಮತ್ತು ವಿಚಾರಗಳ ನಡುವೆ ಕೃತಕವಾದ ಉದ್ದೇಶಪೂರ್ವಕವಾದ ಮತ್ತು ವಿದ್ರೋಹದ ಒಡಕನ್ನು ಸಾಧಿಸಿ ಪ್ರತ್ಯೇಕಗೊಳಿಸಿದ್ದು ಆರ್ಯವೈದಿಕರ ವಿಜಯದ ಸಾಧನೆ. ಈ ವಿದ್ರೋಹಕ್ಕೆ ಮುಗ್ಧವಾಗಿ ಬಲಿಯಾದ ದಡ್ಡತನ ನಿರ್ದಿಷ್ಟ ದ್ರಾವಿಡ ಕುಲಗಳ ಸೋಲು.

ಹೀಗೆ ಎರಡು ಸ್ತರಗಳು ವಿಜಯದ ಮತ್ತು ಸೋಲಿನ ಇತಿಹಾಸದುದ್ದಕ್ಕೂ ಉಳಿದು ಕೊಂಡು ಬಂದವು. ಅವುಗಳ ಸಂಘರ್ಷಾತ್ಮಕ ತೀವ್ರತೆಯನ್ನು ಆಧರಿಸಿ ಚರಿತ್ರೆಯ ಚಲನಶೀಲತೆ ನಿರ್ಧಾರವಾಗುತ್ತ ಬಂದುದು ದಕ್ಷಿಣದ ಪ್ರಗತಿಯ ಲಕ್ಷಣಗಳಲ್ಲೊಂದಾಗಿದೆ. ನಿರಂತರವಾದ ದಾಳಿ, ದೌರ್ಜನ್ಯ, ದಬ್ಬಾಳಿಕೆ ಹೇರಿಕೆ, ಒಳತೂರುವಿಕೆಯ ಮೇಲ್‌ಸ್ತರ ಆರ್ಯವೈದಿಕರ ಕೊಡುಗೆ. 'ಚಲನೆ'ಗೆ ಅನಿವಾರ್ಯವಾದ ದ್ವಂದ್ವದಲ್ಲಿ, ಒಂದು ಮೇಲು, ಇನ್ನೊಂದು ಕೀಳು ಎಂಬ ನೆಲೆಯಲ್ಲಿ ನಡೆಯುವ ಸಂಘರ್ಷದ ರೀತಿಯ ಪರಿಣಾಮ ವಿದಿತವೇ. ಮೇಲ್‌ಸ್ತರವನ್ನು ನಿರಂತರವಾಗಿ ಎದುರಿಸುತ್ತ ತನ್ನ ಅಸ್ತಿತ್ವದ ಉಳಿವಿಗೆ ಪ್ರಯತ್ನಿಸುತ್ತ, ಪ್ರತಿರೋಧವನ್ನೊಡ್ಡಿ ನಿಲ್ಲುವ ಕೆಳಸ್ತರದ ಸ್ಥಿತಿ ಚಿಂತಾಜನಕ. ಪ್ರತಿ ವಿರೋಧದ ಲಕ್ಷಣ ಪ್ರಾದೇಶಿಕವೂ ಮತ್ತು ಸಾಂದರ್ಭಿಕವೂ ಆಗಿರುತ್ತದೆ. ಹಾಗಾಗಿ ಸಮ ರೂಪದ ಚಲನಶೀಲತೆಯಲ್ಲ ಏರಿಳಿತದ ಅಸಮಾನ ಬೆಳವಣಿಗೆ ದಕ್ಷಿಣದ ಸಹಜ ಲಕ್ಷಣ ವಾಯಿತು.

ವೈರುದ್ಧ್ಯಗಳ ಸಂಘರ್ಷ ಪ್ರಗತಿಯ ಮೂಲದ್ರವ್ಯ ಎಂದಾದರೆ, ಸರಳರೇಖಾತ್ಮಕ ವಾಗಲ್ಲ, ತನ್ನ ಇಡಿ ಸಂಕೀರ್ಣ ಸಾಮಾಜಿಕಾರ್ಥಿಕ ಒಪ್ಪಂದದಲ್ಲಿ ಈ ಹೋರಾಟ ದಕ್ಷಿಣ ದಲ್ಲಿತ್ತು. ಭಾಷೆಯ ಆಧಾರದ ಪರಸ್ಪರ ಪ್ರತ್ಯೇಕತೆಯ ಕಾಲದಿಂದೀಚೆ ಕುಲಗಳಲ್ಲ ಭಾಷೆ ತಂದ ಒಡಕಿನ ಪರಿಣಾಮ ಅಗಾಧವಾದುದು. ದುರಂತವೆಂದರೆ ವಿಜ್ಞಾನಯುಗದಲ್ಲೂ ಈ ಪರಿಕಲ್ಪನೆಯ ಸುಳ್ಳನ್ನು ಒಡೆಯಲು ಸಾಧ್ಯವಾಗದೇ ಹೋದುದು.

ಕುಲಗಳು ಒಂದಾಗಿದ್ದು, ಭಾಷೆ ಬೇರೆಯಾದಾಗ ಕುಲಗಳ ನಡುವೆ ಒಡಕಾಗಿ, ಪ್ರತ್ಯೇಕ ಕುಲಗಳಾದುದು ಹಿಂದಿನಿಂದಲೂ ದ್ರಾವಿಡ ಪರಂಪರೆ ಕಂಡ ಲಕ್ಷಣವೇ. ಆದರೆ ಇದು ಸಾಮಾನ್ಯ ಲಕ್ಷಣವಾಗಿರಲಿಲ್ಲ. ಅಂದರೆ ರಾಷ್ಟ್ರೀಯ ವಿಮೋಚನಾ ಚಳುವಳಿಯ ಕಾಲದ

ಮತ್ತು ಸ್ವಾತಂತ್ರ್ಯೋತ್ತರ ಭಾರತದ ಎಚ್ಚರದ ಪ್ರಕ್ರಿಯೆಯಲ್ಲಿ ಹುಟ್ಟಿದ ಭಾಷೆಗಳ ಆಧಾರದ ಗಡಿ ಪ್ರತ್ಯೇಕತೆ ಜನಗಳ ನಡುವೆ ಭದ್ರವಾದ ಗೋಡೆಗಳನ್ನು ನಿರ್ಮಿಸಿ, ಪರಸ್ಪರ ಸಹಕಾರ, ಸಹಾಯ, ಅನಿವಾರ್ಯವಾಗಿ ಒಟ್ಟಾಗಿ ಬಾಳಬೇಕಿದ್ದ ಸಂದರ್ಭಗಳನ್ನು ಅನುಮಾನಿಸುತ್ತ ದ್ವೇಷಿಸುತ್ತ ಬರಲಾಗಿದೆ. ಪರಸ್ಪರರಿಂದ ಕಲಿಯಬೇಕಾದುದು ಬಹಳಷ್ಟಿದ್ದರೂ ದ್ವೇಷ, ಅಸಹನೆಗಳೆ ಹೆಚ್ಚಿ ಅನಗತ್ಯ ತಾಟಸ್ಥ್ಯ ವಾತಾವರಣ ಉಂಟಾಗಿದೆ.

ವೈದಿಕಾರ್ಯರ ಉತ್ತರದ ಮಾದರಿಯನ್ನೇ ಶ್ರೇಷ್ಠವೆಂದು ಅನುಕರಣೀಯವೆಂದು ಸತತವಾಗಿ ಪ್ರತಿಪಾದಿಸುತ್ತ ಬಂದುದರ ದುಷ್ಪರಿಣಾಮವೇ ದಕ್ಷಿಣದ ಸೋದರ ಸಂಸ್ಕೃತಿಗಳ ನಡುವೆ ದ್ವೇಷದ ವಾತಾವರಣ ನಿರ್ಮಾಣವಾದುದು. ದ್ರಾವಿಡ ಶಿಷ್ಟ ಸಂಸ್ಕೃತಿಗಳ ನಡುವಿನ ಕೊಳು ಕೊಡೆಗಿಂತ ಮಹತ್ವದ್ದು ಆರ್ಯ ವೈದಿಕರು ಮತ್ತು ದ್ರಾವಿಡರ ನಡುವಿನ ಕೊಳುಕೊಡೆ ಎಂದು ಬಿಂಬಿಸಲಾಯಿತು. ಸೋದರ ಸಂಸ್ಕೃತಿಗಳ ನಡುವಿನ ಸಂವಾದದ ಪ್ರಾಮುಖ್ಯತೆಯನ್ನು ಎಳ್ಳಷ್ಟೂ ಮನಗಾಣದೆ ವೈರಿ ಸಂಸ್ಕೃತಿಗಳ ನಡುವಿನ ಸಂವಾದವೆ ಮುಖ್ಯವೆಂದು ಭಾವಿಸಿದ್ದು ಸ್ವಯಂಕೃತಾಪರಾಧವೂ, ಆತ್ಮಹತ್ಯಾಕಾರಿಯೇ ಆಗಿತ್ತು.

ಸೋದರ ಸಂಸ್ಕೃತಿ ಮತ್ತು ವೈರಿ ಸಂಸ್ಕೃತಿಗಳ ಬಗೆಗಿನ ನಮ್ಮ ಧೋರಣೆಯಲ್ಲಿ ಮೂಲಭೂತವಾದ ಬದಲಾವಣೆಯಾಗದೆ, ನಮ್ಮತನದ ಅರಿವು ಮತ್ತು ಏಳ್ಗೆ ಸಾಧ್ಯವಿಲ್ಲ. ಕೊಳುಕೊಡುಗೆ ಕಾರಣವಾಗುವ ಸಂದರ್ಭ ಮೇಲು-ಕೀಳು ಎಂಬ ನೆಲೆಯಲ್ಲಿ ಮುಖಾಮುಖಿ ಯಾಗುವ ಸಂಸ್ಕೃತಿಗಳ ನಡುವೆ ಮಾತ್ರ ಎನ್ನುವುದಾದರೆ ಈ ಪ್ರಕ್ರಿಯೆ ಬೇಕಾಗಲಿ ಬೇಡಾಗಲಿ ನಿರಂತರ ನಡೆದೇ ಇರುತ್ತದೆ. ಇಲ್ಲಿ ಪ್ರಜ್ಞಾಪೂರ್ವಕ ಆಯ್ಕೆಯ ಪ್ರಶ್ನೆಯಿರುವಂತಿಲ್ಲ. ಸಮಾನ ಮನೋಧರ್ಮ ಮತ್ತು ಸಂಸ್ಕೃತಿ ಪರಿಕಲ್ಪನೆಗಳ ಮತ್ತು ಜೀವನಕ್ರಮಗಳ ನಡುವಿನ ಕೊಳುಕೊಡುಗೆ ಚರಿತ್ರೆಯಲ್ಲಿ ಮಹತ್ವವೇ ಇಲ್ಲ ಎಂದಾದರೆ ಅದು ಆತ್ಮಘಾತುಕವೇ. ಸೋದರ ಸಂಸ್ಕೃತಿಗಳ ನಡುವಿನ ಸಮಾನಾಂಶಗಳ ಬಗೆಗೆ ಬೇರೆಬೇರೆ ಶಾಸ್ತ್ರ ಶಿಸ್ತುಗಳು ಗಮನಹರಿಸುತ್ತವೆ ನಿಜ. ಉದಾ: ಭಾಷಾಶಾಸ್ತ್ರ. ಅದು ಸಾಂಸ್ಕೃತಿಕ ಚಿಂತನೆಗೆ ಒಂದು ಮುಖ್ಯ ವಿಧಾನವಾಗಿ ಬಳಕೆಯಾಗಿಲ್ಲ. ಅದು ಇಂದು ನಡೆಯಬೇಕಾಗಿರುವ ಅಗತ್ಯ.

ವೈದಿಕ ಸಂಸ್ಕೃತಿ ಪರಂಪರೆಯ ಬಹು ವ್ಯಾಪಕವಾದ ಪೂರ್ವಗ್ರಹಿಕೆ ಆಧುನಿಕ ಶಿಕ್ಷಣ ಪದ್ಧತಿಯ ಒಳಗೆ ವಿಷದಂತೆ ಕೆಲಸ ಮಾಡುತ್ತಿದೆ. ಇದು ದ್ರಾವಿಡ ಸಂಸ್ಕೃತಿಯ ಭೂಮತೆ ಯನ್ನು, ಸತ್ತ್ವ ಸೌಂದರ್ಯವನ್ನು ಸಂಪೂರ್ಣವಾಗಿ ಮರೆಮಾಚಿದೆ. ಜಾತಿ ವಿಕೃತತೆಗೆ ಕಾರಣ ವಾಗಿರುವ ವೈದಿಕ ಗ್ರಹಿಕೆ ದೇಶದ ಏಳ್ಗೆಗೆ ಅಡ್ಡಿಯಾಗಿದೆ.

ವೈದಿಕತೆ ಶ್ರೇಷ್ಠವಾಗಿದ್ದಿದ್ದರೆ ಅದು ದ್ರಾವಿಡ ಸಂಸ್ಕೃತಿಯ ರಕ್ತ ಹೀರಿದ್ದರಿಂದ. ತಾನು ಹೀನವಾಗಿರುವುದಾದರೆ ಅದು ವರ್ಗ ವರ್ಣಭೇದವನ್ನು ತನ್ನ ಸೈದ್ಧಾಂತಿಕ ಅಡಿಪಾಯವನ್ನಾಗಿ ಮಾಡಿಕೊಂಡಿದ್ದರಿಂದ. ಇದರ ಬೇರೆಬೇರೆ ರೂಪಗಳ ಕುರಿತು ಕೆಲಮಟ್ಟಿಗೆ ದೇವಿಪ್ರಸಾದ ಚಟೋಪಾಧ್ಯಾಯ ಚರ್ಚಿಸಿದ್ದಾರೆ.

ವೈದಿಕ ಜಾತಿ ಶ್ರೇಣೀಕರಣದಲ್ಲಿ ಯಾವುದು ಅತ್ಯಂತ ಕೀಳಾಗಿದೆಯೋ ಅದು ದ್ರಾವಿಡ

ಕುಲಪದ್ಧತಿಯಲ್ಲಿ ಅತ್ಯಂತ ಶ್ರೇಷ್ಠವಾಗಿದೆ. ಹಾಗೆ ಮರೆತದ್ದರ ದುಷ್ಪರಿಣಾಮವೇ ಅಸ್ಪೃಶ್ಯತೆ ಇದಕ್ಕೆ ಸ್ಪಷ್ಟವಾದ ಸಾಕ್ಷ್ಯಾಧಾರ. ಹೊಲೆಯರು, ಮಾದಿಗರು, ನನ್ನ ಪ್ರಕಾರ ಅತ್ಯಂತ ಗೌರವಾರ್ಹರೂ, ಪೂಜ್ಯರೂ ('ಪೂಜೆ'-ದ್ರಾವಿಡ ಪದ) ಆಗಿದ್ದಾರೆ. ಇದು ವೈರುಧ್ಯದ ಗ್ರಹಿಕೆಯ ಪರಿಣಾಮವಲ್ಲ.ವಾಸ್ತವದ ಗ್ರಹಿಕೆಯ ಸ್ಥೂಲ ದರ್ಶನದಲ್ಲಿ ಸಿಕ್ಕ ಅನನ್ಯತೆ. ಸುಖ ಸಮೃದ್ಧಿಗೆ ವಿಧಿಬದ್ಧವಾಗಿ ಆಚರಿಸಲಾಗುತ್ತಿದ್ದ ಸಾಮೂಹಿಕ ಪರಿಕ್ರಮಗಳಲ್ಲಿ ಹೊಲೆಯ ಮಾದಿಗರ ಪಾತ್ರ ಅತ್ಯಂತ ಪವಿತ್ರವಾಗಿತ್ತು. 'ಪೊಲಿ' ('ಹೊಲಿ') ಪದದಿಂದ ವ್ಯುತ್ಪನ್ನವಾದ ಪೊಲೆಯ ಮತ್ತು 'ಮಾದ' ಮೂಲದ ಮಾದಿಗ ತಾಂತ್ರಿಕ ಆರಾಧನೆಯ ಕೇಂದ್ರತೆಗೂ, ಕೃಷಿಕಾರ್ಯದಿಂದ ಹೊಲೆಯ ಮಾದಿಗರನ್ನು ಸಂಪೂರ್ಣವಾಗಿ ಬೇರ್ಪಡಿಸಿರುವುದಕ್ಕೂ, ವೈದಿಕಾರ್ಯ ಜಾತಿ ವ್ಯವಸ್ಥೆಯ ಪ್ರತಿಷ್ಠಾಪನೆಗೂ ಇರುವ ಒಳಸಂಬಂಧದ ಗಂಟನ್ನು ಇಡಿಯಾಗಿ ಗ್ರಹಿಸದೆ ಇರುವಾಗ ಮಾತ್ರ ಅನೇಕ ಪ್ರಶ್ನೆಗಳು, ಗೊಂದಲಗಳು ಹುಟ್ಟಿಕೊಳ್ಳುತ್ತವೆ. ದ್ರಾವಿಡ ಸಂಸ್ಕೃತಿ ಪರಂಪರೆಯ ಮೇಲೆ ಅಂತಿಮ ಪ್ರಹಾರವಾದುದರ ಸ್ಪಷ್ಟ ಸಾಕ್ಷಿಯೇ ಹೊಲೆಯ ಮಾದಿಗ ಅಸ್ಪೃಶ್ಯತೆ.

ಅತ್ಯಂತ ಶ್ರೇಷ್ಠವಾದುದು ಸಂಭವಿಸಬೇಕಾದರೆ ಅತ್ಯಂತ ಕನಿಷ್ಠವಾದುದರ ಇರವು ಅಗತ್ಯ. ವೈರುಧ್ಯತತ್ತ್ವದ ನೆಲೆ ಇದು. ಭಾರತದಲ್ಲಿ ಅತ್ಯಂತ ಶ್ರೇಷ್ಠವಾದುದು ಸ್ಥಾಪಿತವಾಗಲೇಬೇಕಾದ ಒಂದು ಚಾರಿತ್ರಿಕ ಹಂತ ಎದುರಾಯಿತು. ಹಾಗಾಗಿ ಅತ್ಯಂತ ಕನಿಷ್ಠವಾದುದು ಸಂಭವಿಸಲೇಬೇಕಾಯಿತು. ಬಲಿಪಶುವಾಗಲು ಸಾಧ್ಯವಿದ್ದ ದ್ರಾವಿಡ ಕುಲಗಳನ್ನು 'ಆಯ್ಕೆ' ಮಾಡಲಾಯಿತು. ಸಾಮಾಜಿಕ ಗತಿಶೀಲತೆಯ ಸ್ವಭಾವವೂ ಅನುಕೂಲವಾಗಿ ಒದಗಿಬಂದಿತು. ಎರಡೂ ತುದಿಗಳು ಒಂದೇ ಸಲಕ್ಕೆ ಸ್ಥಾಪಿತವಾದವು. ಒಂದು ಪಾತಾಳಕ್ಕಿಳಿಯಿತು, ಇನ್ನೊಂದು ಆಕಾಶಕ್ಕೆ ನೆಗೆಯಿತು. ಹೊಡೆತದ ಮೇಲೆ ಹೊಡೆತಗಳನ್ನು ನಿರಂತರವಾದ ಪ್ರಕ್ರಿಯೆಯನ್ನಾಗಿ ಮಾಡಲಾಯಿತು. ಈ ವರ್ಗ ಶೋಷಣೆಯ ಪಾಪದಲ್ಲಿ ಭಾಗಿಯಾಗಲು ಮುಂಬಂದ ಎಲ್ಲರನ್ನೂ ಸೇರಿಸಿಕೊಳ್ಳಲಾಯಿತು.

ದ್ರಾವಿಡ ಸಂಸ್ಕೃತಿ ಅಧ್ಯಯನದಲ್ಲಿ 'ವೃತ್ತಿ' ಮೂಲದ ಕುಲಗಳು ಅಡಿಪಾಯವನ್ನು ನಿರ್ಮಿಸಿವೆ. ಹಾಗಾಗಿ ಮೊದಲ ಹಂತದಲ್ಲಿ ಬೇಟೆಗಾರಿಕೆ, ನಂತರ ಪಶುಪಾಲನೆ, ಕುಮ್ರಿ ಬೇಸಾಯದ ಬುಡಕಟ್ಟು ಕುಲಗಳನ್ನು ಅಧ್ಯಯನಿಸುವುದು ಸೂಕ್ತ.

ಕರ್ನಾಟಕದ ಜಾತಿ ವ್ಯವಸ್ಥೆಯನ್ನು ಕುರಿತು ಬರೆಯುವಾಗ ತಮಿಳು, ತೆಲುಗು, ಮಲಯಾಳ ಮೊದಲಾದ ದ್ರಾವಿಡ ಭಾಷಿಕ ಜಾತಿ ಬುಡಕಟ್ಟುಗಳ ಬಗೆಗೂ ಅಭ್ಯಾಸ ಮಾಡುವುದು ಅನಿವಾರ್ಯ. ಕನ್ನಡ ಭಾಷಿಕ ಬುಡಕಟ್ಟು ಮತ್ತು ಕುಲಗಳು ತಮ್ಮಷ್ಟಕ್ಕೆ ತಾವು ಸ್ವತಂತ್ರವೂ, ಸ್ವಾಯತ್ತವೂ ಅಲ್ಲ. ಭಾಷೆ ಗಡಿಗಳ ಮೇಲ್ಮೆಯನ್ನು ಸತತವಾಗಿ ಮೀರುತ್ತಿದ್ದ ಸ್ವಭಾವ ದ್ರಾವಿಡ ಕುಲಗಳಿಗಿತ್ತು. ನಿಜ, ಭಾಷೆಗಳಲ್ಲಿ ಪ್ರತ್ಯೇಕ ಅಸ್ತಿತ್ವ ಹುಟ್ಟುಕೊಂಡಿದ್ದೇ ಭೌಗೋಲಿಕ ಕಾರಣದಿಂದಾಗಿ. ಇಲ್ಲಿಯ ಪ್ರಶ್ನೆ ಎಂದರೆ ಭಾಷೆ, ಪ್ರಾಂತಗಳು ಪ್ರತ್ಯೇಕಗೊಳ್ಳುವ ಪೂರ್ವದಲ್ಲಿ ಹುಟ್ಟಿದ ಸಾಮಾಜಿಕ ಕುಲಗಳ ಸಂಸ್ಕೃತಿಯ ಪ್ರಬಲವಿಲ್ಲವೇ?

ಹೊಲೆಯ-ಮಾದಿಗ ಮೊದಲಾದ ಅಸ್ಪೃಶ್ಯ ಕುಲದ ಕೃಷಿಕರಲ್ಲಿ ಇದು ಎದ್ದು ಕಾಣುವ ಅಂಶ. ಪಶುಪಾಲಕ ಕುಲಗಳ ಸಮಾನಾಂಶಗಳಿಗೂ ಈ ಮಾತು ಅನ್ವಯಿಸುತ್ತದೆ.

ಕನ್ನಡ ಕುರುಬ, ಬೇಡರನ್ನು ಕುರಿತು ಬರೆಯುವ ಸಂದರ್ಭದಲ್ಲಿ ತಮಿಳು, ತೆಲಗು ನಾಡಿನ ಮರವನ್, ಕಲ್ಲನ್, ವೆಡ್ಡ, ಚಂಚು, ತಲಯಾರಿ, ಅಗಮುಡ್ಯೆಯಾನರನ್ನು ಅಧ್ಯಯನಿಸದೆ ಮುಂದುವರೆಯಲು ಸಾಧ್ಯವಾಗಲಾರದು. ಕನ್ನಡಿಗರ ಮೂಲದ ಪ್ರಶ್ನೆಗೆ ತಮಿಳುನಾಡಿನ 'ಕಳ್ಳನ್'ರಲ್ಲಿ ಹಲವಾರು ಉತ್ತರಗಳು ದೊರಕುವ ಸಾಧ್ಯತೆ ಇದೆ. ಈ ಪಟ್ಟಿಯನ್ನು ಹೀಗೆಯೇ ಬೆಳೆಸುತ್ತ ಹೋಗಬಹುದು. ಒಂದೆರಡು ನಿದರ್ಶನಗಳ ಮೂಲಕ ಇಲ್ಲಿಯ ತಾತ್ತ್ವಿಕತೆಯನ್ನು ಸ್ಪಷ್ಟಪಡಿಸಬಹುದು.

ತಮಿಳುನಾಡಿನ ಮೂಲ ಜನಾಂಗಗಳಲ್ಲಿ ಒಂದು 'ಮರವನ್' ಎಂಬ ಜಾತಿಯವರು. ಥರ್‌ಸ್ಟನ್‌ರ ಪ್ರಕಾರ ದಕ್ಷಿಣದ ದ್ರಾವಿಡ ದೇಶಕ್ಕೆ ಬಂದ ಮೊದಲ ಬುಡಕಟ್ಟುಗಳಲ್ಲಿ ಇವರೂ ಸೇರುತ್ತಾರೆ. (ಈ.ಥ.V-22) ಮತ್ತು ಕಲ್ಲನ್‌ರಂತೆ ಬ್ರಾಹ್ಮಣ ಪರಂಪರೆಯಿಂದ ಕಡಿಮೆ ಪ್ರಭಾವಿತರಾಗಿದ್ದಾರೆ.

'ಮರವನ್' ಜಾತಿಯ ಹುಟ್ಟಿಗೆ ಹೇಳುವ ಕಾರಣಕತೆಗಳನ್ನು ಒಂದೆಡೆ ವೈದಿಕರು ಸೃಷ್ಟಿಸಿದ್ದು ಅವು ಎಷ್ಟು ಕೃತಕವಾಗಿರುತ್ತವೆ, ಸುಳ್ಳಾಗಿರುತ್ತವೆ, ಮೋಸದ್ದಿರುತ್ತವೆಂಬುದನ್ನು ಇಲ್ಲಿ ನೋಡಬಹುದು. ನಿಜವಾದ ಹುಟ್ಟಿನ ಕತೆ ದೇಸಿಯ ನೆಲೆಯಲ್ಲಿದ್ದು ತರ್ಕಬದ್ಧವಾಗಿದೆ, ವಾಸ್ತವವಾಗಿದೆ.

ಮೊದಲು ವೈದಿಕರ ಕತೆಗಳು ರಾವಣನ ವಿರುದ್ಧ ರಾಮನಿಗೆ ಸಹಾಯ ಮಾಡಿದ್ದಕ್ಕೆ ಅವನು 'ಮರೆಯಲಾರೆ' ಎಂದುದರಿಂದ 'ಮರವನ್' (ಅದೇ ಪು ೨೩) ಎಂಬ ಹೆಸರು ಬಂದಿತು.

ರಾಮಾಯಣದ ರಾಮನ ಜತೆ ಅಂದರೆ ವೈದಿಕ ಸಂಸ್ಕೃತಿಯ ಜತೆ ಮರವನ್ನರ ಸಂಬಂಧ ಕಲ್ಪಿಸುವ ಕಟ್ಟುಕತೆ ಇದು. ಇಂಥ ಹಲವಾರು ಕತೆಗಳು ಇದೇ ರೀತಿ ಇವೆ. ಅಗಮುಡ್ಯೆಯಾನ್ ಮತ್ತು ಕಳ್ಳನ್ (ಕಲ್ಲನ್) ಈ ಜಾತಿಯ ಉಪವಿಭಾಗಗಳೆಂಬ ನಂಬಿಕೆ ಇದೆ. ಕೆಲಸಲ ಕಳ್ಳನ್‌ರ ಒಳಪಂಗಡವಾಗಿಯೂ 'ಮರವನ್'ರು ಬರುತ್ತಾರೆ. ಈ ಮೂರು ಜಾತಿಗಳ ಮಧ್ಯೆ ನಿಕಟ ಸಂಬಂಧವಿದೆ. ಇದಕ್ಕೆ ಸಂಬಂಧಿಸಿದ ಐತಿಹ್ಯವೊಂದು ಹೀಗಿದೆ :

ಗೌತಮ ಋಷಿಯನ್ನು ವಂಚಿಸಿ ಅಹಲ್ಯೆಯನ್ನು ಸೇರಿದ ಇಂದ್ರನಿಗೆ ಹುಟ್ಟಿದ ಮೂರು ಮಕ್ಕಳು ಈ ಮೂರು ಜಾತಿಗಳ ಮೂಲ ಪುರುಷರು. ಗೌತಮ ತಿರುಗಿ ಬಂದಾಗ ಕದದ ಹಿಂದೆ ಅಡಗಿದವ 'ಕಳ್ಳನ್' ಮರವನ್ನೇರಿದವ 'ಮರವನ್' ಧೈರ್ಯದಿಂದ ಎದುರು ನಿಂತವ ಅಗಮುಡ್ಯೆಯಾನ್. (ಅದೇ ಪು ೨೩) ವೈದಿಕ ಜಾತಿವ್ಯವಸ್ಥೆಯ ಸಂಪರ್ಕಕ್ಕೆ ಬಂದ ದ್ರಾವಿಡ ಬುಡಕಟ್ಟುಗಳನ್ನು ಪ್ರತ್ಯೇಕ ಜಾತಿಗಳನ್ನಾಗಿ ಒಡೆದು ಹಾಕುವುದಕ್ಕಾಗಿ ಏನಕೇನ ಪ್ರಕಾರೇಣ ವೈದಿಕ ಪುರಾಣ ಕತೆಗಳಿಗೆ ಗಂಟು ಹಾಕಲಾಗುತ್ತಿತ್ತು. ಅಹಲ್ಯೆಯ ಹಾದರದ ಮಕ್ಕಳು ಎಂಬ ಅಂಶ ಜಾತಿವ್ಯವಸ್ಥೆಯಲ್ಲಿ ಇವರನ್ನು ಕೀಳುಮಟ್ಟದಲ್ಲಿಡಲು ಮಾಡಿದ ತಂತ್ರ. ಋಷಿಯ ಸಂಬಂಧ ಬರುವುದರಿಂದ ಅವರು ಅಷ್ಟರಮಟ್ಟಿಗೆ ಆತ್ಮತೃಪ್ತಿ ಪಡೆಯಬಹುದಿತ್ತು.

ಇನ್ನೂ ಒಂದು ಕತೆ : ರಾಮ ಲಂಕೆಗೆ ಸಮುದ್ರಮಾರ್ಗವಾಗಿ ಹೋಗುವಾಗ ಅವನನ್ನು ದೋಣಿಯಲ್ಲಿ ದಾಟಿಸಿದವ ಗುಹನೆಂಬ ನಾವಿಕ. ರಾಮ ನಿಗದಿತ ವೇಳೆಗೆ ಹಿಂದಿರುಗದಿರಲು ಆತ್ಮಹತ್ಯೆಗೆ ಯತ್ನಿಸಿದ. ಹನುಮಂತ ಅವನನ್ನು ತಡೆದ ನಂತರ ಬಂದ ರಾಮ ಅವನನ್ನು 'ಮರವನ್' (ಶೂರ) ಎಂದು ಕರೆದ.

ಈ ಎಲ್ಲ ಕತೆಗಳು ಒಂದೇ ವಿಧದ ಆಶಯ ಹೊಂದಿರುವುದು ಸ್ಪಷ್ಟ. ಅದು ವೈದಿಕ ಜಾತಿವ್ಯವಸ್ಥೆಗೆ ಎಲ್ಲರನ್ನೂ ಒಳಗು ಮಾಡಿಕೊಳ್ಳುವುದು ಮತ್ತು ಅದರ ಸಾಮಾಜಿಕ ಸ್ಥಾನ ಕೀಳಾಗಿರುವಂತೆ ನೋಡಿಕೊಳ್ಳುವುದು ಇದೆಲ್ಲ ಸುಳ್ಳು, ಮೋಸ ಎಂಬುದನ್ನು ಕೊಂಡಯಂ ಕೊಟ್ಟೈ ಮರವನ್‌ರಲ್ಲಿರುವ ಆರು ಬುಡಕಟ್ಟುಗಳ ವಿಷಯ ಸ್ಪಷ್ಟ ಪಡಿಸುತ್ತದೆ. ಇವನ್ನು ಅವರು ಮರಗಳೆಂದು ಕರೆಯುತ್ತಾರೆ. (ಅದೇ ಪು ೩೩) ಪ್ರತಿ ಕೊಡುಗೆ (ಮರ) ಅನೇಕ ರೆಂಬೆಗಳು (ಕಿಳ್ಳೈ) ಇವೆ. (ಬೆಡಗಿಗೆ (ಗೋತ್ರ) ಕಿಳ್ಳೈ ಎನ್ನಲಾಗುತ್ತದೆ) ಒಂದೇ ಗಿಡದ ವಿಭಿನ್ನ ಕಿಳ್ಳೈಯವರು ಮದುವೆ ಆಗುವುದಿಲ್ಲ. ಏಕೆಂದರೆ ಅವರು ಒಂದೇ ಬೆಡಗಿನವರಾಗಿ ಸೋದರ ಸೋದರಿ ಸಂಬಂಧದವರಾಗುತ್ತಾರೆ. ಹಾಗಾಗಿ ಕೆಲವು ಗಿಡಗಳ ಮಧ್ಯೆ ಮದುವೆ ಸಂಬಂಧ ಇದೆ. ಆ ಗಿಡಗಳು -

೧. ಮಿಲಕು (Pepper vine) ೨. ವೆಟ್ಟಿಲೆ (ವೀಳ್ಯ) ೩.ತೆಂಗು ೪. ಅಡಿಕೆ ೫. ಈಚಲು ೬. ತಾಳೆ

ಒಟ್ಟಾರೆ 'ಮರವನ್' (ಕುಲದ) ಜಾತಿಯ ಹೆಸರು ಮರಗಳ ಆಧಾರದಲ್ಲಿ ಹುಟ್ಟಿದ ಬುಡಕಟ್ಟು ಹೆಸರು. ಮರವೇ ಇಲ್ಲಿ 'ಟೋಟೆಂ'.

'ಕೊಂಡ' ಎಂಬ ಜನಾಂಗವೇ ದ್ರಾವಿಡನಾಡಿನ ಅನೇಕ ಜಾತಿಗಳಿಗೆ ಮೂಲವಾಗಿದೆ. ತೆಲಗಿನಲ್ಲಿ ಕೊಂಡ ಎಂದರೆ ಬೆಟ್ಟ ಎಂದರ್ಥ. ತೆಲಗು ನಾಡಿನ ಕಾಡುಗಳಲ್ಲೆ ಇವರು ವಾಸವಾಗಿದ್ದಾರೆ. ಕೊಂಡರೇ ಗೊಂಡರು. ಕನ್ನಡ ನಾಡಿನಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಗೊಂಡರು ಆಂಧ್ರದಿಂದ ವಲಸೆ ಬಂದವರು. ಆದರೆ, ಅವರ ವಲಸೆ ಕುರುಬರಾಗಿ ರೂಪು ಗೊಂಡ ಗೊಂಡರ ಕಾಲಕ್ಕಿಂತ ತೀರ ಈಚಿನದು. ಕುರುಬರ ಮೂಲಪುರುಷನ ಹೆಸರು ಪದ್ಮಗೊಂಡ. ಇದು ಕುರುಬರು ಮೂಲಗೊಂಡರೆಂಬುದರ ಸ್ಪಷ್ಟ ಸೂಚನೆ. ಆಂಧ್ರದಿಂದ ವಲಸೆ ಬಂದ ಕುರುಬಗೊಂಡರು ಕಾಡಿನಲ್ಲಿ ಉಳಿದವರು ಕಾಡು ಕುರುಬರಾದರು, ಊರಲ್ಲಿ ನೆಲೆಗೊಂಡವರು ಊರ ಕುರುಬರಾದರು. ಕುರುಬರು, ಒಕ್ಕಲಿಗರು, ಗೊಲ್ಲರುಗಳಿಗೆ ಒಳ ಸಂಬಂಧವಿದೆ ಎಂದು ತೀ.ನಂ ಶಂಕರನಾರಾಯಣ ತಮ್ಮ ಸಂಪ್ರಬಂಧದಲ್ಲಿ ತಿಳಿಸುತ್ತಾರೆ. ಕುರುಬರಿಗೂ ಲಿಂಗಾಯತರಿಗೂ ಸಂಬಂಧವಿರುವುದನ್ನು ಇವೆರಡರ ಸಾಂಸ್ಕೃತಿಕ ಲೋಕಗಳು ಸೂಚಿಸುತ್ತವೆ. ಕೊಂಡ ಪದವೇ 'ಗೌಡ' ಎಂದಾಯಿತು. ಅದು ಬಹುಶಃ ಹೀಗೆ :

ಕೊಂಡ>ಗೊಂಡ>ಗವುಂಡ>ಗಾಮುಂಡ>ಗೌಂಡ >ಗೌಡ. ಕುರುಗಳಲ್ಲಿದ್ದವರೇ ಕುರುಬ, ಗೊಂಡ, ಕೊಂಡ ಜನಾಂಗ.

ಕುರುಬರಿಗೆ ಗೊರವರೆಂಬ ಇನ್ನೊಂದು ಹೆಸರಿದೆ ಎಂದು ಥರ್‌ಸ್ಟನ್ ತಿಳಿಸುವುದು

ಸ್ವಾರಸ್ಯದ್ದು. ಕೊರವ ಪದ ಗೊರವ ಆಗಿರಬೇಕು. ಕುರುಬರ ಪ್ರಖ್ಯಾತ ದೈವವಾದ ಮೈಲಾರಲಿಂಗವನ್ನು ಹೊರೆಹೊರುವವರು 'ಗೊರವರು'. ಹಾವೇರಿ ಹತ್ತಿರ 'ಕುರುಬ ಗೊಂಡ' ಎಂಬ ಊರಿದೆ. ಆಂಧ್ರದಲ್ಲಿ ಹೀಗೆ ಕೊಂಡಘಟಿತ ಗ್ರಾಮನಾಮಗಳು ಬಹಳ. ಮಧ್ಯಪ್ರದೇಶ, ಬಂಗಾಲ, ಒಡಿಸಾ, ಆಂಧ್ರದಕೊಂಡರು ತಮ್ಮನ್ನು 'ಕುಯಿ', 'ಕೊಯ' ಎಂದು ಕರೆದು ಕೊಳ್ಳುತ್ತಾರೆ. (ಈ.ಥ.IIIಪು ೩೫೬) ಕೆಲವು ಕಡೆ ಇವರ ವಸತಿಗಳಿಗೆ 'ಮಠ' ಎಂದು ಕರೆಯುತ್ತಾರೆ. ಇವರಲ್ಲಿರುವ 'ಮಾನವ ಬಲಿ'ಯು ಆದಿಮ ದ್ರಾವಿಡ ಸಂಸ್ಕೃತಿ ಅಧ್ಯಯನದ ದೃಷ್ಟಿಯಿಂದ ತುಂಬ ಮಹತ್ವದ ಸಂಗತಿಯಾಗಿದೆ.



೩

# ಆರ್ಯ- ದ್ರಾವಿಡ ಪರಿಕಲ್ಪನೆ

*ವೆಂಕಟರಾಜ ಪುಣಿಂಚತ್ತಾಯ

೧

ಶ್ರೀಮದ್ವಿಷ್ಣು ಭಾಗವತದಲ್ಲಿ ಹೀಗೊಂದು ಶ್ಲೋಕವಿದೆ :

ದ್ರವಿಡೇ ಭಕ್ತಿರುತ್ಪನ್ನಾ
ವೃದ್ಧಿಂ ಕರ್ನಾಟಕೇ ಗತಾ

ಭಕ್ತಿ ಪಂಥವು ಮೊದಲು ಹುಟ್ಟಿದ್ದು ದ್ರಾವಿಡದೇಶದಲ್ಲಿ ಅಂದರೆ ತಮಿಳುನಾಡಿನಲ್ಲಿ. ಅನಂತರ ಅದು ಅಭಿವೃದ್ಧಿಯನ್ನು ಪಡೆದದ್ದು ಕರ್ನಾಟಕದಲ್ಲಿ ಎಂದು ಭಾಗವತ ಪುರಾಣ ಹೇಳುತ್ತದೆ. ಇಲ್ಲಿ ಭಕ್ತಿ ಪಂಥವೆಂದರೆ ನಾವು ಈಗ ಪ್ರಸ್ತಾಪಿಸುತ್ತಿರುವ ದಾಸಪಂಥವಲ್ಲ. ದಾಸಪಂಥವು ಮೊದಲು ಕರ್ನಾಟಕದಲ್ಲಿ ಹುಟ್ಟಿ ಅನಂತರ ತಮಿಳುನಾಡಿಗೆ ಬಂದದ್ದು. ಪುರಂದರದಾಸರ ಕೀರ್ತನೆಗಳ ಕಾಲ ಮೊದಲು. ತ್ಯಾಗರಾಜರ ಕಾಲ ಅನಂತರ. ಇವೆಲ್ಲ ಈಗಿನ ವಿಚಾರಗಳು. ಭಾಗವತದ ರಚನೆ ಇದಕ್ಕಿಂತೆಲ್ಲ ಎಷ್ಟೋಕಾಲ ಹಿಂದಿನದು.

೨

ದ್ರಾವಿಡ ಶಬ್ದದಿಂದ ತಮಿಳು ಎಂಬ ಪದ ಹುಟ್ಟಿದೆ. ದ್ರಾವಿಡ>ದ್ರಮಿಳ >ತಮಿಳು ದಕ್ಷಿಣ ಭಾರತವನ್ನು ದ್ರಾವಿಡದೇಶ ಎನ್ನಬಹುದು. ಇಲ್ಲಿ ಪಂಚ ದ್ರಾವಿಡಭಾಷೆ ಬಳಕೆಯಲ್ಲಿದೆ. ಈ ಪಂಚದ್ರಾವಿಡಭಾಷೆಗಳಿಗೂ ಮೂಲ ದ್ರಾವಿಡ ಭಾಷೆ (ತಮಿಳ) ಯೇ ಆಗಿದೆ.

ಅಮರಸಿಂಹವಿರಚಿತವಾದ ಅಮರಕೋಶದಲ್ಲಿ ದ್ರಾವಿಡ ಎಂಬ ಪದವೂ ಇಲ್ಲ ಅದರ ಅರ್ಥವೂ ಇಲ್ಲ. ಆದರೆ 'ದ್ರಾವಿಡಕ' ಎಂಬ ಪದವಿದೆ. ಇದು ಒಂದು ಸಸ್ಯದ ಹೆಸರು. ಕಚ್ಚೂರಗಡ್ಡೆಗೆ ಸಂಸ್ಕೃತದಲ್ಲಿ ದ್ರಾವಿಡಕ ಎಂಬ ಹೆಸರಿದೆ.

೩

**ಯಾರು ಆರ್ಯರು -ಯಾರು ದ್ರಾವಿಡರು ?**

ದ್ರಾವಿಡರು ಮೊದಲು ಬಂದವರು. ಆರ್ಯರು ಅನಂತರ ಬಂದವರು. ಅಮರ ಕೋಶಕಾರನು 'ಆರ್ಯ' ಎಂಬ ಪದವನ್ನು ಬಳಸಿದ್ದಾನೆ. ಆರ್ಯಾವರ್ತ ಎಂಬ ಪದವನ್ನು ಬಳಸಿದ್ದಾನೆ. "ಆರ್ಯಾವರ್ತ" ಎಂಬುದು ಒಂದು ಸ್ಥಳದ ಹೆಸರು. ಆರ್ಯಾವರ್ತವು ಎಲ್ಲಿದೆ ಎಂದರೆ ಹಿಮಾಲಯ ಮತ್ತು ವಿಂಧ್ಯಪರ್ವತಗಳ ಮಧ್ಯದಲ್ಲಿದೆಯಂತೆ.

ಆರ್ಯಾವರ್ತಃ ಪುಣ್ಯಭೂಮಿಃ
ಮಧ್ಯಂ ವಿಂಧ್ಯಹಿಮಾಗಯೋಃ

ಸಂಸ್ಕೃತ ನಾಟಕಗಳಲ್ಲಿ ಹೆಂಡತಿ ಗಂಡನನ್ನು 'ಆರ್ಯಪುತ್ರ' ಎಂದು ಗಂಡ ಹೆಂಡತಿಯನ್ನು 'ಆರ್ಯೆ' ಎಂದು ಸಂಬೋಧಿಸುವ ಪದ್ಧತಿಯಿದೆ. ಕನ್ನಡದಲ್ಲಿ ಸಂಬೋಧನೆಯ ಸಂದರ್ಭದಲ್ಲಿ 'ಅಯ್ಯಾ' ಎಂಬ ಪದವನ್ನು ಬಳಸುತ್ತಾರೆ. (ಉದಾ ಅಯ್ಯಾ ರಾಜನೆ, ಅಯ್ಯಾ ಸೇವಕನೆ ಇತ್ಯಾದಿ) ಕೇರಳ ತಮಿಳುನಾಡುಗಳಲ್ಲಿ ಕೆಲವು ಹೋಟೆಲುಗಳಿಗೆ 'ಆರ್ಯಭವನ' ಎಂಬ ಹೆಸರನ್ನಿಡಲಾಗಿದೆ.

ತುಳುನಾಡಿನಲ್ಲಿ ತುಳು ಬ್ರಾಹ್ಮಣರನ್ನು ಕೆಲವು ಸಮುದಾಯದವರು ಈಗಲೂ 'ಅಯ್ಯ' ಎಂದು ಸಂಬೋಧಿಸುವ ಪದ್ಧತಿ ಇದೆ. (ನೇಲ್ಯಯ್ಯೆ, ಎಲ್ಯಯ್ಯೆ, ಇತ್ಯಾದಿ ಪ್ರಯೋಗಗಳೂ ಇವೆ. ಆಂಧ್ರದಲ್ಲಿ 'ಅಯ್ಯಂಗಾರ್' ಪದ ರೂಢಿಯಲ್ಲಿರುವಂತೆ ತಮಿಳುನಾಡಿನಲ್ಲಿ 'ಅಯ್ಯರ್' ಎಂಬ ಪದ ರೂಢಿಯಲ್ಲಿದೆ, ಅಯ್ಯಂಗಾರ್ ಮತ್ತು ಅಯ್ಯರ್ ಪದವು ಬ್ರಾಹ್ಮಣವರ್ಗದವರಿಗೆ ಸಂಬಂಧಿಸಿದ ಪದವಾಗಿದೆ.

ಕಾಸರಗೋಡು ಜಿಲ್ಲೆಯಲ್ಲಿರುವ 'ಬಾಕುಡ' ಸಮಾಜದವರು, ತಮ್ಮ ಜಾತಿಯ ಬಗ್ಗೆ ಹೇಳುವಾಗ 'ಎಂಕ್ಲುದಿರಡೇರ್' (ನಾವು ದ್ರಾವಿಡರು) ಎಂದು ಅಭಿಮಾನದಿಂದ ಹೇಳಿ ಕೊಳ್ಳುವ ಪದ್ಧತಿ ಈಗಲೂ ರೂಢಿಯಲ್ಲಿದೆ.

●

೪

# ದ್ರಾವಿಡರ ಸಂಸ್ಕೃತಿ

ಡಾ. ಮೋಹನ ಕುಂಟಾರ್

'ದ್ರಾವಿಡ' ಎಂಬ ಪದವು ದೇಶವಾಚಕವಾಗಿಯೂ ಜನಾಂಗವಾಚಕವಾಗಿಯೂ ಸಾಮಾನ್ಯವಾಗಿ ಬಳಕೆಯಾಗುವುದಿದೆ. ದ್ರಾವಿಡ ಭಾಷೆ ಎಂದಾಗ ಒಂದು ಭಾಷಾವರ್ಗವನ್ನು ಸೂಚಿಸಿದಂತಾಗುತ್ತದೆ. ಸಾಮಾನ್ಯವಾಗಿ ನಾವು ದಕ್ಷಿಣ ಭಾರತವನ್ನು ದೃಷ್ಟಿಯಲ್ಲಿರಿಸಿಕೊಂಡು ಅದನ್ನು ದ್ರಾವಿಡನಾಡೆಂದು, ಇಲ್ಲಿ ವಾಸಮಾಡುವ ಜನರನ್ನು ದ್ರಾವಿಡರು ಎಂದೂ ಗುರುತಿಸುವುದಿದೆ. ದ್ರಾವಿಡ ಭಾಷೆ ಅಂದರೆ ಮುಖ್ಯವಾಗಿ ತಮಿಳು, ಕನ್ನಡ, ತುಳು, ತೆಲುಗು, ಮಲಯಾಳಂ ಎಂಬಿತ್ಯಾದಿಗಳನ್ನು ಹೆಸರಿಸಲಾಗುತ್ತದೆ. ಉತ್ತರ ಭಾರತದಲ್ಲಿಯೂ ದ್ರಾವಿಡ ಭಾಷೆಗಳು ಬಳಕೆಯಲ್ಲಿವೆ ಎಂಬುದು ವಾಸ್ತವ.

ಆದರೆ, ನಮ್ಮ ಅಭಿಜಾತ ಕಾವ್ಯಕೃತಿಗಳಲ್ಲಿ ಉಲ್ಲೇಖಗೊಂಡ ಮಾತುಗಳನ್ನು ಲಕ್ಷಿಸಿದರೆ 'ದ್ರಾವಿಡ' ಎಂಬುದು 'ತಮಿಳು' ನಾಡು ಜನಾಂಗ ಹಾಗೂ ಭಾಷೆಗೆ ಸಂಬಂಧಿಸಿದ ಪದವಾಗಿ ಗೋಚರವಾಗುತ್ತದೆ. ಉದಾ.

"ಮಗಧ ಸೌರಾಷ್ಟ್ರ ವರಾಟ ಲಾಟ ಕರ್ಣಾಟ ಮಳಯ ಮಾಳವ ನೇಪಾಳ ಕಾಶಿ ಕಾಶ್ಮೀರ ಗೌಡಾಂಧ್ರ ದ್ರವಿಳ"

(ಪಂಪ-ವಿಕ್ರಮಾರ್ಜುನವಿಜಯಂ ೯-೯೫)

ಕುರುಜಾಂಗಣ ದ್ರವಿಳ ಲಾಳ ಕರ್ನ್ನಾಟ ಗೌಳ

(ಶಿವಕೋಟ್ಯಾಚಾರ್ಯ - ವಡ್ಡಾರಾಧನೆ)

"ಕರ್ಣಾಟಾಂಧ್ರ ದ್ರವಿಡ ವರಾಟ"

(ನಾಗವರ್ಮ- ಛಂದೋಂಬುಧಿ ೧ -೪)

ಕರ್ಣಾಟಕ ಮಗಧ ಕಳಿಂಗಾಂಗ ಕಾಶ್ಮೀರ

ಕೇಯೂರಾಂಧ್ರ ಲಾಟ ದ್ರಮಿಳ

(ಕರ್ಣಪಾರ್ಯ- ನೇಮಿನಾಥ ಪುರಾಣ - (೧೩-೧೦೩)

ಮೇಲ್ಕಂಡ ಈ ಉಲ್ಲೇಖಗಳನ್ನು ಗಮನಿಸಿದರೆ ಇಲ್ಲಿ ದ್ರಾವಿಡ ಎಂದರೆ ತಮಿಳನ್ನು ಕುರಿತಂತೆ ಹೇಳಿದ್ದೆಂಬುದು ಸ್ಪಷ್ಟ.

ದ್ರಾವಿಡ ಎಂಬ ಪದವು ತಮಿಳು ಪದದಿಂದ ನಿಷ್ಪನ್ನವಾಗಿದೆ ಎಂಬ ಅಭಿಪ್ರಾಯವೂ ಇದೆ ಹಾಗೆಯೇ ಮತ್ತೊಂದು ಅಭಿಪ್ರಾಯದ ಪ್ರಕಾರ ತಮಿಳು ಎಂಬ ಪದವೇ ದ್ರಾವಿಡದಿಂದ ನಿಷ್ಪನ್ನವಾಗಿದೆ. ತಮಿಳು, ತೆಲುಗು, ಕನ್ನಡ, ಮಲಯಾಳಂ, ತುಳು ಎಂಬಿತ್ಯಾದಿ ಭಾಷೆಗಳು ಕವಲೊಡೆದು ಪ್ರತ್ಯೇಕವಾಗುವುದಕ್ಕೆ ಮುನ್ನ ಮೂಲದ್ರಾವಿಡ ಎಂಬ ಭಾಷೆಯೊಂದಿತ್ತು. ಕಾಲಕ್ರಮೇಣ ತಮಿಳು ಮೂಲದ್ರಾವಿಡದಿಂದ ಮೊದಲು ಪ್ರತ್ಯೇಕವಾಗಿ ಕಾಲಾನಂತರದಲ್ಲಿ ಉಳಿದ ಭಾಷೆಗಳೂ ಕವಲೊಡೆಯುತ್ತ ಬಂದವು. ಆದರೆ ಇಂದಿಗೂ ತಮಿಳುಭಾಷೆ ಮೂಲ ದ್ರಾವಿಡ ಭಾಷೆಯ ಬಹುತೇಕ ಹೆಚ್ಚಿನ ಲಕ್ಷಣಗಳನ್ನು ಉಳಿಸಿಕೊಂಡು ಬಂದಿದೆ ಎಂದು ಭಾಷಾ ವಿಜ್ಞಾನಿಗಳು ಅಭಿಪ್ರಾಯ ವ್ಯಕ್ತಪಡಿಸಿದ್ದೂ ಉಂಟು.

ಸಾಮಾನ್ಯವಾಗಿ ಮಲಯಾಳಂ ಸಂದರ್ಭದಲ್ಲಿಯೂ ಇದೇ ಹಿನ್ನೆಲೆಯಲ್ಲಿ ದ್ರಾವಿಡ ಎಂಬ ಪದವನ್ನು ಅರ್ಥೈಸಲಾಗುತ್ತಿದೆ. ಆದರೆ ದ್ರಾವಿಡರ ಸಂಸ್ಕೃತಿ, ಇತಿಹಾಸಗಳತ್ತ ಗಮನಹರಿಸಿದರೆ ದ್ರಾವಿಡರು ಎಂದರೆ ಯಾರು? ಅವರು ಎಲ್ಲಿಂದ ಬಂದವರು ಇತ್ಯಾದಿ ವಾದವಿವಾದಗಳು ಮಾಲಯಾಳಂನಲ್ಲಿಯೂ ಸಾಕಷ್ಟು ನಡೆದಿದೆ. ಈ ಬಗೆಗೆ ಇತಿಹಾಸತಜ್ಞರಲ್ಲಿಯೇ ಭಿನ್ನಭಿನ್ನ ಅಭಿಪ್ರಾಯಗಳಿವೆ. ದ್ರಾವಿಡರೆಂದರೆ ಮೆಡಿಟರೇನಿಯನ್ ಪ್ರದೇಶದಿಂದ ಬಂದವರು ಎಂದು ಇತ್ತೀಚಿನವರೆಗೂ ನಂಬಲಾಗಿತ್ತು. ಏಷ್ಯಾ ಮೈನರಿನ ಲಿಸಿಯವರ ಲಿಖಿತಗಳಲ್ಲಿ ಉಲ್ಲೇಖವಾದ 'ತ್ರಿಮ್ಮ್‌ಲೈ' ಎಂಬ ಹೆಸರು ದ್ರಮಿಳ (ತಮಿಳ್) ಎಂಬುದಕ್ಕೆ ಸಾದೃಶ್ಯವಿದೆ. ಭಾಷೆಗೆ ಸಂಬಂಧಿಸಿದಂತೆ ಹೇಳುವುದಾದರೆ ಸಿಥಿಯೆನ್ ಭಾಷೆಗೂ ದ್ರಾವಿಡ ಭಾಷೆಗಳಿಗೂ ಪರಸ್ಪರ ಸಾದೃಶ್ಯವಿದೆಯೆಂದು ಕಾಲ್ಡ್‌ವೆಲ್ ಸೂಚಿಸಿದ್ದಾನೆ. ಅಫ್‌ಘಾನಿಸ್ಥಾನ, ಇರಾನಿನ ಪರ್ವತ ಪ್ರದೇಶಗಳು, ಯುಫ್ರಟೀಸ್ ಟೈಗ್ರಿಸ್ ನದೀ ತೀರಗಳು ಮೊದಲಾದೆಡೆಗಳಲ್ಲಿ ಮುಖ್ಯವಾಗಿ ಮೆಸೊಪೊಟೋಮಿಯಾದ ಅನೇಕ ಪ್ರಾಚೀನ ಸ್ಥಳನಾಮ ಗಳಿಗೆ ದ್ರಾವಿಡ ರೂಪಗಳೊಡನೆ ಸಾದೃಶ್ಯವಿರುವುದನ್ನು ಕಂಡು ಹಿಡಿದಿದ್ದಾರೆ. ಈ ಪ್ರದೇಶಗಳ ಸೆಮಿಟಿಕ್ ವಿಭಾಗದಲ್ಲೂ ಆರ್ಯವಿಭಾಗದಲ್ಲೂ ಸೇರದ ಜನರು ದ್ರಾವಿಡ ಭಾಷೆಯನ್ನು ಮಾತನಾಡುತ್ತಿದ್ದರು ಎಂಬುದೂ ಸ್ಪಷ್ಟವಾಗಿದೆ. ಹೇರಿಯನ್ ಭಾಷೆ ಹಾಗೂ ಕಾಸ್ಸೈಟ್ ಭಾಷೆಗೆ ದ್ರಾವಿಡ ಭಾಷೆಗಳೊಡನೆ ಹತ್ತಿರದ ಸಂಬಂಧ ಗೋಚರಿಸುತ್ತದೆ. ಎಲಾಮೈಟ್ ಭಾಷೆ ಮತ್ತು ಬ್ರಾಹುಇ ಭಾಷೆಗಳೊಡನೆ ಇತಿಹಾಸಕಾರರು ಸಂಬಂಧ ಕಲ್ಪಿಸಿದ್ದಾರೆ. ಎಲಾಮೆಟ್ ಭಾಷೆಯು ಹುಟ್ಟಿದ್ದು ಪಶ್ಚಿಮ ಏಷ್ಯಾದಲ್ಲಿ. ಹಾಗಾಗಿ, ಮೂಲ ದ್ರಾವಿಡ ಭಾಷೆಯೂ ಅದನ್ನು ಮಾತನಾಡುವ ಜನರೂ (ದ್ರಾವಿಡರು)ಈ ಪ್ರದೇಶಗಳಿಂದ ಬಂದವರೆಂದು ಊಹಿಸಲಾಗಿದೆ.

ದ್ರಾವಿಡರು ಮೆಡಿಟರೇನಿಯನ್ ವಂಶಜರೆಂಬ ಅಭಿಪ್ರಾಯದಲ್ಲಿ ಆಧುನಿಕ ಮಾನವ ಶಾಸ್ತ್ರಜ್ಞರಲ್ಲಿ ಸಹಮತವಿಲ್ಲ. ಮೆಡಿಟರೇನಿಯನ್ ವಂಶಜರನ್ನು ದಕ್ಷಿಣ ಯುರೋಪ್ರೊಯ್‌ಡ್ ವಂಶಜರು ಎಂದು ಕರೆಯಲಾಗುತ್ತದೆ. ಹೆಚ್ಚು ಕಡಿಮೆ ಬಿಳಿ ಮೈಬಣ್ಣದ ಜನವರ್ಗದವರಿವರು. ದ್ರಾವಿಡರು ಆಕೃತಿಯಲ್ಲಿ ಬಣ್ಣದಲ್ಲಿ ಇವರಿಗಿಂತ ಭಿನ್ನರಾದವರು. ದ್ರಾವಿಡರಲ್ಲಿ ಮಿಶ್ರವಂಶದ ಪ್ರಕೃತಿ ಹಾಗೂ ಬಣ್ಣವನ್ನು ನಾವು ಕಾಣಬಹುದು.

ದ್ರಾವಿಡರು ಸಿಂಧೂನದಿ ತೀರದಿಂದ ಬಂದವರೆಂಬ ಅಭಿಪ್ರಾಯ ಶಕ್ತವಾಗಿದೆ. ಸಿಂಧೂನದಿ ತೀರದ ಜನರು ಒಂದು ಮಿಶ್ರ ವಂಶಜರೆಂಬುದು ಖಚಿತವಾಗಿದೆ. ವಿವಿಧ ವಂಶಗಳಿಗೆ ಸೇರಿದ ಜನವರ್ಗದವರೆಲ್ಲ ಈ ಅತಿ ಪುರಾತನ ಸಾಂಸ್ಕೃತಿಕ ಕೇಂದ್ರದಲ್ಲಿ ಒಂದುಗೂಡಿದ್ದರು. ಹರಪ್ಪಾ, ಮೊಹೆಂಜೋದಾರೊಗಳಲ್ಲಿ ನಡೆಸಿದ ಉತ್ಖನನಗಳಲ್ಲಿ ದೊರೆತ ತಲೆಬುರುಡೆಗಳನ್ನು ಶೋಧಿಸಿದ್ದಾರೆ. ಪ್ರೋಟೋ ಆಸ್ಟ್ರೊಲ್ಯಾಡ್ ವಂಶಜರು, ಮೆಡಿಟರೇನಿಯನ್ ವಂಶಜರು, ಮಂಗೋಲಿಯನ್, ಆಲ್ಪೈನ್ ವಂಶಜರು ಮೊದಲಾದವರೆಲ್ಲ ಅಲ್ಲಿದ್ದರು ಎಂಬುದನ್ನು ಸಂಶೋಧಕರು ಸ್ಪಷ್ಟಪಡಿಸಿದ್ದಾರೆ. ಇವುಗಳಲ್ಲಿ ಅತ್ಯಂತ ಹೆಚ್ಚು ದೊರೆತುದು ಪ್ರೋಟೋ ಅಸ್ಟ್ರೋಲ್ಯಾಡ್ ಮತ್ತು ಮೆಡಿಟರೇನಿಯನ್ ವಂಶಜರ ಅವಶೇಷಗಳಾಗಿವೆ.

ಮೆಡಿಟರೇನಿಯನ್ ವಂಶಜರು ಪಶ್ಚಿಮ ಏಷ್ಯಾದಿಂದ ಬಲೂಚಿಸ್ಥಾನ ದಾರಿಯಾಗಿ ಭಾರತವನ್ನು ತಲುಪಿದರು ಎಂದು ಊಹಿಸಲಾಗಿದೆ. ಬಲೂಚಿಸ್ಥಾನದಲ್ಲಿ ಕಾಣುವ ಬ್ರಾಹುಇ ವರ್ಗದವರು ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಭಾಷೆಯನ್ನು ಮಾತನಾಡುತ್ತಾರೆ. ಸೈಂಧವ ಜನರ ಹಾಗೂ ಮೆಡಿಟರೇನಿಯನ್ ಜನರ ಸಂಬಂಧಗಳನ್ನು ಕುರಿತಂತೆ ಮಾನವಶಾಸ್ತ್ರಜ್ಞರು ವಿಭಿನ್ನ ಅಭಿಪ್ರಾಯಗಳನ್ನು ಪ್ರಕಟಿಸಿದ್ದಾರೆ. ದ್ರಾವಿಡ ಜನರ ಪ್ರಮುಖ ವಿಭಾಗವು ಮೇಡಿಟರೇನಿಯನ್ ವಂಶದಲ್ಲಿಯೇ ಅಥವಾ ಅವರೊಡನೆ ಹತ್ತಿರ ಸಂಬಂಧ ಹೊಂದಿದ ಒಂದು ವಂಶಕ್ಕೆ ಸೇರಿದವರೆಂಬುದು ಸ್ಲೇಟರನ ಅಭಿಪ್ರಾಯವಾಗಿದೆ. ತಲೆಬುರುಡೆಯ ಆಕಾರದಲ್ಲಿ ತಲೆಗೂದಲಿನ ಬಣ್ಣದಲ್ಲಿ ಹಾಗೂ ಶರೀರ ಪ್ರಕೃತಿಯಲ್ಲಿ ಇರುವ ಸಾಮ್ಯ ಕುತೂಹಲಕರವಾಗಿದೆ. ಮೆಡಿಟರೇನಿಯನ್ ವಂಶಜರ ಎಂದು ಶಾಖೆ ಮೆಸೊಪೊಟೋಮಿಯಾ ಬಲೂಚಿಸ್ಥಾನ ದಾರಿಯಾಗಿ ಭಾರತಕ್ಕೆ ಬಂದುದಾಗಿ ಸ್ಲೇಟರನು ಅಭಿಪ್ರಾಯಪಟ್ಟಿದ್ದಾನೆ. ಅದು ಸುಮೇರಿಯನ್ ಸಂಸ್ಕೃತಿಯ ಉದಯಕ್ಕೂ ಪೂರ್ವದಲ್ಲಿಯೇ ಆಗಿರಬಹುದು. ಭಾರತದ ಹೊಸ ಪರಿಸರದಲ್ಲಿ ಬಾಹ್ಯವಾದ ಹಲವು ಶಕ್ತಿಗಳೂ ಒಡಗೂಡಿದಾಗ ಅವರು ದ್ರಾವಿಡ ಸಂಸ್ಕೃತಿಯನ್ನು ವಂಶವನ್ನು ಹುಟ್ಟು ಹಾಕಿದರು.

ಮೆಡಿಟರೇನಿಯನ್ ವಂಶಜರು ಹಾಗೂ ಪ್ರೋಟೋ ಅಸ್ಟ್ರೋಲ್ಯೊಡ್ ವಂಶಜರು ಸೇರಿಯೇ ದ್ರಾವಿಡರು ಜನ್ಮ ತಳೆದರು ಎಂಬುದನ್ನು ಆಧುನಿಕ ಮಾನವಶಾಸ್ತ್ರಜ್ಞರು ಬಲವಾಗಿ ಸೈದ್ಧಾಂತೀಕರಿಸುತ್ತಾರೆ ಮಧ್ಯಶಿಲಾಯುಗದಲ್ಲಿ ವಾಯವ್ಯದಿಂದ ಬಂದ ಯುರೋಪ್ಯನರು ಅಥವಾ ಯುರೋಪ್ಪೆಯ್ಡ್ ಮೇಜರ್ ವಂಶದ ಜನರು ನೀಗ್ರೋ ಅಸ್ಟ್ರೋಲೈಡ್ ವಂಶಜರ ಗಡಿಯೊಳಗೆ ಅಕ್ರಮವಾಗಿ ಪ್ರವೇಶಿಸಿದರು ಎಂಬುದನ್ನು ಪುರಾತತ್ತ್ವ ಸಂಶೋಧಕರು ಸ್ಪಷ್ಟಪಡಿಸಿದ್ದಾರೆ ಎಂದು ಯು.ಎಗುಕೋವ್‌ಸ್ಕಿ ಎಂಬ ಮಾನವ ಶಾಸ್ತ್ರಜ್ಞ ಅಭಿಪ್ರಾಯಪಟ್ಟಿದ್ದಾನೆ. ಈ ಎರಡು ವಂಶಜರ ಮಿಲನದ ಫಲವಾಗಿ ಮಧ್ಯಶಿಲಾಯುಗದ ಅಂತ್ಯದ ವೇಳೆಗೆ ಇಂಡೋ ಪಾಕಿಸ್ತಾನ ಉಪ ಭೂಖಂಡಗಳಲ್ಲಿ ದ್ರಾವಿಡ ವಿಭಾಗಕ್ಕೆ ಸೇರಿದ ಜನರು ಹುಟ್ಟಿಕೊಂಡರು ಎಂದು ಆತ ಸ್ಪಷ್ಟಪಡಿಸಿದ್ದಾನೆ. ಸೈಂಧವ ಲಿಪಿಗಳನ್ನು ಓದಲು ಶ್ರಮಿಸಿದ ಪಿನ್ನಿಷ್ ಪಂಡಿತರ ಅಭಿಪ್ರಾಯದಲ್ಲಿಯೂ ಸೈಂಧವ ಸಂಸ್ಕೃತಿಯನ್ನು ಹುಟ್ಟು ಹಾಕಿದ

ದ್ರಾವಿಡ ಜನರು ಹುಟ್ಟಿದುದು ಮೆಡಿಟರೇನಿಯನ್ ಅಸ್ಟ್ರೋಲ್ಯಾಡ್ ವಂಶಜರ ಸಮ್ಮಿಲನದಿಂದ ಎಂಬುದೇ ಆಗಿದೆ. ವಿಕಾಸ ಹೊಂದಿದ ಸಂಸ್ಕೃತಿಯೊಂದು ಮೆಡಿಟರೇನಿಯನ್ ತೀರದಿಂದ ಬಂದು ಇಲ್ಲಿಯ ಮಣ್ಣಿನಲ್ಲಿ ಬೇರೂರಿದ ಸಂಸ್ಕೃತಿಯೇ ದ್ರಾವಿಡ ಸಂಸ್ಕೃತಿ ಎಂದು ವಾದಿಸುವವರೂ ಇದ್ದಾರೆ. ಹೊರಗಿನಿಂದ ಬಂದ ಸಂಸ್ಕೃತಿಯೆಂದು ಎಷ್ಟು ಉಜ್ವಲವಾಗಿದ್ದರೂ ಇಲ್ಲಿಯ ಪರಿಸ್ಥಿತಿಗಳು ಅದನ್ನು ಸೇರಿಸಿಕೊಳ್ಳಲು ಹಾಗೂ ಪುಷ್ಟೀಕರಿಸಲು ಸಹಾಯ ಮಾಡದಿದ್ದರೆ ಹೊರಗಿನಿಂದ ಬಂದ ಸಂಸ್ಕೃತಿ ನಾಶವಾಗಿ ಹೋಗಬಹುದು. ಹಾಗೆಯೇ ಅನುಕೂಲಕರವಾದ ಪರಿಸ್ಥಿತಿಯ ಕಾರಣವಾಗಿ ವಿನೂತನ ವಿಕಾಸಗಳ ಪರಿಣಾಮವಾಗಿ ಆಕರ್ಷಕವಾದ ಸಂಸ್ಕೃತಿಯೊಂದು ಅರಳುವುದು ಸಾಧ್ಯವಿದೆ. ಸಿಂಧೂನದೀ ಕಣಿವೆಯಲ್ಲಿಯು ಇದೇ ನಡೆದುದು. ಕ್ರಿ.ಪೂ. ನಾಲ್ಕನೆಯ ಶತಮಾನ ಅಥವಾ ಅದಕ್ಕೂ ಹಿಂದೆ ಇಲ್ಲಿಗೆ ಬಂದು ತಲುಪಿದ ಮೆಡಿಟರೇನಿಯನ್ ವಂಶಜರು ಇಲ್ಲಿಯೇ ಇದ್ದ ಪ್ರೋಟೋ ಅಸ್ಟ್ರಲ್ಯಾಡ್ ವಂಶಜರು ಪರಸ್ಪರ ಸೇರಿ ಸಂಕರ ಸಂಸ್ಕೃತಿಯನ್ನು ಸೃಷ್ಟಿಸಿದರು. ಇದುವೇ ಭಾರತ ಭೂಖಂಡದಲ್ಲಿ ಬೆಳೆದ ಸೈಂಧವ ಸಂಸ್ಕೃತಿ ಅಥವಾ ದ್ರಾವಿಡ ಸಂಸ್ಕೃತಿ ಎಂಬುದು ಬಹುತೇಕ ವಿದ್ವಾಂಸರ ಅಭಿಪ್ರಾಯವಾಗಿದೆ

ಕಡಲದಾರಿಯಲ್ಲಿಯೂ ತೀರದ ದಾರಿಯಲ್ಲಿಯೂ ದ್ರಾವಿಡರು ಕ್ರಿ.ಪೂ.ದಲ್ಲಿಯೇ ದಕ್ಷಿಣ ಭಾರತದ ಪ್ರದೇಶಗಳಿಗೆ ಬಂದು ಸೇರಿದ ಬಗೆಗೆ ಸಂಶೋಧಕರು ಪುರಾವೆಗಳನ್ನೊದಗಿಸುತ್ತಾರೆ. ಅವರು ಬರುವುದಕ್ಕೆ ಪೂರ್ವದಲ್ಲಿ ಇಲ್ಲಿ ನೆಲೆಸಿದ್ದವರು ನಾಗವಂಶಕ್ಕೆ ಸೇರಿದ ಜನವರ್ಗದವರು. ಅವರ ಪ್ರಾಬಲ್ಯವನ್ನುಕುಗ್ಗಿಸಿ ದ್ರಾವಿಡರು ತಮ್ಮ ಆಧಿಪತ್ಯವನ್ನು ಸ್ಥಾಪಿಸಿದ ಬಗೆಗೂ ವಿದ್ವಾಂಸರು ಮಾಹಿತಿಗಳನ್ನು ಕಲೆಹಾಕಿದ್ದಾರೆ. ಹೀಗೆ ಬಂದ ದ್ರಾವಿಡರು ತಮ್ಮೊಡನೆ ಭಾಷೆಯನ್ನು ತಂದಿದ್ದರಲ್ಲದೆ ತಮ್ಮ ಸಂಸ್ಕೃತಿಯ ಜೊತೆಗೆ ಸ್ಥಳೀಯವಾದ ಸಂಸ್ಕೃತಿಯ ಮಿಲನದ ಮೂಲಕ ಹೊಸ ಸಂಸ್ಕೃತಿಯ ಹುಟ್ಟಿಗೆ ನಾಂದಿ ಹಾಡಿದರು. ಪರಿಣಾಮವಾಗಿ ದ್ರಾವಿಡ ಸಂಸ್ಕೃತಿ ಎಂಬ ಸಂಸ್ಕೃತಿಯು ತನ್ನ ವಿವಿಧಾಂಗಗಳಲ್ಲಿ ಅನನ್ಯತೆಯನ್ನು ಕಾಪಾಡಿಕೊಂಡು ಬಂದಿದೆ.

## ಗ್ರಂಥಋಣ

೧. ಗೋಪಾಲ ಕೃಷ್ಣನ್ ಎ.ಕೆ.- *ಕೇರಳತ್ತಿಂಡೆ ಸಾಂಸ್ಕಾರಿಕ ಚರಿತ್ರಂ,* ಕೇರಳ ಭಾಷಾ ಇನ್‌ಸ್ಟಿಟ್ಯೂಟ್, ನಾಲ್ಕನೆಯ ಮುದ್ರಣ - ೧೯೯೧

೨. ಎ.ಶ್ರೀಧರ ಮೇನೋನ್ - *ಕೇರಳ ಸಂಸ್ಕಾರಂ,* ಪ್ರಿಂಟರ್ಸ್ ಪಬ್ಲಿಷರ್ಸ್ ಪ್ರೈವೇಟ್ ಲಿಮಿಟೆಡ್, ಮದ್ರಾಸು -೩೧



೫

# ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ 'ಕುಳವ' ಭಾಷೆಯ ವೈಶಿಷ್ಟ್ಯಗಳು

ಡಾ.ಬಿ.ಪಿ.ರಾಮಯ್ಯ

ಸಮಾಜ ಶಾಸ್ತ್ರಜ್ಞರ ಪ್ರಕಾರ ಪ್ರಪಂಚದಲ್ಲಿ ಸುಮಾರು ೨೭೯೬ ಭಾಷೆಗಳಿವೆ. ಅವುಗಳಲ್ಲಿ ಕೆಲವು ಭಾಷೆಗಳು ಮಾತ್ರ ಗ್ರಂಥಸ್ಥವಾಗಿದ್ದು ಬಹುಕಾಲದಿಂದ ಬೆಳೆದು ಬಂದಿರುವ ಸಾಹಿತ್ಯವನ್ನೂ ಅವುಗಳ ಲಕ್ಷಣಗಳನ್ನೂ ತಿಳಿಸುವ ವ್ಯಾಕರಣಗಳನ್ನೂ ಪಡೆದಿವೆ. ಇವುಗಳ ಚರಿತ್ರೆಯನ್ನು ತಿಳಿಸುವುದಕ್ಕೆ ಅವಶ್ಯವಾದ ಸಾಮಗ್ರಿಗಳಿಗೆ ಏನೂ ಕೊರತೆಯಿಲ್ಲ. ಅನೇಕ ಭಾಷೆಗಳು ಇನ್ನೂ ಬಾಯಿ ಮಾತಿನ ಅವಸ್ಥೆಯಲ್ಲೇ ಇವೆ. ಅವಕ್ಕೆ ಲಿಪಿಯಿಲ್ಲ. ಅವು ಗ್ರಂಥಸ್ಥವಾಗಿಲ್ಲ. ಇಂಥ ಭಾಷೆಗಳು ಬೆಳವಣಿಗೆಯನ್ನು ಪಡೆದಿಲ್ಲವೆಂದು ಹೇಳಲಾಗುವುದಿಲ್ಲ. ಆ ಬೆಳವಣಿಗೆಯನ್ನು ತಿಳಿಯಲು ಬೇಕಾದ ಸಾಮಗ್ರಿ ಇಲ್ಲವೆಂದು ಮಾತ್ರ ಹೇಳಬಹುದು.[೧] ಈ ಹಿನ್ನೆಲೆಯಲ್ಲಿ ವಿಚಾರ ಮಾಡಿದರೆ ಪ್ರತಿಯೊಂದು ಭಾಷೆಗೂ ಒಂದು ಅಸ್ತಿತ್ವವಿದೆ, ಒಂದು ಇತಿಹಾಸವಿದೆ. ಈ ಇತಿಹಾಸವನ್ನು ಅರಿಯಲು ಮಾತ್ರ ಸರಿಯಾದ ಸಾಮಗ್ರಿ ದೊರೆಯುತ್ತಿಲ್ಲ. ಈಗ ಸಿಕ್ಕಿರುವ ಆಧಾರಗಳ ಮೇಲೆಯೇ ವಿವೇಚಿಸಿದರೆ ಕೊರಮರ (ಕುಳವ) ಭಾಷೆಯು ಸ್ವತಂತ್ರ ಭಾಷೆಯಲ್ಲ; ಮತ್ತೊಂದು ಭಾಷೆಯ ಉಪಭಾಷೆ ಎಂಬುದು ತಿಳಿಯುತ್ತದೆ. ಕೊರಮರ ಭಾಷೆಯಲ್ಲಿ ಕಂಡು ಬರುವ ಹೆಚ್ಚಿನ ಶಬ್ದಗಳು, ಅವು ಉಚ್ಚರಿಸಲ್ಪಡುವ ರೀತಿ ಮತ್ತು ಅವುಗಳ ಅರ್ಥವನ್ನು ಗ್ರಹಿಸಿದಾಗ ಇದು ತಮಿಳು ಭಾಷೆಯ ಸಮೀಪಕ್ಕೆ ಹೋಗುತ್ತದೆ. ಆದ್ದರಿಂದ ಇದು ಪೂರ್ವದ್ರಾವಿಡ ಸಂದರ್ಭದಲ್ಲಿಯೇ ಮೂಲನೆಲೆಯಿಂದ ಪ್ರತ್ಯೇಕಗೊಂಡಿರಬೇಕೆಂದು ತೋರುತ್ತದೆ. ಕೊರಮರಲ್ಲಿ ಕೆಲವರು ತಮ್ಮ ಭಾಷೆಯನ್ನು 'ಕೊಂಗ' ಭಾಷೆ ಎಂದು ಕರೆಯುತ್ತಾರೆ. ತಮಿಳರನ್ನು ನಮ್ಮಲ್ಲಿ 'ಕೊಂಗರು' ಎಂದು ವಾಡಿಕೆಯಲ್ಲಿ ಗುರುತಿಸುವುದನ್ನು ನೋಡಿದರೆ ಈ ಭಾಷೆಯ ಮೂಲ ತಮಿಳುನಾಡಿಗೆ ಸೇರುವುದನ್ನು ಅರಿಯಬಹುದು.

ಕೊರಮರ ಮೂಲನೆಲೆಯಿಂದ ಪ್ರತ್ಯೇಕಗೊಂಡು ಚದುರಿ ಹೋದುದರಿಂದ ಮತ್ತು

ಸಂಚಾರಿಗಳಾಗಿ ಉಳಿದು ಹೊಟ್ಟೆ ಹೊರಕೊಳ್ಳುವುದರಲ್ಲಿಯೇ ಕಾಲ ಕಳೆದುದರಿಂದ ತಮ್ಮ ಭಾಷೆಯನ್ನು ಸಮರ್ಪಕವಾದ ರೀತಿಯಲ್ಲಿ ಬೆಳೆಸಲು ಸಾಧ್ಯವಾಗಲಿಲ್ಲವೆಂದು ತೋರುತ್ತದೆ. ಲಿಪಿಯನ್ನು ಗುರ್ತಿಸಿ ಗ್ರಂಥಸ್ಥ ಸಾಹಿತ್ಯವನ್ನು ನಿರ್ಮಾಣ ಮಾಡಲೂ ಸಾಧ್ಯವಾಗಲಿಲ್ಲ. ತಮಿಳು ಲಿಪಿಯ ಶೋಧಕ್ಕಿಂತಲೂ ಮುಂಚೆಯೇ ಈ ಬುಡಕಟ್ಟು ಮೂಲನೆಲೆಯಿಂದ ಚದುರಿದ್ದರಿಂದಲೇ ತಮಿಳು ಲಿಪಿಯನ್ನು ಬಳಸಲು ಇವರಿಗೆ ಸಾಧ್ಯವಾಗಿಲ್ಲ. ಇಲ್ಲದಿದ್ದರೆ, ಒಂದು ಕಾಲದ ತಮಿಳು ಲಿಪಿಯ ಒಂದು ರೂಪವಾದರೂ ಇವರಲ್ಲಿ ಉಳಿಯಬೇಕಾಗಿತ್ತು. ಕೊರಮರ ಭಾಷೆ ಗ್ರಂಥಸ್ಥರೂಪವನ್ನು ಪಡೆಯದೇ ಇರುವುದರಿಂದ ತಮಿಳಿನ ಹಾಗೆ ಬೆಳೆಯಲು ಸಾಧ್ಯವಾಗಲಿಲ್ಲ.

## ವಿದ್ವಾಂಸರ ಅಭಿಪ್ರಾಯ

ತಮಿಳಿನ ಒಂದು ಸಾವಿರ ವರ್ಷಗಳಷ್ಟು ಹಿಂದಿನ ಚರಿತ್ರೆಯನ್ನು ಅರಿಯಬಹುದಾದರೂ ಕೊರಮ ಭಾಷೆಯು ಕೇವಲ ನೂರು ವರ್ಷಗಳ ಇತಿಹಾಸವನ್ನು ಅರಿಯಲು ಸರಿಯಾದ ಆಧಾರಗಳಿಲ್ಲ. ಇದಕ್ಕೂ ಲಿಪಿಯಿದ್ದು, ಸಾಹಿತ್ಯಿಕ ಕೃತಿಗಳಿದ್ದಿದ್ದರೆ ಆ ಬಗ್ಗೆ ಯೋಚಿಸ ಬಹುದಾಗಿತ್ತು. ಇಂದು ಕೊರಮರ ಭಾಷೆ ಒಂದು ಲಿಪಿಯಿಲ್ಲದ ಸ್ವತಂತ್ರ ಉಪ ಭಾಷೆಯಂತೆ ತೋರಿದರೂ ಇದರ ಬೇರು ತಮಿಳಿನಲ್ಲಿಯೇ ಆತುಕೊಂಡಿದೆ. 'ಒಂದು ಭಾಷೆಯನ್ನಾಡುವ ಎರಡು ಸಮಾಜಗಳು ಒಂದರಿಂದೊಂದು ಎಷ್ಟು ಸಮಯ ಮತ್ತು ಎಷ್ಟು ದೂರ ಬೇರೆಬೇರೆ ಯಾಗಿರುತ್ತವೆಯೋ ಅಷ್ಟೇ ಅವುಗಳೊಳಗಿನ ಭಾಷಾ ವ್ಯತ್ಯಾಸವೂ ಹೆಚ್ಚಾಗುತ್ತದೆ.[೨] ಆದ್ದರಿಂದ ತಮಿಳು ಮತ್ತು ಕೊರಮರ ಭಾಷೆಗಳನ್ನು ಹೋಲಿಸಿ ನೋಡುವಾಗ ಅವುಗಳ ರೂಪ ವ್ಯತ್ಯಾಸ ಮತ್ತು ಅವು ಒಂದರಿಂದೊಂದು ಪಡೆದ ಭಿನ್ನತೆಯ ಅರಿವಾಗುತ್ತದೆ. ಈ ವ್ಯತ್ಯಾಸಕ್ಕೆ ಅನ್ಯಭಾಷಾ ಸಂಪರ್ಕ, ಭಿನ್ನ ಸಂಸ್ಕೃತಿಗಳ ಪ್ರಭಾವವೂ ಬಹುಮುಖ್ಯ ಕಾರಣ ಗಳಾಗುತ್ತವೆ ಎಂಬುದನ್ನು ಒಪ್ಪಲೇಬೇಕು. ತಮಿಳಿನಲ್ಲಿ ಕೈಕಾಡೀ (Kailkadi) ಕೋರ್ವಿ (Korvi) ಮತ್ತು ಯರುಕುಲ (Yerukala) ಮುಂತಾದ ಉಪಭಾಷೆಗಳಿವೆ.[೩] ಇವೆಲ್ಲ ಕೊರಮರ ಜಾತಿಯ ಹಲವು ಹೆಸರುಗಳು. ಭಾಷೆ ಒಂದೇ ಆದರೂ ಜಾತಿಯ ಹಲವು ಹೆಸರುಗಳು ಈ ಭಾಷೆಗೂ ಬಂದಿವೆ. ಕೊರಮರನ್ನು ಬೊಂಬಾಯಿ ಪ್ರಾಂತ್ಯದಲ್ಲಿ ಕೈಕಾಡಿ ಗಳೆಂದರೆ, ಮದ್ರಾಸ್ ಪ್ರಾಂತ್ಯದಲ್ಲಿ ಕೋರ್ವಿ ಎಂದೂ ತೆಲುಗು ಪ್ರಾಂತ್ಯದಲ್ಲಿ ಯರುಕುಲ ಎಂದೂ ಕರೆಯುವ ಬಗೆಗೆ ಉಲ್ಲೇಖಗಳಿವೆ. ಇದರಿಂದ, ಈ ಜನ ಯಾವ ಪ್ರಾಂತ್ಯ ದಲ್ಲಿದ್ದರೂ ಆಡುವ ಭಾಷೆ ಒಂದೇ ಎಂಬುದು ಅರ್ಥವಾಗುತ್ತದೆ. ಕೊರಮರಾಡುವ ಭಾಷೆಯ ಬಗೆಗೆ ಬೇರೆಬೇರೆ ಪ್ರಾಂತ್ಯದ ವಿದ್ವಾಂಸರು ಉಲ್ಲೇಖಿಸಿರುವ ಶಬ್ದಗಳನ್ನು ಗಮನಿಸಿದರೆ ಇದು ತಿಳಿಯುತ್ತದೆ. ಬೇರೆ ಬೇರೆ ಪ್ರಾಂತ್ಯಗಳಲ್ಲಿಯ ಆಯಾ ಪ್ರದೇಶಕ್ಕೆ ಹೊಂದಿಕೊಂಡು ಬದುಕುತ್ತಿರುವ ಈ ಜನ ಆಯಾ ಪ್ರದೇಶದ ಭೌಗೋಳಿಕ ಸನ್ನಿವೇಶ, ಭಾಷಿಕ ಮತ್ತು ಸಂಸ್ಕೃತಿಗನುಗುಣವಾಗಿ ಬದುಕುತ್ತಿದ್ದರೂ ಇವರೆಲ್ಲ ಮೂಲದಲ್ಲಿ ಒಂದೇ

ಭಾಷೆಯ ನೆಲೆಯಿಂದ ಹೊರಟವರು. ಅವರಲ್ಲಿ ಕಂಡು ಬರಬಹುದಾದ ಬದಲಾವಣೆ ಕಾಲಾಂತರದಲ್ಲಿಉಂಟಾದದ್ದು ಎಂದು ತೋರುತ್ತದೆ.

"These people are the aborgines of hills and vallies of South India. Most of them are new in plains and a few is hills. Throughout southern states and engaged in various occupations. The kula and kothra are also the same with the people of his community though they differ in their mother tongue"[೪] ಎನ್ನುವ ಜ್ಞಾನ ಮಾಣಿಕಮ್ಮಾಳ್ ಇವರು ದಕ್ಷಿಣ ಭಾರತದ ಈ ಜನ ಕುಲ-ಗೋತ್ರಗಳಿಂದ ಒಂದೇ ಆದರೂ ಮಾತೃಭಾಷೆ ಮಾತ್ರ ಬೇರೆಯಾಗಿದೆ ಎನ್ನುವಲ್ಲಿ, ಅದು ಮಾತೃಭಾಷೆಯಲ್ಲ ಅವರ ವ್ಯವಹಾರದ, ತಾವು ಉಳಿದ ಪ್ರದೇಶದ ಭಾಷೆ ಎಂದು ಹೇಳುವುದು ಸೂಕ್ತ. ಇವರೇ ಹೇಳುವ ಹಾಗೆ ಕುಲ-ಗೋತ್ರ, ಜಾತಿಯಿಂದ ಒಂದಾದ ಇವರು ಮಾತೃಭಾಷೆಯಿಂದ ಬೇರೆಯಾಗಲು ಸಾಧ್ಯವಿಲ್ಲ. ಕರ್ನಾಟಕದಲ್ಲಂತೂ ಎಲ್ಲ ಭಾಗಗಳಲ್ಲಿ ವಾಸಿಸುವ ಕೊರಮರಲ್ಲಿ ಉಚ್ಚಾರಣ ವ್ಯತ್ಯಾಸವಿದ್ದರೂ ಒಂದೇ ಭಾಷೆಯನ್ನು ಮಾತನಾಡುತ್ತಾರೆ. ಕೊರಮರ ಭಾಷೆಯು ದ್ರಾವಿಡ ಮೂಲದ್ದಾದ್ದರಿಂದ ಪಂಚ ದ್ರಾವಿಡ ಭಾಷೆಗಳ ಶಬ್ದಗಳು ಇಲ್ಲಿ ಹೇರಳವಾಗಿವೆ. ಎಲ್ಲ ಪ್ರಾಂತ್ಯಗಳಲ್ಲಿ ವಾಸ ಮಾಡುತ್ತಿರುವ ಕೊರಮರ ಭಾಷೆಯ ಮೂಲ ಮಾನಗಳನ್ನು ತೌಲನಿಕವಾಗಿ ಗುರುತಿಸಿದರೆ ಅವರ ಮೂಲದ ಮಾತೃಭಾಷೆಯ ಸ್ವರೂಪವನ್ನು ತಿಳಿಯಲು ಸಾಧ್ಯವಾಗುತ್ತದೆ.

'ಕೊರಮರು ಆಯಾ ಪ್ರದೇಶಗಳಿಗೆ ಅನುಗುಣವಾಗಿ ಕನ್ನಡವನ್ನೋ, ತೆಲುಗನ್ನೋ, ತಮಿಳನ್ನೋ ಬಲ್ಲವರಾಗಿರುತ್ತಾರೆ. ತಮ್ಮ ತಮ್ಮಲ್ಲಿಯೇ ಮಾತನಾಡುವಾಗ ಬೇರೆಬೇರೆ ಭಾಷೆಗಳಿಂದ ಆಯ್ದುಕೊಂಡ ಶಬ್ದಗಳು ಅಪಭ್ರಂಶಗಳಿಂದ ಕೂಡಿದ ಭಾಷೆಯನ್ನು ಬಳಸು ತ್ತಾರೆ'[೫] ಎಂದು ಪ್ರೊ. ಮಲ್ಲಾಪುರ ಅವರು ಗುರುತಿಸಿರುವುದು ಸರಿಯಿದ್ದರೂ ಅವರಾಡುವ ಮೂಲ ಭಾಷೆಯ ಬಗೆಗೆ ಹೆಚ್ಚಿಗೆ ಏನೂ ಹೇಳಿಲ್ಲ. ಮಲ್ಲಾಪುರ ಅವರು ಕೊರವಂಜಿಯ ಬಗ್ಗೆ ಬರೆಯುತ್ತಾ : 'ಹೇಳುವೆ ಕಣಿ, ಕಣಿ ಕೇಳಿರಮ್ಮ' ಎಂದು ಸುಶ್ರಾವ್ಯವಾಗಿ ಹಾಡುತ್ತಾ ವೈಯಾರದಿಂದ ಮನೆ ಬಾಗಿಲಿಗೆ ಬರುತ್ತಾರೆ ಕೊರವಂಜಿಗಳು.

ಪಚ್ಚೈಮಲೈ ಪವಳ ಮಲೈ ಎಂಗಳ್ ಮಲೈ ಅಮ್ಮೋ
ಪರಮೇಶನ್ ವಾಳುವುದುಂ ಎಂಗಳ್ ಮಲೈ ಅಮ್ಮೋ
ಕೊಚ್ಚಿಮಲೈ ಕೊಡಗುಮಲೈ ಎಂಗಳ್ ಮಲೈ ಅಮ್ಮೋ
ಕುಮರೇಷನ್ ವಾಳುವುದುಂ ಎಂಗಳ್ ಮಲೈ ಅಮ್ಮೋ

ಎಂದು ಈ ಸಾಲುಗಳನ್ನು ಉದಾಹರಿಸಿದ್ದಾರೆ. ಕನ್ನಡ ನೆಲದ ಕೊರವಂಜಿಯ ಬಾಯಲ್ಲಿ ಬಂದಿರುವ ಈ ಹಾಡು ಶುದ್ಧ ತಮಿಳು ರೂಪದ್ದು. ಕೊರಮರ ಭಾಷೆಗೂ ಇದಕ್ಕೂ ಹೆಚ್ಚು ವ್ಯತ್ಯಾಸ ಕಂಡು ಬರುವುದಿಲ್ಲ. ಒಂದು ಕಾಲಕ್ಕೆ ಈ ಜನರ ಕಾರ್ಯವ್ಯಾಪ್ತಿ ತಮಿಳು ನಾಡಿನಿಂದ ಕೇರಳ ಮತ್ತು ಕರ್ನಾಟಕದ ಕೊಡಗಿನವರೆಗಿತ್ತು ಎಂಬುದು ತೋರುತ್ತದೆ ಯಾದರೂ ಇವರಿಗೆ ಕಾಡೇ ನಾಡಾಗಿತ್ತು ಎಂಬುದು ಇದರಿಂದ ಸುವ್ಯಕ್ತವಾಗುತ್ತದೆ.

ಮೇಲೆ ಹೇಳಿದ ಕೊರವಂಜಿಯ ತಮಿಳು ರೂಪದ ಹಾಡನ್ನು ಕನ್ನಡಕ್ಕೆ ಅನುವಾದಿಸಿದರೆ 'ಪಚ್ಚೆಯ ಪರ್ವತ ಹವಳದ ಗರಿ ನಮ್ಮ ಬೆಟ್ಟ; ಅಮ್ಮಾ ಪರಮೇಶ್ವರ ಇರುವುದು ನಮ್ಮ ಬೆಟ್ಟ; ಅಮ್ಮಾ ಕೊಚ್ಚಿಯ ಗಿರಿ ಕೊಡಗಿನ ಪರ್ವತ ನಮ್ಮ ಬೆಟ್ಟ, ಅಮ್ಮಾ ಕುಮಾರೇಷನ್ ಬದುಕುವುದು ನಮ್ಮ ಬೆಟ್ಟ ಅಮ್ಮಾ' ಎನ್ನುತ್ತಾ ಕೇರಿಕೇರಿಯಲ್ಲಿ ಕೊರವಂಜಿಯರು ಬರುತ್ತಾರೆ. ಪರಮೇಶ್ವರನ ನಾಡಿನಿಂದ ಬಂದ ವಿಶೇಷ ವೇಷ-ಭೂಷಣಗಳಿಂದ ಅಲಂಕೃತ ಳಾದ ಕೊರವಂಜಿಯಲ್ಲಿ ಕಣಿ ಕೇಳುವುದೇ ಅಂದಿನ ಜನರಿಗೆ ಸುಯೋಗವಾಗಿತ್ತೇನೋ. ಇದು ಏನೇ ಇದ್ದರೂ ಕೊರಮರು ತಮಿಳು ಮೂಲದವರು, ಕೊರಮರ ಭಾಷೆ ತಮಿಳು ಮೂಲದ್ದು ಎಂಬುದಕ್ಕೆ ಇದರಿಂದ ಪುಷ್ಟಿ ದೊರೆಯುತ್ತದೆ.

E. Thurston ಅವರು "In communication among themselves, the koravas and the yerukalas speak a corrupt polyglot, in which the words derived from several languages beer little resembalance to the original. Their words appear to be taken chiefly from Tamil, Telugu and canarise[೬] ಎಂಬ ಅಭಿಪ್ರಾಯವನ್ನು ಕೊಡುತ್ತಾರೆ. ತಮಿಳು, ತೆಲುಗು, ಕನ್ನಡ ಭಾಷೆಗಳು ಒಂದೇ ಮೂಲದಿಂದ ಹೊರಟವಾದ್ದರಿಂದ ತಮಿಳು ಮೂಲದ ಕೊರಮರ ಭಾಷೆಯಲ್ಲಿಯೂ ಈ ಮೂರು ಭಾಷೆಗಳ ಶಬ್ದಗಳು ಕಾಣುವುದು ಸಹಜವೇ. ಆ ಎಲ್ಲಾ ಭಾಷಾ ಜನಾಂಗಗಳೊಡನೆ ನಿಕಟ ಸಂಪರ್ಕ ಬಂದದ್ದರಿಂದ ಇತರ ಭಾಷೆಗಳ ಶಬ್ದಗಳು ಕೊರಮರ ಭಾಷೆಯಲ್ಲಿ ಕಂಡು ಬರುತ್ತವೆ. ಆದರೆ ಮೂಲ ಸ್ವರೂಪವನ್ನು ಪರಿಶೀಲಿಸಿದರೆ ಮಾತ್ರ ಇದೊಂದು ತಮಿಳಿನ ಉಪಭಾಷೆಯಂತೆ ನಮಗೆ ತೋರುತ್ತದೆ.

Rev. J. Cain " The yerukalas call the, langauage oodra which seems to stand for agibberish or thieves slang or as they explain, something very hard to understand oriya or oodra is the langauage of the Districts of Gangam and orissa. The word oriya means north and the fact that the yarukalas call their language oodra would seem to confirm their belief that they are a northern Tribe[೭] ಎನ್ನುತ್ತಾರೆ. ಆದರೆ ಕರ್ನಾಟಕದ ಕೊರಮರಲ್ಲಂತೂ ಈ ಮೇಲಿನ ಅಂಶಗಳು ಕಂಡು ಬರುವುದಿಲ್ಲ. ಅಲ್ಲದೇ ಇವರು ಉತ್ತರದವರು ಎಂಬುದಕ್ಕೆ ಯಾವುದೇ ಆಧಾರಗಳು ದೊರೆಯುವುದಿಲ್ಲ. ಒರಿಸ್ಸಾ ಭಾಗಕ್ಕೆ ಹೋಗಿ ನೆಲೆಸಿರುವ ಕೆಲವು ಕೊರಮರ ಗುಂಪುಗಳನ್ನು ಮಾತ್ರ ಗಮನಿಸಿ ಈ ಅಭಿಪ್ರಾಯಕ್ಕೆ ಬಂದಂತೆ ತೋರುತ್ತದೆ. Mr. Faweett ಅವರು ಕೊರಮ ಭಾಷೆಯ ಕೆಲವು ಶಬ್ದಗಳನ್ನು ಉದಾಹರಿಸಿದ್ದಾರೆ. Constable-Erthalakayadu-red headed man. Head Constable-Kederarilu. The man who rides on an ass. Taking bribe-Kali thidrathu-eating Ragi food. Toddy-Ugga perumalu ollathanni-white water or good water. Fouls-Rendukal Naidu-The Naidu of two legs. Mussalmans-Arupottavungo-Those who have cut (Circumcised)[೮] ಈ ಶಬ್ದರೂಪಗಳಲ್ಲಿ ಕೆಲವು ಅರ್ಥ ಕಳೆದುಕೊಳ್ಳದೇ ಮಾರ್ಪಾಟಾಗಿರುವುದು ಗೋಚರಿಸುತ್ತದೆ. ಎರ್ರ ತಲಕಾಯಡು-

ಎರ್‍ತರಕಾಯವು, ಕಳಿತಿನ್ರುತು-ಕಳಿತಿನ್ನು, ಆರ್‌ತೋಟವಂಗೋ-ಅರ್‌ತೋಟವು ಎಂದಾದರೆ ಕೆಡರಾರಿಲು-ಉಗ್ಗುಪೆರಮಾರಲು, ವೂಲಯ್‌ತನ್ನಿ ಮುಂತಾದ ಶಬ್ದಗಳು ಅಷ್ಟಾಗಿ ಈಗ ಬಳಕೆಯಲ್ಲಿ ಇಲ್ಲ. ಇವರು ಹೊಲೆಯನನ್ನು ಪರ್ಯದು, ಮಾದಿಗನನ್ನು, ಪರ್‌ಶಣದು, ತಮಗಿಂತ ಮೇಲು ಜಾತಿಯವರನ್ನೆಲ್ಲ ಒಟ್ಟಾಗಿ ವಳ್ಳಾಗ್ರು ಎನ್ನುತ್ತಾರೆ. ಸಾಮಾಜಿಕ ಒತ್ತಡದಿಂದಾಗಿ ಪ್ರಾದೇಶಿಕ ಭಾಷೆಗೆ ಹೊಂದಿಕೊಳ್ಳುತ್ತಿರುವ ಕೊರಮರಲ್ಲಿ ಮಾತೃಭಾಷೆ ಈಗಾಗಲೇ ಮರೆಯಾಗುತ್ತಿದೆ. ಈ ಜನ ಗುಂಪು ಗುಂಪಾಗಿ ಇರುವ ಕಡೆ ಮಾತ್ರ ತಮ್ಮ ಭಾಷೆಯನ್ನು ಮಾತನಾಡಿಕೊಳ್ಳುವುದು ಕಂಡುಬರುತ್ತದೆ.

ಪೂಪಾರಾವ್ ನಾಯಡು ಅವರು ಕೊರಮರ ನಾಲ್ಕು ಗೋತ್ರಗಳಾದ Sathepadi, Kavadi, Manapati, Mendragutte ಗಳನ್ನು ಗುರುತಿಸಿದ್ದಾರಲ್ಲದೇ They are all Corrupted tamil Words[೯] ಎಂದಿದ್ದಾರೆ. ಈ ಮೇಲಿನ ಶಬ್ದಗಳು ತಮಿಳಿನ ಅಶುದ್ಧರೂಪಗಳಂತೆ ತೋರಿದರೂ ಇವು ತಮಿಳಿನ ಮೂಲ ರೂಪವನ್ನೇ ಸಮರ್ಥಿಸುತ್ತವೆ. ದಕ್ಷಿಣ ಕರ್ನಾಟಕದ ಕೊರಮರ ಬಾಯಲ್ಲಿ 'ಸಾತಪಾಟಿ' ಸಾತಪಾಡಿಯಾಗಿ, ಮಾನಪಾಟಿ ಮಾನಪಾಡಿಯಾಗಿ ಬದಲಾಗಿದೆ. ಕವಾಡಿ ಮತ್ತು ಮ್ಯಾನ್ರಗುತ್ತಿ ಹಾಗೆಯೇ ಇವೆ. ತಿರುಚನಾಪಳ್ಳಿ ಜಿಲ್ಲೆಯ ಗೆಜೆಟಿಯರ್‌ನಲ್ಲಿ ಬಂದಿರುವ ಕೆಲವು ಶಬ್ದಗಳನ್ನು ಇ. ಥರ್‍ಸ್ಟನ್ ಅವರು ಉದಾಹರಿಸಿದ್ದಾರೆ. ಅವುಗಳಲ್ಲಿ ಕಂಪ (ಸಿಕ್ಕುಸಿಕ್ಕಾಗಿ ಬೆಳೆದ ಪೊದೆ), ಬಂಡಿ (ಗಾಡಿ), ಗಜ್ಜಲ (ಗೆಜ್ಜೆ) ಮುಂತಾದ ಶಬ್ದಗಳು ಕೊರಮರ ಭಾಷೆಯಲ್ಲಿ ಇಂದಿಗೂ ಬಳಕೆಯಲ್ಲಿವೆ[೧೦] Miche Kennedy ಅವರು ಕೈಕಾಡಿಗಳ ಭಾಷೆಯ ಕೆಲವು ಶಬ್ದಗಳನ್ನು ದಾಖಲಿಸಿದ್ದಾರೆ. ಬೊಂಬಾಯಿ ಪ್ರಾಂತ್ಯದ ಈ ಜನರ ಭಾಷೆಯ ಶಬ್ದಗಳಿಗೂ ಕರ್ನಾಟಕ ಈ ಜನರ ಭಾಷೆಯ ಶಬ್ದಗಳಿಗೂ ಇರುವ ಸಾಮ್ಯತೆ ಕೆಲವು ಶಬ್ದಗಳಲ್ಲಿ ಕಂಡು ಬರುತ್ತದೆ. ಆದರೂ ಕೆಲವು ಶಬ್ದಗಳಲ್ಲಿ ಕಂಡು ಬರುವುದಿಲ್ಲ. ಕೈಕಾಡಿ (ಬೊಂಬಾಯಿ) ಕೊರಮ (ಕರ್ನಾಟಕ) ವಂಚು ಅಂದರೆ ಬಂದ, ಬಂದನು, ಬಂದಿತು. ಕೆಲಮುಲ್-ಕೆಲ್ಲು, ಹಣ ಅಥವಾ ದುಡ್ಡು. ಯಲ್ಲಿ-ವಳ್ಳಿ ಬೆಳ್ಳಿ. ತಿಗಡು, ಕಳ್ಳ (ಕದ್ದದ್ದು) ಇವರು ಕೊಟ್ಟಿರುವ ಉಳಿದ ಶಬ್ದಗಳಲ್ಲಿ ಅರ್ಥ ಸರಿಯಾಗಿ ಆಗುವುದಿಲ್ಲ. ಆದರೆ ಕರ್ನಾಟಕದಲ್ಲಿ ಸಿದ್ರಾಮಪ್ಪ ಎನ್ನುವ ಶಬ್ದಕ್ಕೆ ಕೋಲು ಅಥವಾ ದೊಣ್ಣೆ ಎನ್ನುವ ಧ್ವನಿ ಇದೆ. ಕೊಲ್ಲುಲ್ಲೆಪ್ಪ ಎನ್ನುವ ಅಲ್ಲಿಯ ಶಬ್ದಕ್ಕೆ ಇಲ್ಲಿ ಕಲ್ಲು ಎನ್ನುವ ಅರ್ಥವಿದೆ.[೧೧] ಅವರಾಡುವ ಭಾಷೆಯನ್ನು ಕುರಿತು ಹೇಳುತ್ತಾ "Kaikadis of this Presidency can, as a rule, speak rude marathi or Kanarese, some times both. In the Deccan and among themselves they speak corrupt Telugu or Arvi, in the Carnatic, corrupt arvi, each with certain pecularities impossible to describe. Converses with one anohter in corrupt Telugu"[೧೨] ಎನ್ನುತ್ತಾರೆ.

## ಅಲೆಮಾರಿತನ ಮತ್ತು ಭಾಷೆ

ಕೊರಮರು (ಕೈಕಾಡಿಗಳು) ಅಲೆಮಾರಿಗಳಾದ್ದರಿಂದ ಇವರು ಹಲವಾರು ಭಾಷೆಗಳನ್ನು ಬಲ್ಲವರಾಗಿದ್ದಾರೆ. ಅವು ಅವರ ಮಾತೃಭಾಷೆಗಳಲ್ಲ. ಈ ಮೇಲೆ ಸೂಚಿಸಿದ ಉದಾಹರಿಸಿರುವ ಶಬ್ದಗಳು ತಮಿಳನ್ನು ಹೋಲುವುದರಿಂದ ಕೊರಮರ ಭಾಷೆ ಮತ್ತು ಅವರ ಮೂಲ ತಮಿಳಿನ ನೆಲೆಗೇ ಹೋಗುತ್ತದೆ. ಈ ವಿಷಯದಲ್ಲಿ ಅತಿ ನಿಖರವಾದ ಅಂಶವನ್ನು ಹೀರೇಂದ್ರ ಕೆ. ರಕ್ಷಿತ್ ಅವರು ಗುರುತಿಸಿದ್ದಾರೆ. "Originally they spoke Tamil in all the three states. But for the last several decades they are fast taking to the laguages of the respective states"[೧೩] ಎನ್ನುವಲ್ಲಿ ಇವರು ತಮಿಳು ಮೂಲದವರು ಎಂಬುದು ಮೇಲೆಯೇ ತಿಳಿಯುತ್ತದೆ. ಆದರು ಕೊರಮರು ಆಡುವ ಭಾಷೆ ಇತ್ತೀಚಿನ ತಮಿಳಲ್ಲ. ಅದು ಪೂರ್ವ ದ್ರಾವಿಡದ ಯಾವುದೋ ಒಂದು ಕಾಲದ ತಮಿಳು ರೂಪವಿರಬೇಕು ಎಂಬುದು ನಾವು ಭಾಷೆಯನ್ನು ಗಮನಿಸಿದಾಗ ತಿಳಿಯುತ್ತದೆ. ಅನಂತರದಲ್ಲಿ ಆದ ಬದಲಾವಣೆ ಬೇರೆ ಬೇರೆ ಪ್ರದೇಶಗಳಿಗೆ ಹರಡಿದ ಮೇಲೆ ಆಯಾ ಪ್ರದೇಶದ ಭಾಷೆಯ ಪ್ರಭಾವ ಇವರ ಭಾಷೆಯ ಮೇಲೆ ಉಂಟಾಗಿರಬಹುದು. ಇದು ಭಾಷೆಯ ಬೆಳವಣಿಗೆಯ ಹಂತದಲ್ಲಿ ಪರಭಾಷಾ ಶಬ್ದಗಳ ಸ್ವೀಕಾರ ಸಹಜವೇ.

ಯರುಕಲ ಮದುವೆಯ ಸಂಪ್ರದಾಯವನ್ನು ಇ. ಥರ್ಸ್ಟನ್[೧೪] ಅವರು ಹೇಳುವ ಸಂದರ್ಭದಲ್ಲಿ 'ಬೇರುಮನುಸ್' (Head man) ಬಗ್ಗೆ ಹೇಳಿದ್ದಾರೆ. ಕೊರಮರಲ್ಲಿ ಇಂದಿಗೂ ಈ ಶಬ್ದ ಹಿರಿಯ ಮನುಷ್ಯ ಅಥವಾ ಮುಖಂಡ ಎಂಬ ಅರ್ಥದಲ್ಲಿಯೇ ಬಳಕೆಯಾಗುತ್ತಿದೆ. ಅಂದರೆ, ಆಂಧ್ರದ ಯರುಕಲರಲ್ಲಿಯೂ ಕರ್ನಾಟಕದ ಕೊರಮರಲ್ಲಿಯೂ ಒಂದೇ ಅರ್ಥ ಈ ಶಬ್ದಕ್ಕೆ ಇದೆ (ಪೆರ್-ಹಿರಿಯ). ಆರ್.ಇ.ಎಂಥೋವನ್ ಅವರೂ ಕೂಡ ಕೊರಮರ ಭಾಷೆಯ ಬಗೆಗೆ "Their home tongue mixture of Telugu, Tamil and Kanarese, indicating the country of their origin" ಎಂದು ಹೇಳುವುದರ ಜೊತೆಗೆ ಅಬೇ ಡುಬೊಯಿಸ್ ಅವರ ಅಭಿಪ್ರಾಯ "Koravas besides speaking Telugu, Tamil and Kanarese are said also to have a Gipsy Language of theirown"[೧೫] ಎಂಬುದನ್ನು ಕೊಡುತ್ತಾರೆ. ಇಲ್ಲಿಯು ಕೊರಮರು, ಕೊರವರು ಸಂಚಾರಿಗಳಾದ್ದರಿಂದ ಮತ್ತು ಆಯಾ ಪ್ರದೇಶದ ಜನರೊಂದಿಗೆ ವ್ಯವಹರಿಸಲು ಆಯಾ ಭಾಷೆಗಳನ್ನು ಅರಿಯುವುದು ಅಗತ್ಯವೇ ಆಗಿತ್ತು. ಆದರೆ ಇವರು ಕೊರಮರ ಭಾಷೆಯ ಮೂಲದ ಬಗೆಗೆ ಹೆಚ್ಚಿಗೆ ಏನನ್ನೂ ಹೇಳುವುದಿಲ್ಲ. ಅಬೇ ಡುಬೊಯಿಸ್ ಅವರು ಕೂಡ 'ಜಿಪ್ಸಿ' ನಮೂನೆಯ ಭಾಷೆಯನ್ನು ಮಾತನಾಡುತ್ತಾರೆ ಎಂದರೂ ಆ ಭಾಷೆಯ ಮೂಲವೇನು ಎಂಬುದನ್ನು ಹೇಳುವುದಿಲ್ಲ. ಆದರೆ, ಕೊರಮರ ಕಣಿ ಹೇಳುತ್ತಿದ್ದುದನ್ನು ಮತ್ತು ಹಚ್ಚೆ ಹಾಕುವಲ್ಲಿಯ ಅವರ ನೈಪುಣ್ಯತೆಯನ್ನು ಗುರುತಿಸಿದ್ದಾರೆ. ಯಾವುದೇ ಪ್ರಾಂತ್ಯದಲ್ಲಿದ್ದರೂ ಕೊರಮರ ವೃತ್ತಿಯಾದ ಕಣಿ ಹೇಳುವುದು, ಹಚ್ಚೆ ಹಾಕುವುದು, ಬುಟ್ಟಿ ಮಾಡುವುದು ಮುಂತಾದ

ಉಪವೃತ್ತಿಗಳನ್ನು ಸೂಚಿಸುವ ಪದಗಳು ಕೊರಮರ ಭಾಷೆಯ ಮೂಲ ಪದದ ವಿಕೃತ ರೂಪಗಳಾದಂತೆ ಇವೆ. ಉದಾಹರಣೆಗೆ ಪಚ್ಚಿ ಕುತ್ತುಕ, ಎನ್ನುವ ಶಬ್ದ ಕರ್ನಾಟಕದ ಈ ಜನರಲ್ಲಿ ಪಚ್ಚಿಕುತ್ರುದು ಎಂದಾಗುತ್ತದೆ. ಕಳಿತಿಂಡ್ರು-ಕಳಿತಿನ್ನು ಎಂದಾಗುತ್ತದೆ. ಎಚ್.ವಿ. ನಂಜುಂಡಯ್ಯ ಮತ್ತು ಅನಂತಕೃಷ್ಣ ಅಯ್ಯರ್ ಅವರು "The Koravas are a Koramas speak Tamil, Telugu or Kanarese, according to the localities in which the live. But in communication among themselves the koravas and yerukulas speak a corrupt poluglot, in which the words derived from different languages bear little resumblence. The words appears to belong to the three langauages above mountained"[೨೬] ಎನ್ನುತ್ತಾರೆ. ಇವರು ಗುರುತಿಸಿರುವ ಹಾಗೆ ಕೊರಮರು ತಮಿಳು, ತೆಲುಗು ಮತ್ತು ಕನ್ನಡವನ್ನು ಅವರು ವಾಸಿಸುವ ಪ್ರದೇಶಕ್ಕನುಗುಣವಾಗಿ ಮಾತನಾಡುವುದು ಸಹಜವಾದರೂ ತಮ್ಮತಮ್ಮಲಿ ಅಶುದ್ಧ ಭಾಷೆಯೊಂದನ್ನಾಡುತ್ತಾರೆ. ಮತ್ತು ಆಭಾಷೆ ಆ ಮೇಲೆ ಹೇಳಿದ ಭಾಷೆಗಳ ಶಬ್ದಗಳ ನ್ನೊಳಗೊಂಡಿದೆ ಎಂದು ಹೇಳುವಲ್ಲಿ ಮಾತ್ರ ಆ ಭಾಷೆಯ ಮೂಲವನ್ನು ಸರಿಯಾಗಿ ಆಲೋಚಿಸಿದಂತಿಲ್ಲ. ಇದೇ ಲೇಖಕರು Mr.F. Faweett ಅವರು ಗುರುತಿಸಿರುವ ಕೆಲವು ಕೊರಮ ಭಾಷೆಯ ಶಬ್ದಗಳನ್ನು ಉದಾಹರಿಸಿದ್ದಾರೆ. ಕಾನ್‌ಸ್ಟೇಬಲ್-ಎರ್‌ತಲಕಾಯಡು, ಇದು ಕೊರಮರಲ್ಲಿ ಎರ್‌ತಲಕಾಯವು ಎಂದರೆ ಕೆಂಪು ತಲೆಯವನು, ಪೊಲೀಸ್ ಎಂದಾಗುತ್ತದೆ. Taking bribe-Kalithindrathu ಎಂಬುದನ್ನು ಕಳಿತಿನ್ನು ಅಂದರೆ ಊಟ ಮಾಡು ಎಂದೂ Musulmans Arthupotavange ಎಂಬುದನ್ನು ಆರ್‌ತೋಟವು ಅಂದರೆ ಕುಯ್ಯಿದಾಕಿದವನು ಅಥವಾ ಕೊಯ್ಯಿಕೊಂಡವನು, ಮುಸಲ್ಮಾನ್ ಎಂದಾಗುತ್ತದೆ. Rupess-Kellu ಎಂಬುದು ಹಣ ಅಥವಾ ದುಡ್ಡು ಎಂದಾಗುತ್ತದೆ. ಪಾಲಕ್‌ಣ್ಣಾವು, ಹಾಲ್‌ಗಣ್ಣಿನವ ಎಂದಾಗುತ್ತದೆ. ಉಳಿದ Kederarilu, Uggu perumalu, Olaithanni, Rendukal Naidu Utharalu-Keenjalu ಮುಂತಾದ ಶಬ್ದಗಳು ಈಗ ದಕ್ಷಿಣ ಕರ್ನಾಟಕದ ಕೊರಮರಲ್ಲಿ ಬಳಕೆಯಲ್ಲಿಲ್ಲ.

ಇಷ್ಟೆಲ್ಲ ಇದ್ದರೂ ಕೊರಮರು ತಮ್ಮ ಭಾಷೆಯ ಬಗೆಗೆ ಒಂದು ಕಥೆಯನ್ನು ಹೇಳುತ್ತಾರೆ. 'ಹಿಂದೆ ಒಂದು ಸಾರಿ ಪರಮೇಶ್ವರನು ಪ್ರಪಂಚದಲ್ಲಿದ್ದ ಎಲ್ಲ ನರಮನುಷ್ಯರಿಗೂ ಮಾತು ಕೊಡ್ತಾ ಇದ್ದ. ಎಲ್ಲರೂ ಬಂದು ಭಾಷೆ ಪಡೆದು ಹೋಗುತ್ತಿದ್ದರು. ಇತ್ತ ಕೊರಮನೊಬ್ಬ ಒಂದು ಮರದ ಕೆಳಗೆ ಬುಟ್ಟಿ ನೇಯುತ್ತಿದ್ದ. ಆ ದಾರಿಯಲ್ಲಿ ಬಂದವನೊಬ್ಬ ಈ ಕೊರಮನನ್ನು ಕುರಿತು 'ಅಯ್ಯಾ ಶಿವ ಎಲ್ಲರಿಗೂ ಮಾತು ಕೊಡುತ್ತಿದ್ದಾನೆ. ನೀನು ಹೋಗಿ ಮಾತನ್ನು ಪಡೆದುಕೋ' ಎಂದು ಹೇಳಿದ. ಆಗ ಕೊರಮರವನು ಭಾಷೆ ಕೇಳಲು ಪರಮೇಶ್ವರನ ಹತ್ತಿರಕ್ಕೆ ಹೋದ. ಅಷ್ಟರಲ್ಲಿ ಶಿವ ತನ್ನಲ್ಲಿದ್ದ ಎಲ್ಲಾ ಭಾಷೆಗಳನ್ನು ಹಂಚಿ ಬರಿಗೈಯಲ್ಲಿ ಕೈಲಾಸದತ್ತ ಹೊರಡಲನುವಾಗಿದ್ದ. ಆ ಸಮಯಕ್ಕೆ ಕೊರಮನು 'ಸ್ವಾಮಿ, ನನಗೂ ಒಂದು ಮಾತು ಕೊಡಿ' ಎಂದು ಬೇಡಿದ. ಆದರೆ, ಕೊಡಲು ಶಿವನಲ್ಲಿ

ಮಾತುಗಳಿರಲಿಲ್ಲ. ಅಲ್ಲದೇ ಆತನನ್ನು ಬರಿಗೈಯಲ್ಲಿ ಕಳಿಸಲು ಮನಸ್ಸಿರಲಿಲ್ಲ. ಆದ್ದರಿಂದ ತಾನೀಗಾಗಲೇ ಮಾತುಗಳನ್ನು ಹಂಚಿದ್ದ ಜನರನ್ನು ಕರೆದು ಆ ಎಲ್ಲಾ ಮಾತುಗಳಿಂದಲೂ ಒಂದೊಂದು ಪದವನ್ನು ತೆಗೆದುಕೊಂಡು ಒಂದು ಭಾಷೆಯನ್ನು ಮಾಡಿಕೊಟ್ಟನಂತೆ. ಅಂದಿನಿಂದ ಈ ಭಾಷೆ ನಮ್ಮ ಜನರಿಗೆ ರೂಢಿಯಾಯಿತು ಎಂದು ಹೇಳುತ್ತಾರೆ.[೧೨] ಈ ಐತಿಹ್ಯದ ಆಶಯವನ್ನು ಗಮನಿಸಿದರೆ ಕೊರಮರಿಗೆ ತಮ್ಮದೇ ಆದ ಸ್ವತಂತ್ರ ಭಾಷೆಯಿಲ್ಲ. ಇತರ ದ್ರಾವಿಡ ಭಾಷೆಗಳ ಸಮ್ಮಿಶ್ರಣವೇ ಈ ಕೊರಮರ ಭಾಷೆಯ ಸತ್ವ ಎಂಬುದು ವೇದ್ಯವಾಗುತ್ತದೆ. ಮತ್ತೆ ಕೆಲವರು ಹೇಳುವ ಹಾಗೆ ನಮ್ಮದು 'ಕೊಂಗ' ಭಾಷೆ ಎನ್ನುತ್ತಾರೆ. ತಮಿಳಿನ ನಾಲ್ಕು ಉಪಭಾಷಾ ಕ್ಷೇತ್ರಗಳನ್ನು ಗುರುತಿಸುವಾಗ ಕಂಗ ನಾಡು ಎಂದರೆ ಇಂದಿನ ಕೊಯಂಬತ್ತೂರು, ಪೆರಿಯಾರ್, ಸೇಲಂ, ಧರ್ಮಪುರಿ ಮತ್ತು ನೀಲಗಿರಿ ಜಿಲ್ಲೆಗಳ ನ್ನೊಳಗೊಂಡ ಭಾಗ ಎಂದು ಗುರುತಿಸಲಾಗುತ್ತಿದೆ. ಈ ನಾಡಿನ ಗುಡ್ಡಬೆಟ್ಟಗಳಲ್ಲಿ ಬೆಳೆದು ಬಂದ ಕೊರಮರು ತಮ್ಮ ಭಾಷೆಯನ್ನು ಕೊಂಗ ಭಾಷೆ ಎಂದು ಕರೆದುಕೊಳ್ಳುವುದರಲ್ಲಿ ಅರ್ಥವಿದೆ. ಅದೇನೇ ಇರಲಿ ದ್ರಾವಿಡ ಭಾಷೆಗಳ ಶಬ್ದಗಳು ಕುಳುವ ಅಥವಾ ಕೊರಮ ಭಾಷೆಯಲ್ಲಿ ಕಂಡು ಬರುತ್ತದೆಯಾದರೂ ತಮಿಳಿನ ಶಬ್ದಗಳೇ ಅತೀ ಹೆಚ್ಚೆಂದು ಹೇಳ ಬಹುದು.

## ಕೆಲವು ವೈಶಿಷ್ಟ್ಯಗಳು

ಒಂದು ಬೆಳೆಯುತ್ತಿರುವ ಭಾಷೆ ತನ್ನ ಸಮೀಪದ ಭಾಷೆಗಳ ಜೊತೆಗೆ ಕೊಡುಕೊಳೆ ಮಾಡುವುದಂತೂ ಸಹಜವೇ. ತೀರಾ ಕಡಿಮೆ ಸಂಖ್ಯೆಯ ಜನ ಸಮುದಾಯ ಮಾತನಾಡುವ ಭಾಷೆ ಅಥವಾ ತನ್ನ ಮೂಲಜನ ಸಮೂಹದಿಂದ ದೂರಾದ ಅಲ್ಪಸಂಖ್ಯೆಯ ಜನರಲ್ಲಿಯೇ ಉಳಿದ ಭಾಷೆ ಕಾಲಾಂತರದಲ್ಲಿ ತನ್ನ ಮೂಲ ಭಾಷೆಯೊಂದಿಗೆ ಸೇರಲು ಸಾಧ್ಯವಾಗದೇ ತನ್ನ ರೂಪವನ್ನು ಮಾರ್ಪಡಿಸಿಕೊಂಡಿರುವುದು ಮಾತ್ರ ಗೋಚರಿಸುತ್ತದೆ. ಅಂದಮಾತ್ರಕ್ಕೆ ಅದರ ಮೂಲ ಬದಲಾಗುವುದಿಲ್ಲ. 'ದ್ರಾವಿಡ ವರ್ಗಕ್ಕೆ ಸೇರಿದ ತೆಲುಗು, ಕನ್ನಡ, ತಮಿಳು ಮಾತನಾಡುತ್ತಿದ್ದ ಜನ ಪ್ರತಿಯೊಂದು ವಿಷಯದಲ್ಲಿಯೂ ವಿಶೇಷವಾಗಿ ಭಾಷೆಯಲ್ಲಿ ಬೇರೆ ಬೇರೆ ರೂಪಗಳನ್ನು ಬೆಳೆಸಿಕೊಳ್ಳುತ್ತಿದ್ದರು'[೧೮] ಎನ್ನುವುದನ್ನು ನೋಡಿದಾಗ ದ್ರಾವಿಡ ವರ್ಗದ ತಮಿಳು ಮೂಲಕ್ಕೇ ಸೇರಿದ ಕೊರಮರ ಭಾಷೆಯೂ ರೂಪಾಂತರ ಹೊಂದಿರುವುದು ಸಹಜವೇ ಆಗಿದೆ.

ಸಮಾಜ ಶಾಸ್ತ್ರಜ್ಞರು ಇಷ್ಟೆಲ್ಲ ಮಾಹಿತಿ ನೀಡಿದ್ದರೂ ತಮಿಳು ಮತ್ತು ಕೊರಮ ಭಾಷೆಯ ಶಬ್ದ ಮತ್ತು ಸಂಖ್ಯಾ ಪದಗಳ ಹೋಲಿಕೆಯಿಂದಲೂ ತಮಿಳಿನ ಒಂದು ರೂಪವೇ ಕೊರಮ ಭಾಷೆ ಎಂಬುದನ್ನು ನಾವು ಅರಿಯಬಹುದಾಗಿದೆ.

| ಕನ್ನಡ | ತಮಿಳು | ಕೊರಮ | ಕನ್ನಡ | ತಮಿಳು | ಕೊರಮ |
|---|---|---|---|---|---|
| ನೀರು | ತಣ್ಣೆ | ತನ್ನಿ | ಅನ್ನ | ಚೋರು | ಸೋರು |
| ಮುದ್ದೆ | ಕಳಿ | ಕಳಿ | ರಾಗಿ | ಕೆವರು | ಕೋರ್ಗು |

| | | | | | |
|---|---|---|---|---|---|
| ಮದುವೆ | ಕಲ್ಯಾಣ | ಕಣ್ಯಾಳ | ಹಾಲು | ಪಾಲು | ಪಾಲು |
| ಬಟ್ಟೆ | ತುನಿಯೂ | ತುಣಿವಾನು | ಮನೆ | ವೀಡು | ವೂಡು |
| ಬೆಂಕಿ | ನಿರುಪ್ಪು | ನೆರ್ಪ್ಪು | ದೀಪ | ವಿಳಕ್ಕು | ವಳಕು |
| ಹಾವು | ಪಾಂಬು | ಪಾಮು | ಅಕ್ಕಿ | ಅರಸಿ | ಎರಸಿ |
| ಗಿಡ | ಶೆಡಿ | ಸೆಡಿ | ಸಾರು | ಕೊಳಂಬು | ಕಟ್ಟು |

ಹೀಗೆ ಎಷ್ಟು ಬೇಕಾದರೂ ಶಬ್ದಗಳನ್ನು ಉದಾಹರಿಸಬಹುದು. ಇವೆಲ್ಲ ಒಂದೇ ಅರ್ಥ ಕೊಡುವುದಾದರೂ ಉಚ್ಚಾರಣೆಯಲ್ಲಿ ವ್ಯತ್ಯಾಸ ತೋರುತ್ತವೆ. ಇದರಂತೆಯೇ ಕೆಲವು ಪ್ರಾಣಿ, ಪಕ್ಷಿಗಳ, ಆಹಾರ, ಪದಾರ್ಥಗಳ ಕೆಲವು ವಸ್ತುಗಳ ಹೆಸರನ್ನು ಸೂಚಿಸುವ ಶಬ್ದಗಳನ್ನು ನೋಡಬಹುದು. ಸೋಟಿ-ಮೊರ, ಪಣಿ-ಕುಕ್ಕಿವ, ಇದಿರು-ಬಿದಿರು, ಎನುಮ್ಮು-ಎಮ್ಮೆ, ಪೆಯ್‌ತನ್ನಿ-ಸರಾಯಿ, ಕರಗು-ಹಗ್ಗ, ತಿತ್ತಿ-ಚೀಲ, ಪಗಾಲಿ-ಹೊಗೆಸೊಪ್ಪು, ತಳಾಕು-ಎಲೆ, ಪಾಕು-ಅಡಿಕೆ, ಸೆಟ್ಟಿ-ಮಡಿಕೆ, ಅಡುಪು-ಒಲೆ, ಪೆರಗು-ಮೊಸರು, ಲೇಗ್ಲ-ನಡೆಯೋ, ಮಕ್ರುದು-ಕೊಡಪಾನ, ಪೋತಿಗ್ರುದು-ಹೊದೆಯುವುದು, ಗಾಂಜಲು-ಬಳೆ, ಕ್ಯಾಕಿ-ಸೀರೆ, ಕಳು-ಗಂಗಳ, ತೀಪಾನ-ಬೆಲ್ಲ, ಪರಕಡ್ಡಿ-ಪೊರಕೆ, ತಲಕಾಯಿಬಟ್ರವು-ಕ್ಷೌರಿಕ, ಸಾಕ್ಲವು-ಅಗಸ, ಕುಂದೇಲಿ-ಮೂಲ, ಕವಾಲು-ನಾಯಿ, ಎನ್ನು-ಬೆನ್ನು, ಮೆಗರು-ಕೂದಲು, ಪೆಂತೆವೋರ್‍ಯ-ರಣಹದ್ದು, ಕಾನೋಗೋಯಿ-ಕೊಳವಂಕ, ಸಂಬಾರುಪೊತು-ಸಂಬಾರಕಾಗ, ಏಲಿಗ-ಕಾಗೆಸಿಳ್ಳ, ಸೆರಗ-ಸೆರ್‍ಲೆಹಕ್ಕಿ, ಕುರುಬಾಡು-ಕುರಿ, ಕೆರವಾಡು-ಕರಿಮೀನು, ಎಲ್ಲೂರ-ಲಗಡು, ಶಂಬೂರಾ-ಗಿಡಗ, ಒಂಗೊಕ್ಕು-ಬೆಳ್ಳಕ್ಕಿ, ಮಡೆಗುಡ್ನ-ಕುಲ್ದಗೊಕ್ರ, ನಣುವಯಾ-ಉಣ್ಣೆಗೊರವ, ಪೂಡ್ರಿ-ಪುರ್ಲೆಹಕ್ಕಿ, ಪಿಳಲಿ-ಸೋಬಾನದ ಹಕ್ಕಿ, ಪೆನ್ನೂರ-ಕೆಂಗಲ್‌ಬಾದ, ಕೆರವಾದಿ-ಗೌಜಿಗನಹಕ್ಕಿ, ಗೊದ್ದರನಕ್ಕಿ- ಅಕ್ಕಿ ಅವರ ಸೊಪ್ಪು, ಗುಯಿಕಾನು, ಪಂಡ್ರಿ-ಹಂದಿ, ಬೆರನಕ್ಕು-ನರಿ, ಗುಂತನಕ್ಕ-ಅಕ್ಕಿನರಿ, ಉಲಗಡ್ಡಿ-ಈರುಳ್ಳಿ, ಒಂಗೆಡ್ಡಿ-ಬೆಳ್ಳುಳ್ಳಿ, ಮಾವು-ಅಸಿಟ್ಟು, ಮಳಕಾಯಿ-ಮೆಣಸು, ಕರೆತೆಲಿಯ-ಕರೆಮೂತಿಹಕ್ಕಿ, ಕಾಡ-ಅಂಗನಕ್ಕಿ, ಸೀಕ್ರೆ ಕುಂಜು-ಬಾವಲಿ, ಮುರುವ-ಮುರಕಾಟಿ, ಇನ್ನು ಸಂಖ್ಯಾಸೂಚಕ ಪದಗಳಲ್ಲಿಯೂ ಇದೇ ರೀತಿ ಹೋಲಿಕೆಗಳನ್ನು ನೋಡಬಹುದು.

| **ಕನ್ನಡ** | **ತಮಿಳು** | **ಕೊರಮ** | **ಕನ್ನಡ** | **ತಮಿಳು** | **ಕೊರಮ** |
|---|---|---|---|---|---|
| ಒಂದು | ಒಂಡ್ರು | ಒಂಡು | ಎರಡು | ಇರಂಡು | ರಂಡು |
| ಮೂರು | ಮೂನ್ರ | ಮೂಡು | ನಾಲ್ಕು | ನಾಂಗು | ನಾಲು |
| ಐದು | ಐಂದು | ಅಂಜು | ಆರು | ಆರು | ಆರು |
| ಏಳು | ಏಲು | ಓೀಗ್ | ಎಂಟು | ಎಟ್ಟು | ಆಟ್ಟು |
| ಒಂಭತ್ತು | ಒಂಬದು | ಒಂಬಿದಿ | ಹತ್ತು | ಪತ್ತು | ಪತ್ತು |
| ಹನ್ನೊಂದು | ಪದಿಸೊಣ್ಣು | ಪನ್ನೊಂಡು | ಹನ್ನೆರಡು | ಪನಿರೆಂಡು | ಪನ್ನೆಂಡು |
| ಹದಿಮೂರು | ಪದಿಮೂನ್ರು | ಪದಿಮೂಡು | ಹದಿನಾಲ್ಕು | ಪದಿನಾಂಗು | ಪದಿನಾಲು |
| ಹದಿನೇಳು | ಪದಿನೇಳು | ಪದಿನೊಗು | ಹದಿನೆಂಟು | ಪದಿನೆಟ್ಟು | ಪದ್ನಟ್ಟು |

| | | | | | |
|---|---|---|---|---|---|
| ಹತ್ತೊಂಭತ್ತು | ಪತ್ತೊಂಬದು | ಪತ್ತೊಂಬಿದಿ | ಇಪ್ಪತ್ತು | ಇರುವದು | ಇರ್ದಿ |
| ಮೂವತ್ತು | ಮುಪ್ಪದು | ಮುಪ್ಪಿದಿ | ನಲವತ್ತು | ನಾಪದು | ನಾಪದಿ |
| ಐವತ್ತು | ಐಂಬದು | ಅಂಜರಕಾಪತ್ತು | ಅರವತ್ತು | ಅರವದು | ಅರ್‍ರಕಾಪತ್ತು |
| ಎಪ್ಪತ್ತು | ಎಳವದು | ಓಗ್ರಕಾಪತ್ತು | ಎಂಭತ್ತು | ಎಂಬದು | ಅಟ್ರಕಾಪತ್ತು |
| ತೊಂಭತ್ತು | ತೊನ್ನೂರು | ಒಂಬಿದ್ರಿಕಾಪತ್ತು | | ನೂರು | ನೂರು ನೂರು |

ಹೀಗೆ ಎರಡೂ ಭಾಷೆಗಳಲ್ಲಿ ಕಂಡು ಬರುವ ಸಾಮ್ಯವು ಯಾವುದೋ ಕಾಲದ ಒಂದೇ ಮೂಲವನ್ನು ಖಚಿತಪಡಿಸುತ್ತವೆ. ಆದ್ದರಿಂದ ಕೊರಮ ಭಾಷೆಗೆ ತಮಿಳು ಮೂಲವೇ ಹೊರತು ಬೇರೆಯಲ್ಲ ಎಂದು ಹೇಳಲಡ್ಡಿಯಿಲ್ಲ.

ಕೊರಮರು ಯಾವ ರಾಜ್ಯದಲ್ಲಿದ್ದರೂ ಅವರು ಯಾವ ಹೆಸರನ್ನು ಪಡೆದು ಕೊಂಡಿದ್ದರೂ, ಯಾವುದೇ ಉದ್ಯೋಗ ಮಾಡುತ್ತಿದ್ದರೂ ಮೊನ್ನೆ ಮೊನ್ನೆಯವರೆಗೆ ತಮ್ಮ ಮಾತೃಭಾಷೆಯನ್ನಾಡುತ್ತಿದ್ದರು. ಇತ್ತೀಚೆಗೆ ಅವರ ಮೇಲಾಗುತ್ತಿರುವ ನಾಗರಿಕತೆಯ ಪ್ರಭಾವ ಮತ್ತು ಸಾಮಾಜಿಕ ಬದಲಾವಣೆಯಿಂದಾಗಿ ಹಲವು ಜನ ತಮ್ಮ ಭಾಷೆಯನ್ನು ಮಾತನಾಡು ತ್ತಿಲ್ಲ. ತಮ್ಮ ಮುಂದಿನ ಜನಾಂಗಕ್ಕೂ ಅದನ್ನು ಕಲಿಸುತ್ತಿಲ್ಲ. ಕರ್ನಾಟಕದಲ್ಲಿ ಈಗ ಮಾತನಾಡುವವರಲ್ಲಿಯೇ ಭಾಷೆ ಒಂದೇ ರೀತಿಯಾಗಿ ವ್ಯವಹರಿಸುತ್ತಿಲ್ಲ. ಕನ್ನಡ ಒಂದೇ ಆದರೂ ಧಾರವಾಡ, ಮಂಗಳೂರು, ಮೈಸೂರುಗಳಲ್ಲಿ ಕಂಡುಬರುವ ಕನ್ನಡದ ಹಾಗೆ ಶಿವಮೊಗ್ಗ ಜಿಲ್ಲೆಯ ಕೊರಮರು ತಮ್ಮ ಭಾಷೆಯ ಕೆಲವು ಅಕ್ಷರಗಳನ್ನು ಎರಡು-ಮೂರು ಮಾತ್ರೆಯವರೆಗೂ ಹಿಗ್ಗಿಸಿ ದೀರ್ಘವಾಗಿ ಉಚ್ಚರಿಸುತ್ತಾರೆ. ಉದಾ:- "ಎಂದ್ಲಾss ಮಾಮಾ ಎಪ್ಪೋವಂದಲ್ಲಾ ನಲ್ಲಕಿಗರಂಗ್ಳಾss" (ಏನೋ ಮಾಮಾ ಯಾವಾಗ ಬಂದೆ ಎಲ್ಲಾ ಚೆನ್ನಾಗಿದ್ದಾರಾ) ಎಂದು ರಾಗ ಎಳೆದರೆ ತುಮಕೂರು ಜಿಲ್ಲೆಯವರು "ಎಂದ್ಲಮಾಮ ಎಪ್ಪೋವಂದ್ಲ ಎಲ್ಲ ನಲ್ಲಕಿಗರಂಗಳ್ಳ" ಎಂದು ಚುರುಕಾಗಿ ಮಾತನಾಡುತ್ತಾರೆ. ತಮಿನಲ್ಲಿ ವ್ಯಂಜನಾಂತ ಶಬ್ದಗಳು ಕೊರಮ ಭಾಷೆಯಲ್ಲಿ ತಮಿಳಿನಲ್ಲಿ "ಪುಲ್ಲಿಂಗವಾಚಕ ಶಬ್ದ 'ಒರುವನ್' (ಒಬ್ಬ) ಎಂದು ಬಳಕೆಯಾಗುತ್ತಿತ್ತು. ಸ್ತ್ರೀಯರಲ್ಲಿ 'ಒರುತ್ತಿ' (ಒಬ್ಬಳು) ಎಂದು ಬಳಕೆಯಲ್ಲಿ ಇತ್ತು ಪುಲ್ಲಿಂಗವಾಚಕ ಕ್ರಿಯಾಪದಗಳಲ್ಲಿ ನಕಾರ, ಸ್ತ್ರೀಲಿಂಗ ವಾಚಕ ಕ್ರಿಯಾಪದಗಳಲ್ಲಿ 'ಳ' ಕಾರ"[೧೯] ಈ ತಮಿಳಿನ ಓರುವನ್ ಮತ್ತು ಓರುತ್ತಿ ಎಂಬುದು ಕೊರಮರ ಭಾಷೆಯಲ್ಲಿ ಇಂದಿಗೂ ಒರ್ರು-ಒಬ್ಬ, ಒರ್ತಿ-ಒಬ್ಬಳು ಎಂದು ಪ್ರಯೋಗ ವಾಗುತ್ತಿವೆ. "ತಮಿಳಿನಲ್ಲಿ ನಾಲ್ಕು ಪ್ರಾದೇಶಿಕವಾದ ಉಪಭಾಷಾ ಕ್ಷೇತ್ರಗಳಿವೆ. ಅವುಗಳು; ೧. ದಕ್ಷಿಣ ಉಪಭಾಷೆ-ಮಧುರೈ, ರಾಮನಾಥಪುರಂ, ತಿರುನಲ್ವೇಲಿ ಮತ್ತು ಕನ್ಯಾಕುಮಾರಿ ಜಿಲ್ಲೆಗಳಲ್ಲಿ ಮಾತನಾಡುವಂಥದು. ೨. ಕೇಂದ್ರದ ಉಪಭಾಷೆ ತಂಜಾವೂರು,ತಿರುಚನಾಪಲ್ಲಿ ಮತ್ತು ದಕ್ಷಿಣ ಅರ್ಕಾಟ್‌ನಲ್ಲಿ ಮಾತನಾಡುವಂಥದು. ೩. ಉತ್ತರ ಅರ್ಕಾಟು, ಚೆಂಗಲ್ಪಟ್ಟು ಜಿಲ್ಲೆಗಳಲ್ಲಿ ಮಾತನಾಡುವಂಥದು ಮತ್ತು ೪. ಪಶ್ಚಿಮದ ಉಪಭಾಷೆ ಕೊಯಿಂಬತ್ತೂರು, ಪೆರಿಯಾರ್, ಸೇಲಂ, ಧರ್ಮಪುರಿ ಮತ್ತು ನೀಲಗಿರಿ ಜಿಲ್ಲೆ, ಪಾಂಡ್ಯನಾಡು, ಚೋಳನಾಡು,

ತೊಂಡೈನಾಡು ಮತ್ತು ಕೊಂಗನಾಡು ಎಂದು ಮಾಡಿದ್ದ ವಿಭಾಗಕ್ಕೆ ಸರಿ ಹೊಂದುತ್ತವೆ"[೨೦] ಕೊರಮರು ತಮ್ಮ ಭಾಷೆಯನ್ನು 'ಕೊಂಗ' ಭಾಷೆ ಎಂದು ಹೇಳುವುದನ್ನು ನೋಡಿದರೆ ಈ ಮೇಲೆ ಹೇಳಿದ ಕೊಂಗನಾಡಿಗೂ ಈ ಕೊಂಗ ಭಾಷೆಗೂ ಒಂದು ರೀತಿಯ ಸಂಬಂಧವಿರುವಂತೆ ತೋರುತ್ತದ. ಕೊರಮ ಭಾಷೆಯ ಪದಸಂಪತ್ತು, ವಾಕ್ಯ ವಿಧಾನ ಮತ್ತು ಪ್ರಯೋಗಗಳನ್ನು ಗುರುತಿಸುವ ದೃಷ್ಟಿಯಿಂದ ಕೊರಮ ಭಾಷೆಯ ಎರಡು ಕಥೆಗಳನ್ನು ಅವರು ಉಚ್ಚರಿಸುವ ರೀತಿಯಲ್ಲಿಯೇ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

**ಓತಿಕ್ಯಾತನ ಕಥೆ :**

ಒಂಡು ಓತಿಕ್ಯಾತು. ಆ ಓತಿಕ್ಯಾತ್ನುಕು ನಾಲೇರ ಪಂಡಮಾರು. ಆ ನಾಲೇರ ಪಂಡ್ಮಾರ್ ಯಾರ್‍ಯಾರ್ ಅಂಡಿಕೆ ಇಲಿ, ಒಂಗಕ್ಕು, ನಂಡು, ಪೂನ. ಒಂಡ್ನಾಳ್ ಓತಿಕ್ಯಾತು ಓೖಗೂರ್ ಗವುದ್ನೆ ಅಸಗಂಡೋಗಿ ಕಲ್‌ಕಟ್ಟೆಮೇನಿ ವುಕ್ಕಂಡ್ ಪಂಚಾಯ್ತೀ ಸೇಯ್ತಾ ಇಂದು ಪೇಟು ರುಮಾಲು ಸುತ್ಗೆಂಡು. ಅಪ್ಪದು ಇಲಿ ಸಾಸ್ಟೆತ್ತಂಡ ಬುಟ್ಟಿ ಸಮುದ್ಗಂಡು, ಜಡಿ ಒಟ್ಗಂಡು, ಸಣ್ಣನಾಮ್ತ ಇಟ್ಗಂಡು ಸಂತ್ಗೋಗ್ರೀಕ್ ವಂದ ಅಂಗ್ಯಾಸಿ. ಅಪ್ಪದು ಓತಿಕಾತು ಅಕ್ಕರ್‌ತ್ಗು 'ಎಂಕೊಕ್ರ' ಅಂಡು ಕೋಟು. ಅತ್ಗ ಅವ 'ನಿಮ್ಮ ಬಿರಕ ವಡಮಕ, ನಿಮ್ಮ ಬೀಟ ವಡಮಕು ಎಸರುಳ್ ಪ್ಯಾಟ್ಲೆ ಅಣ್ಣೆ ಅತ್ತೆರಕೊಕ್ರೆ. ನಿಮ್ಮ ವಡಮಕ ಸವರುಕ್ಕು' ಅಂಡ. ಅಪ್ಪದು ಆ ಓತಿಕಾತು 'ಇಂತ ವಾತ ಅಂಡಳೆ ನನ್ನ ಮರ್‍ಯಾದೆಲ್ಲ ಓಸೆ' ಅಂಡು ಅದ್ದಿಂದ್ ಓಯೋಟು ಪೂನಿಟೂಟ್ಗು. ಅಪ್ಪದು 'ತನ್ನಿ ಕಾಸಂಗೋ, ಅಣ್ಣೆ ಕಾಸಂಗೋ ವಡಮ ಕವ್ವರ್‍ಕು' ಅಂಡ ಪೂನಿ. 'ನಿಮ್ಮ ಅಣ್ಣೆ ಯಾರಕ್ಬೇಕು, ನಿಮ್ಮ ತನ್ನಿ ಯಾರಕ್ಬೇಕು ನಾಕ್ ಮಾಣ' ಅಂಡು. 'ಎಂತ್ಗ ಇತ್ನಿ ಬೇಜಾರಾಗಿಗರಯೇ' ಅಂಡು ಕೋಟ. 'ನಾನು ಓೖಗೋರ್ ಗೌದ್ನ ಉಪ್ಪಚಗಂಡು ಪಂಚಾಯ್ತಿಸೇಯ್ತಾ ಇಂದೆ. ಅವ ಸಂತಿಗೋಗ್ರಕವಂದ ನಮ್ಮ ಮರ್‍ಯಾದ ಕಳಜ ಇಲಿ' ಅಂಡು. ಆತ್ಗಪೂನಿ 'ಅವ ಅಂಗ್ರವಳೆ ಅವ ಕಂಡಗ್ರ ಟೂಟ್ಲೆಲ್ಲದೊಗರ ಅಡುಕ್ರವ ನನ್ ಪಾತು ನಿಮ್ಮ ಕಾಡ್ಗಣೆಕ್ ಬೇಕ ಕಣ್ಕಪ್ಪು' ಅಂಡ. ಪಂಡಕು ದೂರುಸೊಣ್ಣೆ ಅವು ಇನ್ನೊಂಡ್ ಪಂಡು ನೂಟ್ಗ್ ಓನು, ನಂಡು ಟೂಟ್ಗು.

ನಂಡು ಅಪ್ಪದು ತನ್ನಿಕುಡಂಗೋ ಉಂಗ್ರುಕ್ 'ಅಂಡ ನಿಮ್ಮ ತನ್ನಿ ಮಾಣ, ನಿಮ್ಮ ಊಟು ಮಾ' ಅಂಡು ಓತಿಕಾತು. ಆತ್ಗನಂಡು 'ಯಂತ್ಗ ಇತ್ನಿ ಬೇಜಾರಾಗಿಗರೆಯೇ' ಅಂಡ. ಇನಿನಗೆ ಇಲಿ ಸುಪ್ಪಾಣಿ ಇಂತಿಂತವಾತ ಅಂಡ. ಅಪ್ಪದು ಓತಿಕಾತು ಇನ್ನೊಂಡ ಪಂಡಟೂಟ್ಗ್‌ವೋನು ಒಂಗಕ್ಕು ಟೂಟ್ಗು. ಅವ ಮಣಿ ಓಡಂಗೋ ಉಕ್ಕಟು' ಅಂಡ. ಯಂತ್ಗ್ ಇತ್ನಿ ಬೇಜಾರು ಅಂಡು ಕೋಟ. ಆತ್ಗ 'ಇಲೆಸುಪ್ಪಾಣಿ ನನಕ್ಕ್ ಇಂತಹ ವಾತ್ಯ ಅಂಡ, ನಂಟ್ ಮರ್‍ಯಾದಿ ಆದ್ತ' ಅಂಡು. ಆತ್ಗ ಅವ 'ನನ್ನ ನಿಮ್ಮ ಮಾರುದ್ದ ಕುತ್ತಿಗಿಕ್ ಬೇಕ ರಂಡಾಣಿ ಸರಪಣಿ ಅಂಡು ಸೊಣ್ಣ, ಅಪ್ಪದು ಓತಿಕಾತು ಯಾರ್‌ಟೂಡು ಮಾಣ ಅಂಡು ಅವ್ವಿಂಡು ಏರೇ ಒಯೋಟು ಮತ್ತ ಯಾರ್ ಟೂಟ್ಗುವರಲಿಲ್ಲ.[೨೧]

## ಅನುವಾದ

ಒಂದು ಓತಿಕ್ಯಾತ. ಆ ಓತಿಕ್ಯಾತನಿಗೆ ನಾಲ್ಕು ಜನ ಹೆಂಡತಿಯರು. ಆ ನಾಲ್ಕು ಜನ ಹೆಂಡತಿಯರು ಯಾರ್‍ಯಾರು ಅಂದರೆ, ಇಲಿ, ಕೊಕ್ಕರೆ, ಏಡಿ, ಬೆಕ್ಕು. ಒಂದು ದಿನ ಓತಿಕ್ಯಾತ ಏಳೂರ ಗೌಡ್ರ ಕರಕಂಡೋಗಿ ಕಲ್ಲುಕಟ್ಟೆಯ ಮೇಲೆ ಕುತ್ಗಂಡು ಪಂಚಾಯ್ತಿ ಮಾಡ್ತಾ ಇದ್ದ ಪೇಟ, ರುಮಾಲು ಸುತ್ತಿಕೊಂಡು. ಆವಾಗ ಇಲಿ ಸಾಸ್ವೆಯಷ್ಟು ಬುಟ್ಟಿ ಹೊತ್ಗೊಂಡು, ಜಡೆ ಹಾಕ್ಕೊಂಡು, ಸಣ್ಣನಾಮ ಇಟ್ಗಂಡು ಸಂತೋಗೋಗ್ದೆಕೆ ಬಂದ್ಲು ಅಲ್ಲಾಸಿ. ಆವಾಗ ಓತಿಕಾತ ಪ್ರೀತಿಗೆ 'ಎಲ್ಗೋಗ್ತೀಯಾ' ಅಂತ ಕೇಳ್ದ. ಅದಕ್ಕೆ ಅವಳು 'ನಿನ್ನ ಬಿರಕ ಕೆಮೈಗೆ, ನಿನ್ನ ಬೀಟ್ ಮೈಗೆ ಎಸರುಳ್ ಪ್ಯಾಟೇಲಿ ಎಣ್ಣೆತರಕ್ ಹೋಗ್ತೀನಿ. ನಿನ್ನ ಮೈಗೆ ಸವರೋಕೆ'' ಅಂದ್ಲು. ಆವಾಗ ಆ ಓತಿಕಾಟ 'ಇಂಥ ಮಾತ ಅಂದ್ಲಲ್ಲ' ನನ್ನ ಮರ್ಯಾದೆಯೆಲ್ಲ ಓಯ್ತು ಅಂದ. ಎದ್ದೊಗ್ಬಿಟ್ಟ ಬೆಕ್ಕಿನ ಮನೆಗೆ. ಆವಾಗ ನೀರ ಕಾಯ್ಸಿರಿ, ಎಣ್ಣೆಕಾಸರಿ ಮೈ ತೊಳೆಯಲು ಅಂದ್ಲು ಬೆಕ್ಕು 'ನಿನ್ನ ಎಣ್ಣೆಯಾರಿಗೆ ಬೇಕು, ನಿನ್ನ ನೀರು ಯಾರಿಗೆ ಬೇಕು ನನಗೆ ಬೇಡ' ಅಂದ. 'ಯಾಕಿಷ್ಟು ಬೇಜಾರಾಗಿ ಇದ್ದೀಯಲ್ಲ' ಅಂತ ಕೇಳಿದ್ಲು.

'ನಾನು ಏಳೂರ ಗೌಡ್ರ ಕುಂಡ್ರಿಸಿಕೊಂಡು ಪಂಚಾಯ್ತಿ ಮಾಡ್ತಾ ಇದ್ದೆ. ಅವಳು ಸಂತೆಗೆ ಹೋಗಲು ಬಂದಳು. ನನ್ನ ಮರ್ಯಾದೆ ಕಳದ್ಲು ಇಲಿ' ಎಂದ. ಅದಕ್ಕೆ ಬೆಕ್ಕು 'ಅವಳು ಅನನೋಳೆ, ಅವಳು ಕಂಡೋರ ಮನೇಲಿ ಬಿಲ ತೆಗೆಯೋಳು ನನ್ನ ನೋಡಿ ನಿನ್ನ ಕಾಡಿಗೆ ಕಣ್ಣಿಗೆ ಬೇಕ ಕಣ್ಕಪ್ಪ' ಅಂದ್ಲು. ಹೆಂಡತಿಗೆ ದೂರು ಹೇಳಿ ಅವನು ಇನ್ನೊಬ್ಬು ಹೆಣ್ತಿ ಮನೆಗೆ ಹೋದ, ಏಡಿ ಮನೆಗೆ.

ಏಡಿ ಆಗ 'ನೀರು ಕೊಡ್ರಿ ಉಣ್ಣಕೆ' ಅಂದ್ಲು. ''ಇಂಗಿಂಗೆ ಇಲಿ ಸುಪ್ಪಾಣಿ ಇಂತಿಂತ ಮಾತ ಆಡಿದ್ಲು ನನಗೆ' ಅಂದ. ಅದಕ್ಕೆ ಏಡಿ ನನಗೆ 'ನಿನ್ನ ಗಿರ್ಜಿ ಕಾಲಿಗೆ ಬೇಕ ಸುತ್ತು ಮಿಂಚು' ಅಂತ ಕೇಳಿದ್ಲು, ಅಂದ್ಲು, ಆಗ ಓತಿಕಾತ ಇನ್ನೊಬ್ಬು ಹೆಂಡತಿಯ ಮನೆಗೆ ಹೋದ. ಕೊಕ್ಕರೆ ಮನೆಗೆ, ಅವು 'ಮಣಿ ಹಾಕ್ರಿ ಕುತಂಗಳಲಿ' ಅಂದ್ಲು. ಯಾಕಿಷ್ಟು ಬೇಜಾರು 'ಅಂತ ಅಂದ್ಲು'. ಅದಕ್ಕೆ 'ಇಲಿ ಸುಪ್ಪಾಣಿ ನನಗೆ ಇಂಥಮಾತ ಅಂದ್ಲು. ನನ್ನ ಮರ್ಯಾದೆ ಕಳದ್ಲು ಅಂದ. ಅದಕ್ಕೆ ಅವಳು ನನಗೆ ನಿನ್ನ ಮಾರುದ್ದ ಕುತ್ತಿಗೆಗೆ ಬೇಕ ಎರಡಾಣಿ ಸರಪಣಿ ಅಂದ್ಲು' ಅಂತ ಹೇಳಿದ್ಲು. ಆಗ ಓತಿಕಾತ ಯಾರ ಮನೇನು ಬೇಡಾ ಎಂದು ಅಲ್ಲಿಂದ ಬೇರೆ ಹೋಗ್ಬಿಟ್ಟ. ಅದು ಮತ್ತೆ ಯಾರ ಮನೆಗೂ ಬರಲಿಲ್ಲ.

## ಭಾಗ್ಯಲಕ್ಷ್ಮಿ ಕಥೆ

ಒಂಡೂರುಳ್ಳಿ ಒರ‍್ತುಗವುದು ಇಂದು. ಅವನ್ನೊಡುಳ್ಳಿ ವಿಜಯಲಕ್ಷ್ಮಿ ಇಂದ. ಒಂಡ್ನಾಳು ಅವ ಓಯೋಡರುಕ್ಕು ಪಾತ. ಎಂತ್ಗಂಡಿಕೆ ಈ ಊಟ ಗೋಡು ಗುದ್ದಡಿಕೋಟ್ಸ್ರು ಮಣಿ ಆತ್ಗಂಡೋಗಿ ತಲಿದಸ್ಕಿ ಓಟ್ಗಂಡು ಬೂದ್ಗಂಡು. ಈ ದರಿದ್ರನ್ ಟೂಟುಳ್ಳಿ ನಾನಿಕ್ರದಿಲ್ಲ ನಾನು ಓಯೋಡ್ರೆ ಅನಬರ‍್ಕು ದರಿದ್ರ ಲಕ್ಷ್ಮಿ ಊಟ್ಗೊರ‍್ರು. ಈ ಬೆರುಗೌಡು ಪಮುಡ್ರ್ರು ಗುದ್ದಡಿ ಕೋಟಗ್ರಮಣಿ, ಪಮುಡ್ರು ಮುಟ್ಟಕರಂಗ ಊಸ್ ಉಡರಂಗ ಮಣಿಮೇನಿ

ಉಕ್ಕುಗರಂಗ ಅಂತ ಮಣಿ ಒಟ್ಗಂಡು ಅಂಡು ಎಲ್ಲೋಟ. ಈ ಊಟುಳ್ಳಿ ಒರ್ತು ಬಿಡುವು ನಲ್ಲ ಶೆಡುಳ್ಳಿ-ಕಾಡುಳ್ಳಿ ಪೊಂಡು, ಪುಳ್ಳಿಲೆಲ್ಲ ಎಚ್ಗಂಡು ವಾಸ ಸೇಯ್ತಾ ಇಂದು. ಎನಗ ಶೆಯ್ತಾ ಇಂದು ಈಗ ಗೌಡ್ನಟೂಟುಳ್ಳಿ ಎಲ್ಲಾ ತಿಗಡಗಂಡೋಗಿ ಎಚ್ಗಂಡು ಒಂಡ್ ಮಾದ್ದು ಅಗರ ಸಾಮಾನೆಚ್ಗಂಡು, ಜೀವನ ಸೇಯ್ತಾ ಇಂದು ತಿಗುಡ-ಅಮಾನು ಆ ಮಾಟ್ಲವಂದು ತಿಗಡತನ ಸೇಂದ್ಗಂಡು, ಸಾಮಾನು ಆತ್ಗಂಡು ವಾಸಕ್ಲ್ ವಂದು. ಭಾಗ್ಯಲಕ್ಷ್ಮಿ ಎಲರಿಕ್ ಪಾತ. ತಿಗಡ್ನೂ ಎಲ್ರಕ್ ವಾಸ್ಲಕ್ ವಂದು. ಅಪ್ಪದು ಇವನ ವಡಮ್ಮ ಇವ ತಾಕ್ಷ. ಇದೆಂದು ಇನಗ ತಾಕ್ಸ್ ಪಮುದ್ರ ಮಾಟ್ಲೆ ಅಂಡು ನಿಂಡ್ರುಗಂಡು. ಆ ತಿಗುಡು ಪಾತು 'ಯಾರಮ್ಮ ನೀನು' ಅಂಡು ಕೋಟು 'ನಾನಯ್ಯ ಈ ಊಟು ಭಾಗಲಕ್ಷ್ಮಿ'. ಈ ಊಟ ಸಾವ್ಕಾರು ಗುದ್ದಡಿಕಿ ಪೋಟ್ಗಂಡುಕ್ಕುಗರಂತಾ ಮಣಿ ಆತ್ಗಂಡೋಗಿ ತಲದಸ್ಗಿ ಒಟ್ಗಂಡು ಬೂದ್ಗಂಡು, ಈ ಊಟ್ಗು ದರಿದ್ರ ವಂಚು. ನಾನು ಅಕ್ಷಿ ಎಲ್ಲೊಕ್ರೆ ಈ ದರಿದ್ರನ ಟೂಡುಳ್ಳಿ ಇಕ್ರಿದಿಲ್ಲಾ' ಅಂಡು ಒಗ್ರುಕ್ ಪಾತ. ಆ ಬಡವುನ್‌ಕು ಬಾರಿ ಸಂಕ್ಟೊಂಚು.

ಈ ಊಟುಳ್ಳಿ ಭಾಗ್ಯ ಇಕ್ರಿಗಂಟ್ಲೆ ನಾನು ವಂದೊಂದು ತಿಗಡ್ತನ್ತಸೇಂದ್ಗಂಡು ಆತ್ಗಂಡೋಗಿ ನಂಟ ಪಂಡು ಪುಳ್ಳಿಲ ವರ್ಗವರಿತಾ ಇಗ್ರೆ. ಇವ ಎಲ್ಲೋಯಟಿಕೆ ಈ ಊಟ್ಗ ದರಿದ್ರವರದು. ಅನಬರ್ಕು ನನಕು ಬಾರಿ ಕಸ್ಟತ್ಕ್ಟರದು ಅಂಡು ಅವು ಅಂಗೆ ಉಕ್ಕಂಡು. ನನಕೆಂತಾರ ಸೆಯ್ಯಟು, ಹಿಂಸೆ ಸೆಯ್ಯಾಟು, ಮತಾಟು ನಾನು ಅಕ್ಕಡಿಕಿ ಓಯೋಟಿಕ ಭಾಗ್ಯಲಕ್ಷ್ಮಿ ಅಕ್ಷಿಕೆ ಓಯೋಡರ. ದರಿದ್ರಲಕ್ಷ್ಮಿ ಬೇಲಿ ವಾಸ್ಲಕವಂದು ನಿಂಡ್ರಗಂಡಿರ. ಅಪ್ಪದು ಬಡವು ವಾಸ್ಲುಳ್ಳೆ ವುಕ್ಕಂಡೋಟು ವುಡ್ರಿದಂಕ. ವುಕ್ಕಂಡಿದಪದು ಗೌಡು ಬೇಲಿಕೋಗ್ರಕು ವಂದು. ವಂದವು 'ಯಾರ್ಲ ನೀನು ಯಂತ್ಗವಂದಿಗ್ರ' ಅಂಡು ಅವನ್ನ ಕೋಟು. ಆತ್ಗ ಅವು ಇನಿನಿಗ ಪಮುಡ್ರು ಗುದ್ದಡಿ ಕೋಟುಗ್ರಂತ ಮಣಿ ಆತ್ಗಂಡೋಗಿ ತಲಿದಸ್ಕಿ ವೋಟ್ಗಂಡು ಬೂದ್ಗಂಡಿದಯ್ಮಲ್ಲೆ ಅತ್ತುಭಾಗ್ಯಲಕ್ಷ್ಮಿ ನಿಂಟೂಟ್ಪಿ ಇಂದವ ಓಗ್ತಾ ಇಂದ. ನಿಂಟೂಟುಳ್ಳಿ ನಾನು ಕಾಲಾವದಿ ತಿಗಡ್ತನ ಸೇಂದ್ಗಂಡೋಗಿ ಪಂಡು ಪುಳ್ಳಿಲ ವರಗು ವರಿತಾ ಇಂದೆ. ಇಮಾನು ಒಂದು ತಿಗಡ್ತನ ಸೇಂದ್ಗಂಡೋಗ್ರಪ್ಪದು ಭಾಗ್ಯಲಕ್ಷ್ಮಿ ಬೇಲ್ಲಿಕೋಗ್ರಕ ವಂದ. ನೀನು ಯಾರಮ್ಮ ಎಂಕೊಕ್ರ ಅಂಡು ಕೋಟಿ ಆತ್ಗವ ಎಲ್ಲಾಸೊಣ್ಣಾ. ಆತ್ಗ ನಾನು ಇಂಗೆ ವಾಸ್ಲುಳ್ಳಿ ಭಾಗ್ಯಲಕ್ಷ್ಮಿ ಬೇಲ್ಕಿ ವೋಗುಲ್ಲಾರ ಮಾಟ್ಲಿ ವುಕ್ಕಂಡೋಟಿ. ಭಾಗ್ಯಲಕ್ಷ್ಮಿವುಳ್ಳೆ ಇಗ್ರ. ಇನ್‌ಮೇನಿ ನೀನು ಮಣಿ ತಲ್ಲಸ್ಕಿವೋಟ್ಗ ಮಾಣ ಅಂಡು. ಸಾವ್ಕಾರು ಆ ಬಡವನ್ನು ನೀನು ನಾಮಾರ್ಲಿ ಕಾಂಗುಲ್ಲಾರ ಮಾಟ್ಲೆ ತಿಗಡ್ತನತ್ಗ ವರಮಾಣ, ನಿನಕ್ ಎಂದು ಬೇಕೋ ವಂದು ನನ್ನ ಕೋರು, ನೀನು ನಲ್ಲ ಉಪಕಾರ್ತ ಸೇಂದಿರ ಎಲ್ಲಾ ತರ್ರೆ ಅಂಡು ಅಮಸ್ನು.

**ಕನ್ನಡಾನುವಾದ :**

ಒಂದ್ಊರಲ್ಲಿ ಒಬ್ಬ ಗೌಡ ಇದ್ದ. ಮನೇಲಿ ಭಾಗ್ಯಲಕ್ಷ್ಮಿ ಇದ್ದಳು. ಒಂದು ದಿನ ಅವಳು ಹೋಗ್ಲಿಕ್ಕೆ ನೋಡಿದ್ಲು. ಯಾಕೆ ಅಂದರೆ ಈ ಮನೆ ಗೌಡ ತಿಗದಡಿ ಹಾಕ್ಕೊಳ್ಳೋ

ಮಣಿ ತಂಗಡೋಗಿ ತಲೆಕೆಳಗೆ ಹಾಕ್ಕೊಂಡು ಮಲಗಿದ. ಈ ದರಿದ್ರನ ಮನೇಲಿ ನಾನಿರುವುದಿಲ್ಲ. ನಾನು ಹೋಗಿ ಬಿಡ್ತೀನಿ. ಆಮೇಲೆ ದರಿದ್ರಲಕ್ಷ್ಮಿ ಮನೆಗೆ ಬರ್ತಾಳೆ. ಈ ದೊಡ್ಡಗೌಡ ಹೆಂಗಸ್ರು ತಿಕದಡಿ ಹಾಕ್ಕೊಳ್ಳೋ ಮಣೆ, ಹೆಂಗಸರು ಮುಟ್ಟಾಗ್ತಾರೆ. ಊಸು ಬಿಡ್ತಾರೆ, ಮಣೆ ಮೇಲೆ ಕುಳಿತುಕೊಳ್ತಾರೆ ಅಂಥ ಮಣೆ ಹಾಕ್ಕೊಂಡ್ನಲ್ಲ' ಎಂದು ಹೊರಟ್ಳು. ಈ ಮನೇಲಿ ಒಬ್ಬ ಬಡವ ಒಳ್ಳೆ ಗಿಡದಲ್ಲಿ ಕಾಡಲ್ಲಿ ಹೆಂಡ್ತಿಮಕ್ಕಳ್ನೆಲ್ಲ ಇಟ್ಕೊಂಡು ಒಂದು ತಿಂಗಳು ಆಗುವಷ್ಟು ಸಾಮಾನಿಟ್ಗಂಡು ಜೀವನ ಮಾಡ್ತಾ ಇದ್ದ ಕಳ್ಳ. ಆ ದಿನ ಆ ಮನೆಗೆ ಬಂದು ಕಳ್ತನ ಮಾಡ್ಕೊಂಡು, ಸಾಮಾನು ತಗಂಡು ಹೋಗಕೆ ಬಾಗಿಲಿಗೆ ಬಂದ. ಆಗ ಇವನ ಮೈಗೆ ಇವಳು ತಾಗಿದಳು. ಇದೇನು ಹೀಗೆ ತಾಗಿದಂಗಾಯ್ತಲ್ಲ ಹೆಂಗಸರ ಹಾಗೆ' ಎಂದು ನಿಂತುಕೊಂಡ. ಆ ಕಳ್ಳ ನೋಡ್ದ. 'ಯಾರಮ್ಮ ನೀನು' ಅಂತ ಕೇಳ್ದ. 'ನಾನಯ್ಯ ಈ ಮನೆ ಭಾಗ್ಯಲಕ್ಷ್ಮಿ' ಈ ಮನೆ ಸಾಹ್ಕಾರ ತಿಗದಡಿಗೆ ಹಾಕ್ಕೊಂಡು ಕುಳಿತುಕೊಳ್ಳುವಂಥಾ ಮಣೆ ತಗಂಡೋಗಿ ತಲೆ ಅಡಿಗೆ ಹಾಕ್ಕೊಂಡ. ಈ ಮನೆಗೆ ದರಿದ್ರ ಬಂತು. ನಾನು ಹೊರಗಡೆಗೆ ಹೋಗ್ಬಿಡ್ತೀನಿ. ಈ ದರಿದ್ರನ ಮನೇಲಿ ಇರೋದಿಲ್ಲ' ಎಂದು ಹೋಗೋಕ್ ನೋಡಿದ್ಳು. ಆ ಬಡವನಿಗೆ ಭಾರಿ ಸಂಕಟ ಬಂತು.

ಈ ಮನೇಲಿ ಭಾಗ್ಯಲಕ್ಷ್ಮಿ ಇದ್ದುದ್ರಿಂದ ನಾನು ಬಂದ್ಬಂದು ಕಳ್ತನ ಮಾಡ್ಕೊಂಡು ತಗಂಡೋಗಿ ನನ್ನ ಹೆಂಡ್ತಿಮಕ್ಳ ಹೊಟ್ಟೆ ಹೊರಿತಾ ಇದ್ದೀನಿ. ಇವಳು ಹೊರಟು ಹೋಗ್ಬಿಟ್ಟರೆ ಈ ಮನೆಗೆ ದರಿದ್ರ ಬರುತ್ತೆ. ಆಮೇಲೆ ನನಗೆ ಭಾರಿ ಕಷ್ಟಕ್ಕೆ ಬರುತ್ತೆ' ಎಂದು ಅವನು ಅಲ್ಲಿಯೇ ಕುಳಿತುಕೊಂಡ. ನನಗೇನಾರೂ ಮಾಡ್ಲಿ ಹಿಂಸೆ ಮಾಡ್ಲಿ, ಹೊಡಿಲಿ, ನಾನು ಹೊರಕ್ಕೆ ಹೊಗ್ಬಿಟ್ಟರೆ ಭಾಗ್ಯಲಕ್ಷ್ಮಿ ಆಚೆಗೆ ಹೋಗ್ಬಿಡ್ತಾಳೆ. ದರಿದ್ರ ಲಕ್ಷ್ಮಿ ಹೊರಗಡೆ ಬಾಗಿಲಿಗೆ ಬಂದು ನಿಂತ್ಕೊಂಡಿದಾಳೆ. ಆಗ ಬಡವ ಬಾಗಿಲಲ್ಲಿ ಕೂತ್ಕೊಂಡ್ಬಿಟ್ಟ ಬೆಳಗಿನತನಕ. ಕೂತ್ಕೊಂಡಿದ್ದಾಗ ಗೌಡ ಹೊರಕ್ಕೋಗಕೆ ಬಂದ. ಬಂದವನು 'ಯಾರೋ ನೀನು, ಯಾಕೆ ಕುಂತ್ಗಂಡಿದ್ದೀಯಾ' ಅಂತ ಅವನ್ನ ಕೇಳ್ದ. ಅದಕ್ಕೆ ಅವನು ಇಂಗಿಂಗೆ ಹೆಂಗಸ್ರು ತಿಗದಡಿಕೆ ಹಾಕ್ಕೊಳ್ವಂತ ಮಣಿ ತಗಂಡೋಗಿ ತಲೆ ಅಡಿಗೆ ಹಾಕ್ಕೊಂಡು ಮಲಕ್ಕೊಂಡಿದ್ದೆಯಂತಲ್ಲ ಅದಕ್ಕೆ ಭಾಗ್ಯಲಕ್ಷ್ಮಿ ನಿನ್ನ ಮನೇಲಿದ್ದೋಳು ಹೋಗ್ತಾ ಇದ್ದಳು. ನಿನ್ನ ಮನೇಲಿ ನಾನು ಕಾಲಾವಧಿ ಕಳ್ತನ ಮಾಡ್ಕಂಡೋಗಿ ಹೆಂಡ್ತಿ ಮಕ್ಕಳ ಹೊಟ್ಟೆ ಹೊರಿತಾ ಇದ್ದೆ. ಈ ದಿನ ಬಂದು ಕಳ್ತನ ಮಾಡ್ಕೊಂಡು ಹೋಗುವಾಗ ಭಾಗ್ಯಲಕ್ಷ್ಮಿ ಹೊರಗೆ ಹೋಗಲು ಬಂದಳು. 'ನೀನು ಯಾರಮ್ಮ ಎಲ್ಲಿಗೋಗ್ತೀಯಾ' ಅಂತ ಕೇಳದ್ದೆ. ಅದಕ್ಕೆ ಅವಳು ಎಲ್ಲಾ ಹೇಳಿದ್ಳು. ಅದ್ಕೆ ನಾನು ಇಲ್ಲಿ ಬಾಗ್ಲಲ್ಲಿ ಭಾಗ್ಯಲಕ್ಷ್ಮಿ ಹೊರಕ್ಕೆ ಹೋಗದ ಹಾಗೆ ಕುತ್ಗಂಬಿಟ್ಟೆ, ಭಾಗ್ಯಲಕ್ಷ್ಮಿ ಒಳಗೆ ಇದ್ದಾಳೆ. ಇನ್ ಮೇಲೆ ನೀನು ಮಣಿತಗೊಂಡೋಗಿ ತಲ್ದಸಿಗೆ ಹಾಕೊಳ್ಬೇಡ' ಅಂದ. ಆಗ ಸಾಹ್ಕಾರ ಬಡವನಿಗೆ 'ನೀನು ರಾತ್ರೀಲಿ ಕಾಣದ ಹಾಗೆ ಕಳ್ಳತನಕ್ಕೆ ಬರಬೇಡಾ ನಿನಗೆ ಏನೋ ಬೇಕೋ ಬಂದು ನನ್ನ ಕೇಳು. ನೀನು ಒಳ್ಳೆ ಉಪಕಾರ ಮಾಡಿದ್ದೀಯಾ ಎಲ್ಲಾ ಕೊಡ್ತೀನಿ' ಎಂದು ಹೇಳಿ ಕಳಿಸ್ದ.

ಕುಳವಭಾಷೆ ಅಂದರೆ ಕೊರಮರ ಮೂಲ ಮಾತೃಭಾಷೆಯ ಸ್ವರೂಪ. ಈ ಎರಡು ಕಥೆಗಳ ನಿರೂಪಣೆಯಲ್ಲಿ ಕಂಡುಬರುತ್ತದೆ. ಇಲ್ಲಿನ ಪದಸಂಪತ್ತು ಸಮ್ಮಿಶ್ರ ಸ್ವರೂಪದ್ದು. ಹೆಚ್ಚಿನ ಶಬ್ದಗಳು ಮೂಲ ತಮಿಳಿಗೆ ಸಮೀಪವಾದವು. ಕ್ರಿಯಾಪದ, ವಿಶೇಷಣ, ಸರ್ವನಾಮಗಳು, ದ್ರಾವಿಡ ಭಾಷಾ ಸ್ವರೂಪವನ್ನು ಸೂಚಿಸುತ್ತವೆ. ವಾಕ್ಯ ರಚನೆಗೂ ಈ ಮಾತು ಅನ್ವಯಿಸುತ್ತದೆ. ಕೊರವರ ಈ ಭಾಷೆಯನ್ನು ಆಧುನಿಕ ಭಾಷಾ ಶಾಸ್ತ್ರದನ್ವಯ ವಿಶ್ಲೇಷಿಸಿ ವಿಶೇಷಾಂಶಗಳನ್ನು ಗುರುತಿಸುವುದೇ ಒಂದು ಪ್ರತ್ಯೇಕ ಸಂಶೋಧನೆಯಾಗುತ್ತದೆ. ಉಳಿದ ದ್ರಾವಿಡ ಭಾಷೆಗಳೊಡನೆ ತೌಲನಿಕ ಅಭ್ಯಾಸವು ಒಂದು ಆವಶ್ಯಕವಾದ ಕೆಲಸ. ಮುಂದಿನ ಸಂಶೋಧಕರು ಈ ಕಾರ್ಯವನ್ನು ಕೈಗೆತ್ತಿಕೊಳ್ಳಬಹುದು.

ಕೊರಮ ಬಡುಕಟ್ಟಿನ ಸಾಂಸ್ಕೃತಿಕ ಅಧ್ಯಯನದಲ್ಲಿ ಅವರ ಭಾಷಾಸ್ವರೂಪದ ಸ್ಥೂಲ ವಿವೇಚನೆಯನ್ನು ಮಾತ್ರ ಇಲ್ಲಿ ಮಾಡಲಾಗಿದೆ. ಈ ನಿಟ್ಟಿನಲ್ಲಿ ಇದೊಂದು ಪ್ರಯತ್ನ ಮಾತ್ರ. ಇದು ಪ್ರಾಥಮಿಕ ಪ್ರಯತ್ನವೂ ಹೌದು ಎಂಬುದನ್ನು ನಿವೇದಿಸುತ್ತೇನೆ.

**ಟಿಪ್ಪಣಿಗಳು**

೧. ಡಿ.ಎಲ್. ನರಸಿಂಹಾಚಾರ್ '*ಪೀಠಿಕೆಗಳು-ಲೇಖನಗಳು*' (ಡಿ.ವಿ.ಕೆ. ಪ್ರಕಾಶನ, ಮೈಸೂರು, ೧೯೭೧) ಪು.೧೦೨೯

೨. ಡಾ. ಡಿ.ಎನ್. ಶಂಕರಭಟ್ಟ '*ಭಾಷೆಯ ಬಗೆಗೆ ನೀವೇನು ಬಲ್ಲಿರಿ*' (ಭಾಷಾ ಪ್ರಕಾಶನ, ಪುಣೇ-೧೯೭೦) ಪು.೧೪

೩. ಡಾ. ಹಂ.ಪ. ನಾಗರಾಜಯ್ಯ; '*ದ್ರಾವಿಡ ಭಾಷಾ ವಿಜ್ಞಾನ*' ಪು.೧೧೩

೪. Souvenir Akila Karnataka Koramara Sangha, Bangalore ಪು.೧೨

೫. *ಜಾನಪದ ಸಾಹಿತ್ಯ ದರ್ಶನ* ಭಾಗ-೬ ಪು.೨೧೭

೬. Quoted E. Thurston Castes and Tribes in Southern India Vol.-III-K ಪು.೪೪೬

೭. Quoted E. Thurston Castes and Tribes in Southern India Vol.-III-K ಪು.೪೪೭

೮. Quoted E. Thurston Castes and Tribes in Southern India Vol.-III-K ಪು.೪೪೭

೯. Quoted E. Thurston Castes and Tribes in Southern India Vol.-III-K ಪು.೪೫೧

೧೦. Quoted E. Thurston Castes and Tribes in Southern India Vol.-III-K ಪು.೪೫೨

೧೧. Michael Kennedy Criminal Classes in the Bombay Presidency ಪು.೬೯

೧೨. Michael Kennedy Criminal Classes in the Bombay Presidency ಪು.೬೯

೧೩, Hirendra K. Rakshit Language, Culture on race in South India ಪು.೨೨೩

೧೪. E. Thurston Castes and Tribes in Southern India ಪು.೪೭೭

೧೫. R.E. Turston Vol.-II Castes and Tribes of Bombay ಪು.೨೬೭

೧೬. H.V. Nanjundaiah and Anantha Krishna lyer The Mysore Tribes and Castes Vol.- III ಪು.೫೮೪

೧೭. ದೊಡ್ಡಮನೆ ಹನುಮಯ್ಯ; ಹಿರೇಬಿದರೆ

೧೮. ಅನು: ಡಾ.ಕೆ.ಜಿ. ಶಾಸ್ತ್ರಿ. ಶ್ರೀ ಎಸ್.ಡಿ. ಪಾಟೀಲ '*ಕರ್ನಾಟಕ ಸಂಸ್ಕೃತಿ ಪರಂಪರೆ*'

೧೯. ಜಿ.ಎಸ್. ಕುಳ್ಳಿ; '*ಆಧುನಿಕ ಭಾಷಾ ವಿಜ್ಞಾನ*' ಪು. ೩೯

೨೦. ಸಂ. ಪ್ರೊ.ಎಲ್.ಎಸ್. ಶೇಷಗಿರಿರಾವ್ '*ಭಾರತೀಯ ಸಾಹಿತ್ಯ ಸಮೀಕ್ಷೆ*' ಭಾಗ-೧ ಕರ್ನಾಟಕ ಸಾಹಿತ್ಯ ಅಕಾಡೆಮಿ ಪು.೨೯

೨೧. ಹೇಳಿದವರು ಅರೆಕೇನಹಳ್ಳಿ ಪಾಪಯ್ಯನವರ ಪತ್ನಿ ಸಾವಿತ್ರಮ್ಮ ತಿಪಟೂರು ತಾಲ್ಲೂಕು ವರ್ಷ ೭೫


●

೬

# ದ್ರಾವಿಡ ಭಾಷೆಗಳ ಕಾಗುಣಿತ ವ್ಯವಸ್ಥೆ

ಡಾ. ಸಾಂಬಮೂರ್ತಿ

ಭಾಷೆಯ ಧ್ವನಿಗಳ ಚಾಕ್ಷುಶ ರೂಪವೇ ಲಿಪಿ. ಲಿಪಿರೂಪದಲ್ಲಿ ಭಾಷೆಯನ್ನು ಹಿಡಿದಿಡುವ ಕಲೆ ಬಹಳ ಹಿಂದಿನಿಂದಲೂ ಬಂದಿದೆ. ಮೊದಮೊದಲು ಚಿತ್ರಲಿಪಿಯೆಂಬುದು ಬಳಕೆಗೆ ಬಂದು ಆನಂತರ ಹಲವು ರೀತಿಗಳಲ್ಲಿ ಬೆಳೆದು ಬಂತು. ಭಾರತದಲ್ಲಿ ಸಿಂಧೂ, ಬ್ರಾಹ್ಮಿ, ಹಾಗೂ ಖರೋಷ್ಠಿ ಲಿಪಿಗಳು ಕಂಡುಬರುತ್ತವೆ. ದ್ರಾವಿಡ ಭಾಷೆಗಳ ಲಿಪಿಗಳಿಗೆ ಬ್ರಾಹ್ಮಿ ಲಿಪಿಯೇ ಮೂಲವಾಗಿದೆ.

ತಮಿಳು, ಕನ್ನಡ, ತೆಲುಗು, ಮಲಯಾಳಂ ಹಾಗೂ ತುಳು ಪಂಚದ್ರಾವಿಡ ಭಾಷೆಗಳು. ಇವುಗಳಲ್ಲಿ ತುಳು ಭಾಷೆಗೆ ಲಿಪಿಯಿಲ್ಲ.* ಅದು ಬೇರೆ ಭಾಷೆಯ ಲಿಪಿಯನ್ನು ಆಶ್ರಯಿಸಿದೆ. ತಮಿಳು-ಮಲಯಾಳಂ ಲಿಪಿಗಳಿಗೆ ಸಾಮ್ಯವಿದ್ದರೆ, ಕನ್ನಡ ತೆಲುಗು ಭಾಷೆಗಳ ಲಿಪಿಗಳಿಗೆ ಸಾಮ್ಯವಿದೆ. ಐತಿಹಾಸಿಕವಾಗಿ ಈ ಐದು ಭಾಷೆಗಳಲ್ಲಿ ತಮಿಳು ಹಳೆಯದಾದರೆ ನಂತರ ಕನ್ನಡ, ತೆಲುಗು ಹಾಗೂ ಮಲಯಾಳಂ ಬರುತ್ತವೆ. ಈ ಎಲ್ಲ ಭಾಷೆಗಳಲ್ಲೂ ಬರವಣಿಗೆ ಎಡದಿಂದ ಬಲಕ್ಕೆ ಸಾಗುತ್ತದೆ. ಈ ದ್ರಾವಿಡ ಭಾಷೆಗಳ ಲಿಪಿಗಳ ಬೆಳವಣಿಗೆ ಯಲ್ಲಿ ಹಲವಾರು ಮಾರ್ಪಾಟಾಗಿರುವುದು ಕಂಡುಬರುತ್ತದೆ. ಶಾಸನಗಳು ಇದನ್ನು ಸ್ಪಷ್ಟಪಡಿಸುತ್ತವೆ.

ಈ ಭಾಷೆಗಳಲ್ಲಿ ಸ್ವರಗಳು, ವ್ಯಂಜನಗಳೆಂದು, ವ್ಯಂಜನಗಳಲ್ಲಿ ವರ್ಗೀಯ, ಅವರ್ಗೀಯವೆಂದು ವಿಭಾಗಗಳುಂಟು. ಸ್ವರಗಳಲ್ಲಿ ಹ್ರಸ್ವ, ದೀರ್ಘ ಎಂಬ ವಿಭಾಗಳುಂಟು. ವ್ಯಂಜನಗಳನ್ನು ವಿವಿಧ ಸ್ವರಗಳೊಂದಿಗೆ ಬರೆಯುವುದಕ್ಕಾಗಿ ಪ್ರತ್ಯೇಕ ಸ್ವರಚಿಹ್ನೆಗಳು ಬಳಕೆಯಲ್ಲಿವೆ. ಸ್ವರಚಿಹ್ನೆಗಳನ್ನು ಸೇರಿಸಿ ಬರೆದ ಅಕ್ಷರಗಳೇ ಗುಣಿತಾಕ್ಷರಗಳಾಗುತ್ತವೆ. ಪ್ರತಿಯೊಂದು ಸ್ವರಕ್ಕೂ ಪ್ರತ್ಯೇಕ ಚಿಹ್ನೆಗಳನ್ನು ಕಾಣಬಹುದು. ಆದರೂ ಎಲ್ಲ ಭಾಷೆಗಳಲ್ಲೂ ಈ ಚಿಹ್ನೆಗಳ ಬಳಕೆ ಒಂದೇ ತೆರನಾಗಿಲ್ಲ. ಕನ್ನಡ, ತೆಲುಗು ಭಾಷೆಗಳಲ್ಲಿ ಈ ಚಿಹ್ನೆಗಳು

---

* ಮಲಯಾಳಂ ಲಿಪಿಯನ್ನೇ ಹೋಲುವ ಲಿಪಿಯಲ್ಲಿ ತುಳು ಕಾವ್ಯಗಳು ಲಭ್ಯವಾಗಿದ್ದು, ಆ ಲಿಪಿಯನ್ನೇ ತುಳು ಲಿಪಿ ಎಂದು ಈಗ ಹೇಳಲಾಗುತ್ತಿದೆ.

ಅಕ್ಷರದ ಮೇಲುಭಾಗ ಹಾಗೂ ಮುಂದೆ ಬಂದರೆ ತಮಿಳಿನಲ್ಲಿ ಅದು ಅಕ್ಷರಕ್ಕೆ ಮೊದಲು ಹಾಗೂ ನಂತರ ಬರುತ್ತದೆ. ಈ ಗುಣಿತ ಚಿಹ್ನೆಗಳಿಗೆ ಪ್ರತಿಯೊಂದಕ್ಕೂ ಒಂದೊಂದು ಹೆಸರುಂಟು. ಕನ್ನಡದಲ್ಲಿ ಇವುಗಳನ್ನು 'ಕಾಗುಣಿತ', 'ಬಳ್ಳಿ' ಎಂದು ಕರೆಯುತ್ತಾರೆ. ದ್ರಾವಿಡ ಭಾಷೆಗಳಲ್ಲಿ ಬಳಕೆಯಾಗುವ ಗುಣಿತ ಚಿಹ್ನೆಗಳನ್ನು ಪರಿಚಯಿಸುವುದೇ ಈ ಲೇಖನದ ಉದ್ದೇಶ.

**ಕನ್ನಡ**

ದ್ರಾವಿಡ ಭಾಷಾವರ್ಗದ ಪ್ರಮುಖ ಭಾಷೆಯಾದ ಕನ್ನಡವು ದಕ್ಷಿಣ ದ್ರಾವಿಡ ಭಾಷಾಗುಂಪಿಗೆ ಸೇರುತ್ತದೆ. ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವುಳ್ಳ ಭಾಷೆ ಕನ್ನಡ. ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಈ ಭಾಷೆ ಸಮೃದ್ಧವಾಗಿದೆ. ಇದು ಕರ್ನಾಟಕ ರಾಜ್ಯದ ಅಧಿಕೃತ ಭಾಷೆ. ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಶೇ. ೬೫.೬೯ರಷ್ಟು (೧೯೮೧ರ ಜನಗಣತಿ) ಜನರು ಕನ್ನಡವನ್ನು ಮಾತನಾಡುತ್ತಾರೆ. ಕನ್ನಡ ಮಾತನಾಡುವವರು ಕರ್ನಾಟಕದಲ್ಲಷ್ಟೇ ಅಲ್ಲದೆ ಇತರ ರಾಜ್ಯಗಳಲ್ಲೂ ಇದ್ದಾರೆ.

ಕನ್ನಡ ಲಿಪಿ ಅಶೋಕನ ಕಾಲದ ದಕ್ಷಿಣ ಬ್ರಾಹ್ಮಿಲಿಪಿಯಿಂದ ಪ್ರಾರಂಭವಾಯಿತೆನ್ನಲಾಗಿದೆ. ಆನಂತರ ಶಾತವಾಹನ, ಗಂಗ, ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳರ ಕಾಲದಲ್ಲಿ ಅನೇಕ ಬದಲಾವಣೆಗಳನ್ನು ಹೊಂದಿ ಇಂದಿನ ರೂಪ ಪಡೆದಿದೆ.

ಕನ್ನಡದಲ್ಲಿ ೪೩ ಧ್ವನಿಗಳಿದ್ದು ಇವುಗಳನ್ನು ಪ್ರತಿನಿಧಿಸಲು ೫೦ ಲಿಪಿಚಿಹ್ನೆಗಳಿವೆ. ವ್ಯಂಜನಗಳನ್ನು ಸ್ವರದೊಡನೆ ಬರೆಯಲು ಗುಣಿತಾಕ್ಷರ ಚಿಹ್ನೆಗಳಿವೆ. ಇವುಗಳಿಗೆ 'ಕಾಗುಣಿತ' ಅಥವಾ ಬಳ್ಳಿ ಎನ್ನುವರು. ಪ್ರತಿಯೊಂದು ಚಿಹ್ನೆಗೂ ಹೆಸರುಂಟು. ಅವು ಈ ರೀತಿ ಇವೆ. (+ ಚಿಹ್ನೆ ವ್ಯಂಜನವನ್ನು ಸೂಚಿಸುತ್ತದೆ.)

| ಸ್ವರ | ಚಿಹ್ನೆ | ಹೆಸರು | ಪ್ರಯೋಗ |
|---|---|---|---|
| ಅ | + | ತಲೆಕಟ್ಟು | ಕ |
| ಆ | +ಾ | ಇಳಿ | ಕಾ |
| ಇ | +ಿ | ಗುಡಿಸು | ಕಿ |
| ಈ | +ೀ | ಗುಡಿಸಿನ ದೀರ್ಘ | ಕೀ |
| ಉ | +ು | ಕೊಂಬು | ಕು |
| ಊ | +ೂ | ಕೊಂಬಿನ ದೀರ್ಘ ಅಥವಾ ಇಳಿ | ಕೂ |
| ಋ | +ೃ | ವಟ್ರಸುಳಿ | ಕೃ |
| ಎ | +ೆ | ಎತ್ವ | ಕೆ |
| ಏ | +ೇ | ಎತ್ವದ ದೀರ್ಘ | ಕೇ |

| | | | |
|---|---|---|---|
| ಐ | ೈ | ಐತ್ವ | ಕೈ |
| ಒ | ೊ | ಒತ್ವ | ಕೊ |
| ಓ | ೋ | ಒತ್ವದ ದೀರ್ಘ | ಕೋ |
| ಔ | ೌ | ಔತ್ವ | ಕೌ |

ಕನ್ನಡದಲ್ಲಿ ಗುಣಿತಾಕ್ಷರ ಚಿಹ್ನೆಗಳು ಅಕ್ಷರಕ್ಕೆ ಸೇರಿಕೊಂಡೇ ಬರುತ್ತವೆ. ಕೆಲವು ಸ್ವರಚಿಹ್ನೆಗಳು ಮೇಲುಭಾಗದಲ್ಲೂ (ಅ ಆ,ಇ ಈ, ಎ), ಮತ್ತು ಅಕ್ಷರದ ನಂತರ ಬರುತ್ತವೆ. ಒಂದು ಸ್ವರಕ್ಕೆ ಒಂದಕ್ಕಿಂತ ಹೆಚ್ಚು ಚಿಹ್ನೆಗಳು (ಉದಾ: ಏ ಸ್ವರಕ್ಕೆ ಾ ಹಾಗೂ ೀ ಚಿಹ್ನೆ ಬಂದರೆ ಓ ಸ್ವರಕ್ಕೆ ೋ ಎಂಬ ಮೂರು ಚಿಹ್ನೆಗಳು ಒಂದೇ ಸ್ವರ ಸೂಚನೆಗೆ ಬರುತ್ತದೆ) ಬಂದರೂ ಅವೆಲ್ಲವೂ ಸೇರಿದಾಗ ಮಾತ್ರ ಒಂದು ಸ್ವರ ಸೂಚಿಸಲು ಸಾಧ್ಯ.

ಎಲ್ಲ ವ್ಯಂಜನಗಳ ಜೊತೆಯೂ ಈ ಚಿಹ್ನೆಗಳು ಒಂದೇ ರೀತಿಯಲ್ಲಿ ಬರುವುದಿಲ್ಲ. ಮೂಲ ಅಕ್ಷರವೇ 'ಅ' ಸ್ವರದೊಡನೆ ಬರುತ್ತದೆ. 'ಅ' ಸ್ವರಸೂಚಿಸುವ ತಲೆಕಟ್ಟು ಇಲ್ಲದ ಅಕ್ಷರಗಳೂ ಇವೆ. ಆ, ಇ. ಈ, ಎ, ಏ ಸ್ವರಚಿಹ್ನೆಗಳನ್ನು ತಲೆಕಟ್ಟನ್ನು ಹೊಂದಿರುವ ಅಕ್ಷರಗಳಿಗೆ ತಲೆಕಟ್ಟಿನ ಜಾಗದಲ್ಲೂ (ಕ, ಕಾ, ಕಿ, ಕೀ, ಕೆ, ಕೇ), ತಲೆಕಟ್ಟು ಇಲ್ಲದ ಅಕ್ಷರಗಳಿಗೆ ಅಕ್ಷರದ ಕೊನೆಗೂ (ಬ ಬಾ ಬಿ ಬೀ ಬೆ ಬೇ) ಸೇರಿಸಲಾಗುವುದು. 'ಣ' ಅಕ್ಷರಕ್ಕೆ ಮಾತ್ರ ಆ ಇ ಈ ಎ ಏ ಚಿಹ್ನೆಗಳನ್ನು ಅಕ್ಷರದ ಮೇಲುಭಾಗಕ್ಕೆ (ಣಾ, ಣಿ, ಣೀ, ಣೆ ಣೇ) ಸೇರಿಸಲಾಗುವುದು. ಮ, ಯ ವ್ಯಂಜನಗಳಿಗೆ 'ಆ' ಚಿಹ್ನೆಯನ್ನು ಭಿನ್ನ ರೀತಿಯಲ್ಲಿ (ಮ-ಮಾ, ಯ-ಯಾ) ಸೇರಿಸಲಾಗುವುದು. ಅಲ್ಲದೆ ಈ ಎರಡು ಅಕ್ಷರಗಳ ದೀರ್ಘ ಇಕಾರಕ್ಕೂ ಎರಡು ರೀತಿಯ ಬರಹವಿದೆ (ಮ-ಮೀ ಮೀ ಯ-ಯೀ, ಯೀ). ಉ ಊ, ಒ ಓ ಚಿಹ್ನೆಗಳನ್ನು ಎಲ್ಲ ಅಕ್ಷರಗಳಿಗೂ ಅಕ್ಷರದ ಪಕ್ಕದಲ್ಲಿ ಸೇರಿಸಿದರೆ (ಕು, ಕೂ, ಕೊ, ಕೋ), 'ವ' ಅಕ್ಷರಕ್ಕೆ ಮಾತ್ರ ಭಿನ್ನ ರೀತಿಯಲ್ಲಿ (ವ-ವು, ವೂ, ವೊ, ವೋ) ಸೇರಿಸಲಾಗುವುದು 'ಹ' ಅಕ್ಷರಕ್ಕೆ ಅಕ್ಷರದ ಪಕ್ಕ (ಹು, ಹೂ, ಹೊ, ಹೋ) ಹಾಗೂ ಅಕ್ಷರದ ಕೆಳಗೆ (ಹು, ಹೂ, ಹೊ, ಹೋ) ಎರಡೂ ರೀತಿ ಬರೆಯುವ ರೂಢಿಯಿದೆ. ಕೊಂಬುಗಳಿರುವ ಅಕ್ಷರಗಳಾದ ಮ,ಯ ಗಳಿಗೆ 'ಔ' ಸ್ವರ ಚಿಹ್ನೆಯನ್ನು ಕೊಂಬಿಗೆ ಸೇರಿಸಲಾಗುವುದು (ಮೌ, ಯೌ ಇತ್ಯಾದಿ)

ಕನ್ನಡದಲ್ಲಿ ಎರಡು ದೀರ್ಘ ಚಿಹ್ನೆಗಳಿವೆ. ಅವುಗಳೆಂದರೆ ಾ (ಇಳಿ) ಮತ್ತು ೀ (ದೀರ್ಘ) ಇಳಿಯನ್ನು 'ಆ' ಸ್ವರ ಸೂಚಿಸಲು, ದೀರ್ಘವನ್ನು ಇನ್ನಿತರ ಸ್ವರಚಿಹ್ನೆಗಳೊಡನೆ ದೀರ್ಘ ಸೂಚಿಸಲು (ಕೀ ಕೇ ಕೋ) ಬಳಸಲಾಗುತ್ತದೆ.

ಶುದ್ಧ ವ್ಯಂಜನ ಸೂಚಿಸಲು '್' ಚಿಹ್ನೆ ಬಳಕೆಯಾಗುತ್ತದೆ. ಇದನ್ನು ವ್ಯಂಜನದ ತಲೆಕಟ್ಟಿನ ಭಾಗಕ್ಕೆ (ಕ್) ಅಥವಾ ಅಕ್ಷರದ ಕೊನೆಗೆ (ಬ್, ಮ್) ಸೇರಿಸಲಾಗುವುದು.

**ತಮಿಳು**

ತಮಿಳು ದ್ರಾವಿಡ ಭಾಷಾವರ್ಗದ ದಕ್ಷಿಣ ದ್ರಾವಿಡ ಭಾಷಾಗುಂಪಿಗೆ ಸೇರಿದ ಭಾಷೆ.

ಈ ಭಾಷೆಗೆ ಸುಮಾರು ಎರಡು ಸಾವಿರ ವರ್ಷಗಳ ದೀರ್ಘ ಇತಿಹಾಸವಿದೆ. ಇದು ದ್ರಾವಿಡ ಭಾಷೆಗಳಲ್ಲೇ ಪ್ರಾಚೀನ ಭಾಷೆ. ತಮಿಳು, ತಮಿಳುನಾಡು ರಾಜ್ಯದ ಪ್ರಧಾನ ಭಾಷೆ. ಕರ್ನಾಟಕದಲ್ಲೂ ತಮಿಳು ಮಾತನಾಡುವವರನ್ನು ಬೆಂಗಳೂರು, ಮೈಸೂರು, ಕೋಲಾರ ಹಾಗೂ ಕೊಡಗು ಜಿಲ್ಲೆಗಳಲ್ಲಿ ಕಾಣಬಹುದು.

ತಮಿಳಿನಲ್ಲಿ ೪೧ ಧ್ವನಿಗಳಿದ್ದು ಇದನ್ನು ಪ್ರತಿನಿಧಿಸಲು ೩೦ ಅಕ್ಷರಗಳಿವೆ. ಏಕೆಂದರೆ ತಮಿಳಿನಲ್ಲಿ ಒಂದೇ ಅಕ್ಷರವನ್ನು ಹಲವು ಧ್ವನಿಗಳನ್ನು ಸೂಚಿಸಲು ಬಳಸಲಾಗುತ್ತಿದೆ. ಈ ಭಾಷೆಯಲ್ಲಿ ಮೂರು ರೀತಿಯ ಲಿಪಿಪ್ರಭೇದಗಳು ಕಂಡುಬರುತ್ತವೆ. ಅವು 'ವಟ್ಟೆಳುತ್ತು' ಎಂಬ ಶಾಸನಗಳನ್ನು ಬರೆಯುವ ಲಿಪಿ, ಸಂಸ್ಕೃತದ ದಾಖಲೆಗಳನ್ನು ಬರೆಯಲು ಬಳಸುವ 'ಗ್ರಂಥಲಿಪಿ' ಹಾಗೂ ತಮಿಳಿನಲ್ಲಿ ಕೃತಿರಚನೆಗಾಗಿ ಬಳಸುವ ತಮಿಳು ಲಿಪಿ.

ತಮಿಳಿನ ಅಕ್ಷರಗಳಿಗೂ ಮಲಯಾಳಂ ಅಕ್ಷರಗಳಿಗೂ ಸಾಮ್ಯವಿದೆ. ಗುಣಿತಾಕ್ಷರಗಳಿಗೆ ಪ್ರತ್ಯೇಕವಾದ ಹೆಸರುಗಳು ಇಂದು ಬಳಕೆಯಲ್ಲಿಲ್ಲ. ಕೆಲವು ಮಾತ್ರ ಬಳಕೆಯಲ್ಲಿದೆ. ಪ್ರಮುಖವಾಗಿ ದೀರ್ಘವನ್ನು ಸೂಚಿಸುವ ಕಾಲ್ (ா) ಮತ್ತು ಒರುಟ್ಟೈ ಕೊಂಬು (ெ) ಮತ್ತು ಇರುಟ್ಟೈ ಕೊಂಬು (ே) ಎಂಬುದು ಬಳಕೆಯಲ್ಲಿದೆ. ಮೂಲ ವ್ಯಂಜನ 'ಅ' ಸ್ವರದೊಂದಿಗೆ ಇರುತ್ತದೆ. ಆನಂತರದ ಸ್ವರಗಳಿಗೆ ಪ್ರತ್ಯೇಕವಾದ ಚಿಹ್ನೆಗಳನ್ನು ಬಳಸಿ ಗುಣಿತಾಕ್ಷರಗಳನ್ನು ಬರೆಯಲಾಗುವುದು. ಈ ಚಿಹ್ನೆಗಳು ಅಕ್ಷರದ ಹಿಂದೆ ಮತ್ತು ಮುಂದೆ ಬರುವುವು.

| ಸ್ವರ | ಚಿಹ್ನೆ | ಹೆಸರು | ಪ್ರಯೋಗ | |
|---|---|---|---|---|
| ಅ | - | | | |
| ಆ | +ா | ಕಾಲ್ | கா | (ಕಾ) |
| ಇ | +ி | - | கி | (ಕಿ) |
| ಈ | +ீ | - | கீ | (ಕೀ) |
| ಉ | +ு | | பு | (ಪು) |
| | ு+ | | கு | (ಕು) |
| | +ு | | கு | (ಕು) |
| ಊ | +ூ | | பூ | (ಪೂ) |
| | +ூ | | கூ | (ಕೂ) |
| | | | க | (ಕೂ) |
| | ூ+ | | ரூ | (ರೂ) |
| ಎ | ெ+ | ಒರಟ್ಟೈ ಕೊಂಬು | கெ | (ಕೆ) |
| ಏ | ே+ | ಇರುಟ್ಟೈ ಗೊಂಬು | கே | (ಕೇ) |
| ಐ | ை+ | - | கை | (ಕೈ) |

| | | | |
|---|---|---|---|
| ಒ | ெ+ா | - | கொ (ಕೊ) |
| ಓ | ே+ா | - | கோ (ಕೋ) |
| ಔ | ெ+ள | - | கௌ (ಕೌ) |

ಎಲ್ಲ ಅಕ್ಷರಗಳಿಗೂ ಗುಣಿತಾಕ್ಷರ ಚಿಹ್ನೆಗಳು ಒಂದೇ ರೀತಿಯಲ್ಲಿ ಬರುತ್ತವೆ. ಕೆಲವು ಚಿಹ್ನೆಗಳು ಅಕ್ಷರದ ಮೇಲೆ (ಇ,ಈ), ಕೆಲವು ಅಕ್ಷರದ ಕೆಳಗೆ (ಉ.ಊ) ಮತ್ತೆ ಕೆಲವು ಅಕ್ಷರದ ಹಿಂದೆ ಮುಂದೆ ಬರುತ್ತವೆ. ಉ, ಊ ಸ್ವರಗಳಿಗೆ ಒಂದಕ್ಕಿಂತ ಹೆಚ್ಚು ಚಿಹ್ನೆಗಳಿದ್ದು ಅವು ವಿವಿಧ ಅಕ್ಷರಗಳಿಗೆ ವಿವಿಧ ರೀಯಾಗಿ ಬರುತ್ತವೆ. ಕೆಲವು ಸ್ವರಗಳಿಗೆ ಒಂದೇ ಚಿಹ್ನೆಯಿದ್ದರೆ, ಇನ್ನು ಕೆಲವು ಸ್ವರಗಳಿಗೆ ಒಂದಕ್ಕಿಂತ ಹೆಚ್ಚು ಚಿಹ್ನೆಗಳು ಸೇರಿ ಒಂದು ಸ್ವರ ಸೂಚಿಸುತ್ತವೆ.

### ತೆಲುಗು

ತೆಲುಗು ಮಧ್ಯದ್ರಾವಿಡ ಭಾಷಾಗುಂಪಿಗೆ ಸೇರಿದ ಭಾಷೆ. ತೆಲುಗು ಆಂಧ್ರ ಪ್ರದೇಶದ ಪ್ರಮುಖ ಭಾಷೆ. ಇದನ್ನು ಕರ್ನಾಟಕ-ಆಂಧ್ರದ ಗಡಿ ಜಿಲ್ಲೆಗಳಲ್ಲಿ ಹೆಚ್ಚಾಗಿಯೂ ಉಳಿದ ಕಡೆಗಳಲ್ಲಿ ಚದುರಿದಂತೆಯೂ ಮಾತನಾಡುವ ಜನರಿದ್ದಾರೆ. ಕೋಲಾರ ಜಿಲ್ಲೆಯಲ್ಲಿ ಇತರ ಎಲ್ಲ ಜಿಲ್ಲೆಗಳಿಗಿಂತ ಹೆಚ್ಚು ಸಂಖ್ಯೆಯಲ್ಲಿದ್ದಾರೆ.

ಕನ್ನಡದಂತೆಯೇ ತೆಲುಗು ಭಾಷೆಗೂ ಅನೇಕ ಶತಮಾನಗಳ ಇತಿಹಾಸವಿದೆ. ಸಾಹಿತ್ಯಿಕವಾಗಿಯೂ ಸಮೃದ್ಧವಾಗಿದೆ. ಕನ್ನಡದಂತೆಯೇ ತೆಲುಗಿನಲ್ಲೂ ಸಹ ಸ್ವರಗಳು, ವ್ಯಂಜನಗಳು ಇದ್ದು, ಲಿಪಿಯಲ್ಲೂ ಸಾಮ್ಯವಿದೆ. ವ್ಯಂಜನಗಳೊಡನೆ ಸ್ವರಗಳನ್ನು ಸೇರಿಸಿ ಬರೆಯಲು ಗುಣಿತಾಕ್ಷರ ಚಿಹ್ನೆಗಳೂ ಇವೆ. ಪ್ರತಿಯೊಂದನ್ನು ಹೆಸರಿದೆ. ಅವುಗಳನ್ನು ಕೆಳಗೆ ನೀಡಲಾಗಿದೆ.

| ಸ್ವರ | ಚಿಹ್ನೆ | ಹೆಸರು | ಪ್ರಯೋಗ | |
|---|---|---|---|---|
| ಅ | ✓ | ತಲಕಟ್ಟು | క గ ర | (ಕ ಗ ರ) |
| ಆ | ా | ದೀರ್ಘಮ್ | కా గా రా | (ಕಾ ಗಾ ರಾ) |
| ಇ | ి | ಗುಡಿ | కి గి రి | (ಕಿ ಗಿ ರಿ) |
| ಈ | ీ | ಗುಡಿದೀರ್ಘಮ್ | కీ గీ రీ | (ಕೀ ಗೀ ರೀ) |
| ಉ | ు | ಕೊಮ್ಮು | కు గు రు | (ಕು ಗು ರು) |
| ಊ | ూ | ಕೊಮ್ಮುದೀರ್ಘಮ್ | కూ గూ రూ | (ಕೂ ಗೂ ರೂ) |
| ಋ | ృ | ವಟ್ರಸುಡಿ | కృ గృ | (ಕೃ ಗೃ) |
| ಎ | ె | ಎತ್ವಮ್ | కె గె రె | (ಕೆ ಗೆ ರೆ) |
| ಏ | ే | ಏತ್ವಮ್ | కే గే రే | (ಕೇ ಗೇ ರೇ) |
| ಐ | ై | ಐತ್ವಮ್ | కై గై రై | (ಕೈ ಗೈ ರೈ) |
| ಒ | ొ | ಒತ್ವಮ್ | కొ గొ రొ | (ಕೊ ಗೊ ರೊ) |

ಓ ೋ ಓತ್ವಮ್ ಕ್ೋ ಗ್ೋ ರ್ೋ (ಕೋ ಗೋ ರೋ)
ಔ ೌ ಔತ್ವಮ್ ಕ್ೌ ಗ್ೌ ರ್ೌ (ಕೌ ಗೌ ರೌ)

ಹೀಗೆ ಗುಣಿತ ಚಿಹ್ನೆಗಳನ್ನು ಸೇರಿಸುವಾಗ ಕೆಲವು ಅಕ್ಷರಗಳಿಗೆ ಭಿನ್ನ ರೀತಿಯುಂಟು. ತಲೆಕಟ್ಟು ಎಲ್ಲ ಅಕ್ಷರಗಳಿಗೂ ಒಂದೇ ರೀತಿಯಲ್ಲುಂಟು. ತಲೆಕಟ್ಟು ಇಲ್ಲದ ಅಕ್ಷರಗಳೂ ಉಂಟು. 'ಆ' ಚಿಹ್ನೆಯನ್ನು ತಲೆಕಟ್ಟಿನ ಜಾಗದಲ್ಲಿ (ಕಾ ಗಾ) ಸೇರಿಸಲಾಗುವುದಾದರೂ ಕೆಲವು ಅಕ್ಷರಗಳಿಗೆ, ಕೊಂಬುಳ್ಳ ಅಕ್ಷರಗಳಿಗೆ (ಘ, ಮ, ಯ) ದೀರ್ಘವನ್ನು ಕೊಂಬಿನ ತುದಿಗೆ ಘಾ, ಮಾ, ಯಾ ಸೇರಿಸಲಾಗುವುದು.

'ಹ' ಅಕ್ಷರಕ್ಕೆ ಮತ್ತೊಂದು ರೀತಿ ಹ (ಹ), ಹ್ (ಹಾ) ಅಲ್ಲದೆ ಪ, ಫ, ಷ, ಸ ಅಕ್ಷರಗಳಿಗೆ ದೀರ್ಘ ಸೇರಿಸಿದಾಗ ಅಕ್ಷರಗಳನ್ನು ಈ ಮುಂದಿನಂತೆ ಬರೆಯಲಾಗುತ್ತದೆ. ಪಾ (ಪಾ), ಘಾ (ಫಾ) ಷಾ (ಷಾ) ಸಾ (ಸಾ). ಇದಕ್ಕೆ ಕಾರಣ, ಇದನ್ನು ವ ಮತ್ತು ನ ಅಕ್ಷರಗಳೊಡನೆ ಬೇರೆಯಾಗಿ ತೋರಿಸುವುದು. ಈ ಅಕ್ಷರಗಳಿಗೆ ಒ ಓ ಚಿಹ್ನೆಗಳೂ ಸಹಾ ಹೀಗೆಯೇ ಬರುತ್ತವೆ ಪೊ (ಪೊ) ಪೋ (ಪೋ) ಇತ್ಯಾದಿ

'ಇ' ಸ್ವರಚಿಹ್ನೆಯನ್ನು ತಲೆಕಟ್ಟು ಬರುವಲ್ಲಿ (ಕಿ ಗಿ) ಅಥವಾ ಅಕ್ಷರದ ಕೊನೆಗೆ (ಬಿ, ಲಿ) ಬರೆದರೆ ಈ ಸ್ವರಚಿಹ್ನೆ (ಕೀ, ಗೀ) ಮೇಲಕ್ಕೆ ಹೋಗುತ್ತದೆ. ಮ ಅಕ್ಷರಕ್ಕೆ ಇನ್ನೊಂದು ರೀತಿಯೂ ಉಂಟು. ಉದಾ. ಮ ಮಿ ಮೀ. ಯ ಅಕ್ಷರಕ್ಕೆ 'ಇ' ಸ್ವರಚಿಹ್ನೆಯಿಲ್ಲದೆ ತಲೆಕಟ್ಟಿಲ್ಲದ ಅಕ್ಷರ 'ಇ' ಸೂಚಿಸುತ್ತದೆ. ಉದಾ. ಯಿ. ಉ, ಊ ಸ್ವರದ ಚಿಹ್ನೆ ಕೊಂಬು ಮತ್ತು ಕೊಂಬುದೀರ್ಘವನ್ನು ಅಕ್ಷರದ ಪಕ್ಕಕ್ಕೆ ಸೇರಿಸಿದರೆ ಪ, ಫ, ವ ಅಕ್ಷರಗಳಿಗೆ ಕೆಳಕ್ಕೆ ಸೇರಿಸಲಾಗುವುದು. (ಪು, ಫು, ವು) ಜ ಅಕ್ಷರಕ್ಕೆ ಅಕ್ಷರದ ಒಳಗಿನ ಕೊಂಬಿಗೆ ಜು ಸೇರಿಸಲಾಗುವುದು. ಎ, ಏ, ಐ, ಒ, ಓ, ಔ ಸ್ವರ ಚಿಹ್ನೆಗಳು ತಲೆಕಟ್ಟು ಇರುವ ಜಾಗದಲ್ಲಿ ಅಥವಾ ಅಕ್ಷರದ ಕೊನೆಗೆ ಬಂದರೆ 'ಐ' ಗೆ ಅಕ್ಷರದ ಮೇಲೊಂದು ಕೆಳಗೊಂದು ಚಿಹ್ನೆ ಬರುತ್ತದೆ. (ಕೈ.)

ಕೆಲವು ಅಕ್ಷರಗಳಿಗೆ ಕೆಲವು ಚಿಹ್ನೆಗಳನ್ನು ವಿಭಿನ್ನವಾಗಿ ಸೇರಿಸಲಾಗುವುದು. ಉದಾ ಒ ಓ ಚಿಹ್ನೆಗಳನ್ನು ಮ, ಯ ಅಕ್ಷರಗಳಿಗೆ, ಮ (ಮ) ಮೊ (ಮೊ) ಮೋ (ಮೋ) ಯೊ (ಯೊ) ಯೋ (ಯೋ,) ಎಂದೂ 'ಹ' ಅಕ್ಷರಕ್ಕೆ ಹೊ (ಹೊ) ಹೋ (ಹೋ) ಸ್ವಲ್ಪ ಭಿನ್ನವಾಗಿ ಸೇರಿಸಲಾಗುವುದು. ಔ ಚಿಹ್ನೆಯನ್ನು ಕೊಂಬುಗಳಿರುವ ಅಕ್ಷರಕ್ಕೆ ಕೊಂಬಿಗೆ (ಮೌ, ಯೌ) ಇಲ್ಲವೇ ತಲೆಕಟ್ಟಿನ ಮೇಲೆ (ಕೌ, ಗೌ) ಹಾಗೂ ಅಕ್ಷರದ ಕೊನೆಗೆ (ಬೌ, ಫೌ) ಸೇರಿಸಲಾಗುವುದು.

ಶುದ್ಧ ವ್ಯಂಜನವನ್ನು ಬರೆಯಲು ಬಳಸುವ ಚಿಹ್ನೆ ್ ಇದನ್ನು ತಲೆಕಟ್ಟಿನ ಜಾಗದಲ್ಲಿ, (ಕ್) ಅಕ್ಷರದ ಕೊನೆಗೆ (ಬ್) ಸೇರಿಸಲಾಗುವುದು.

## ಮಲಯಾಳಂ

ಮಲಯಾಳಂ ಕೇರಳದ ಅಧಿಕೃತ ಭಾಷೆ. ಇದು ಸುಮಾರು ೧೧ನೇ ಶತಮಾನದಲ್ಲಿ

ತಮಿಳಿನಿಂದ ಕವಲೊಡೆದು ಸ್ವತಂತ್ರ ಭಾಷೆಯಾಯಿತು ಎಂದು ಹೇಳಲಾಗಿದೆ. ಈ ಭಾಷೆಯ ಲಿಪಿಬೆಳವಣಿಗೆಯನ್ನು ಕಂಡಾಗ ಮೂರು ರೀತಿಯ ಲಿಪಿಪ್ರಭೇದಗಳನ್ನು ಗುರುತಿಸಲಾಗುತ್ತದೆ. ವಟ್ಟೆಳುತ್ತು, ಕೋಳೆಳುತ್ತು ಮತ್ತು ಮಲೆಯನ್ಮ ಲಿಪಿಗಳ ಮೂಲಕ ಶಾಸನ, ತಾಮ್ರಪಟಗಳು ಹಾಗೂ ತಾಳೆಗರಿಗಳ ಮೇಲೆ ಬರೆಯಲಾಗುತ್ತಿತ್ತು ಎಂದು ಹೇಳಲಾಗಿದೆ.

ಮೂಲದ್ರಾವಿಡದ ಅನೇಕ ಲಕ್ಷಣಗಳನ್ನು ಉಳಿಸಿಕೊಂಡು ಬಂದಿರುವ ಮಲಯಾಳಂನಲ್ಲಿ ೩೯ ಧ್ವನಿಗಳಿದ್ದು ಅವುಗಳನ್ನು ಪ್ರತಿನಿಧಿಸಲು ೪೯ ಅಕ್ಷರಗಳಿವೆ. ವ್ಯಾಕರಣ ಹಾಗೂ ಧ್ವನಿರಚನೆಯನ್ನು ಗಮನಿಸಿದರೆ ಮಲಯಾಳಂ ತಮಿಳಿಗೆ ಹತ್ತಿರವಾಗಿದೆಯಾದರೂ ಸಂಸ್ಕೃತದ ಗಾಢವಾದ ಪ್ರಭಾವ ಎದ್ದುಕಾಣುತ್ತದೆ. ಮಲೆಯಾಳಂನ ಶಬ್ದಭಂಡಾರವನ್ನು ಗಮನಿಸಿದರೆ ಇದು ತಿಳಿಯುತ್ತದೆ. ಹೀಗೆ ಸಂಸ್ಕೃತದ ಶಬ್ದಗಳನ್ನು ದ್ರಾವಿಡ ವ್ಯಾಕರಣದ ಚೌಕಟ್ಟಿಗೆ ಅಳವಡಿಸಿ ರೂಪಿಸಲಾದ ಶೈಲಿ 'ಮಣಿಪ್ರವಾಳ' ಎಂದು ಹೆಸರು ಪಡೆದಿದೆ. ಇಂದಿನ ಮಲಯಾಳಂ ಲಿಪಿ ತಮಿಳಿನ ಗ್ರಂಥಲಿಪಿಯಿಂದಲೇ ವಿಕಾಸಗೊಂಡಿದೆ ಎಂದು ಹೇಳಲಾಗಿದೆ.

ಮಲಯಾಳಂ ಮಾತೃಭಾಷಿಕರು ಕೇರಳದಲ್ಲಿ ಅಧಿಕವಾಗಿದ್ದರೂ, ಕರ್ನಾಟಕದಲ್ಲಿ ಅದನ್ನು ಆಡುವವರ ಸಂಖ್ಯೆ ೫,೯೦,೭೦೯ (೧೯೮೧ರ ಜನಗಣತಿ). ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಹರಡಿರುವ ಇವರು ಬೆಂಗಳೂರು, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಕೊಡಗು, ಮೈಸೂರು ಮತ್ತು ಹಾಸನ ಜಿಲ್ಲೆಗಳಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ.

ಮಲೆಯಾಳಂ ಭಾಷೆಯಲ್ಲಿ ಗುಣಿತಾಕ್ಷರಗಳನ್ನು ಬರೆಯಲು ಸ್ವರಚಿಹ್ನೆಗಳನ್ನು ಬಳಸಲಾಗುತ್ತದೆ. ಇವುಗಳ ಅಕ್ಷರದ ಹಿಂದೆ ಮತ್ತು ಮುಂದೆ ಬರುತ್ತದೆ. ಹಾಗೂ ಇವುಗಳನ್ನು ಅಕ್ಷರದೊಡನೆ ಸೇರಿಸದೆ ಬಿಡಿಯಾಗಿಯೇ ಬರೆಯಲಾಗುತ್ತದೆ.

ಈ ಗುಣಿತಾಕ್ಷರ ಚಿಹ್ನೆಗಳಿಗೆ ಪ್ರತ್ಯೇಕ ಹೆಸರುಗಳು ಇಂದು ಬಳಕೆಯಲ್ಲಿಲ್ಲ. ಇವುಗಳನ್ನು 'ವಳ್ಳಿ' ಎಂದು ಹೇಳಲಾಗುತ್ತದೆ. ಈ ಚಿಹ್ನೆಗಳು ಕೆಳಗಿನಿಂದ ಮೇಲಕ್ಕೆ, ಮೇಲಿನಿಂದ ಕೆಳಕ್ಕೆ ನಡೆಯನ್ನು ಹೊಂದಿವೆ. ಮೂಲಾಕ್ಷರವೇ 'ಅ' ಸ್ವರದೊಡನೆ ಇರುತ್ತದೆ. ಈ ಚಿಹ್ನೆಗಳು ಎಲ್ಲ ವ್ಯಂಜನಗಳೊಡನೆಯೂ ಒಂದೇ ರೀತಿಯಾಗಿ ಬಳಕೆಯಾಗುತ್ತವೆ. ಈಗ ಈ ಸ್ವರಚಿಹ್ನೆಗಳನ್ನು ನೋಡೋಣ.

| ಸ್ವರ | ಚಿಹ್ನೆ | ಪ್ರಯೋಗ |
|---|---|---|
| ಆ | +ാ | കാ (ಕಾ) |
| ಇ | +ി | കി (ಕಿ) |
| ಈ | +ീ | കീ (ಕೀ) |
| ಉ | +ു | കു (ಕು) |
| ಊ | +ൂ | കൂ (ಕೂ) |
| ಎ | െ+ | കെ (ಕೆ) |

| | | |
|---|---|---|
| ഏ | േ+ | കേ (ಕೇ) |
| ഐ | ൈ+ | കൈ (ಕೈ) |
| ഒ | െ+ാ | കൊ (ಕೊ) |
| ഓ | േ+ാ | കോ (ಕೋ) |
| ഔ | +ൌ | കൌ (ಕೌ) |

ಉ, ಊ ಸ್ವರಗಳನ್ನು ಸೂಚಿಸಲು ಹಿಂದಿನ ಮಲಯಾಳಂ ಲಿಪಿಯಲ್ಲಿ ಐದೈದು ಚಿಹ್ನೆಗಳು ವಿವಿಧ ವ್ಯಂಜನಗಳೊಡನೆ ಬಳಕೆಯಲ್ಲಿದ್ದು ಅದು ಇಂದಿಗೂ ಮುಂದುವರೆದಿದೆ. ಅವುಗಳು

കു ( കു ) കൂ ( കൂ കൂ ), ഗു ( ഗു ), ഗൂ ( ഗൂ ), നു ( നു )
ಕು ಕೂ ಗು ಗೂ ನು

നൂ ( നൂ ) രു ( രു ) രൂ ( രൂ ) മു ( മു ) മൂ ( മൂ )
ನೂ ರು ರೂ ಮು ಮೂ

## ಉಪಸಂಹಾರ

ದ್ರಾವಿಡ ಭಾಷೆಗಳ ಅಕ್ಷರ ಹಾಗೂ ಗುಣಿತಾಕ್ಷರ ಚಿಹ್ನೆಗಳಲ್ಲಿ ಮಲಯಾಳಂ ಮತ್ತು ತಮಿಳು ಲಿಪಿಗಳಲ್ಲಿ ಬಹಳಷ್ಟು ಸಾಮ್ಯವಿದೆ. ಇ, ಈ, ಎ, ಏ, ಐ ಒ, ಓ ಚಿಹ್ನೆಗಳಲ್ಲಿ ಸಾಮ್ಯವಿದ್ದರೆ, ಆ ಉ, ಊ, ಔ ಚಿಹ್ನೆಗಳಲ್ಲಿ ಸ್ವಲ್ಪ ಭಿನ್ನತೆಯಿದೆ. ಎರಡೂ ಲಿಪಿಗಳಲ್ಲಿ ಚಿಹ್ನೆಗಳು ವ್ಯಂಜನಗಳ ಹಿಂದೆ ಹಾಗೂ ಮುಂದೆ ಬರುತ್ತವೆ. ಉ, ಊ ಸೂಚಿಸಲು ಎರಡೂ ಲಿಪಿಗಳಲ್ಲಿ ಒಂದಕ್ಕಿಂತ ಹೆಚ್ಚು ಚಿಹ್ನೆಗಳಿವೆ ಹಾಗೂ ಇವು ವಿವಿಧ ವ್ಯಂಜನಗಳೊಡನೆ ವಿವಿಧ ರೀತಿಯಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು. ಈ ರೀತಿಯ ಹಲವು ಚಿಹ್ನೆಗಳು ಕನ್ನಡ ಹಾಗೂ ತೆಲುಗು ಭಾಷೆಗಳಲ್ಲಿಲ್ಲ.

ಕನ್ನಡ ಹಾಗೂ ತೆಲುಗು ಭಾಷೆಗಳ ಲಿಪಿಗಳಲ್ಲಿ ಬಹಳಷ್ಟು ಸಾಮ್ಯವಿದ್ದು ಚಿಹ್ನೆಗಳಲ್ಲೂ ಸಾಮ್ಯವಿದೆ. ಒ ಓ ಚಿಹ್ನೆಗಳಲ್ಲಿ ಮಾತ್ರ ಭಿನ್ನತೆಯಿದೆ. ಚಿಹ್ನೆಗಳ ಹೆಸರುಗಳಲ್ಲೂ ಸಾಮ್ಯವಿದೆ. ದೀರ್ಘ ಸೂಚಿಸಲು ಕನ್ನಡದಲ್ಲಿರುವಂತೆಯೇ ತೆಲುಗಿನಲ್ಲೂ ಎರಡು ಚಿಹ್ನೆಗಳಿವೆ. ಶುದ್ಧವ್ಯಂಜನ ಸೂಚಿಸಲು ತಮಿಳು ಮಲಯಾಳಂಗಳಲ್ಲಿ ವ್ಯಂಜನದ ಮೇಲೆ ಒಂದು ಚುಕ್ಕೆಯಿದ್ದರೆ ಕನ್ನಡ ಹಾಗೂ ತೆಲುಗಿನಲ್ಲಿ ಪ್ರತ್ಯೇಕ ಚಿಹ್ನೆಯಿದೆ.

ದ್ರಾವಿಡ ಭಾಷೆಗಳಲ್ಲಿ ಸದ್ಯ ಬಳಕೆಯಲ್ಲಿರುವ ಗುಣಿತಾಕ್ಷರ ವ್ಯವಸ್ಥೆಯನ್ನು ಪರಿಚಯಿಸುವುದು ಈ ಲೇಖನದ ಉದ್ದೇಶ. ಗುಣಿತಾಕ್ಷರ ಚಿಹ್ನೆಗಳೂ ಕೂಡಾ ಹಲವಾರು ಬದಲಾವಣೆಗಳಿಗೆ ಒಳಗಾಗಿದೆ. ಕಾಲಕಾಲಕ್ಕೆ ಆದ ಬದಲಾವಣೆಗಳ ಬಗ್ಗೆಯೂ ಚರ್ಚಿಸಲು ಇನ್ನೂ ಅವಕಾಶವಿದೆ.

●

೭

# ದ್ರಾವಿಡ - ಡೆಕ್ಕನ್ - ದಕ್ಷಿಣ ಭಾರತ

ಡಾ. ಮಾಧವ ಪೆರಾಜೆ

ದ್ರಾವಿಡ ಆಧ್ಯಯನ ಎಂಬುದಾಗಿ ಅಧ್ಯಯನ ಕ್ಷೇತ್ರವೊಂದನ್ನು ಪರಿಕಲ್ಪಿಸುವಾಗ ಅದರ ಬಗೆಗೆ ಈವರೆಗೆ ನಡೆದಿರುವ ಮುಖ್ಯ ವಾಗ್ವಾದಗಳನ್ನು ಗಮನಿಸುವುದು ಅನಿವಾರ್ಯವಾಗುತ್ತದೆ. ಹಾಗಾದುದರಿಂದ ಪ್ರಸ್ತುತ ಲೇಖನದಲ್ಲಿ ಇಂತಹ ಅಧ್ಯಯನ ಕಕ್ಷೆಯ ಬಗೆಗೆ ತಾತ್ವಿಕವಾದ ಚರ್ಚೆಯೊಂದರ ವಿವರವನ್ನು ಮಂಡಿಸಬೇಕಾಗಿದೆ. ಈ ಚರ್ಚೆಯು ದ್ರಾವಿಡ ಅಧ್ಯಯನದಂತಹ ಅಧ್ಯಯನಗಳ ಮೂಲಪಾಠಗಳನ್ನು (basic concepts)· ಸಂಕಲಿಸುವುದರೊಂದಿಗೆ ಮುಂದಿನ ಚರ್ಚೆಗಳು ನಡೆಯಬೇಕಾದ ಗೊತ್ತು ಗುರಿಗಳನ್ನೂ ನಿರ್ಧರಿಸಬಲ್ಲುದು ಎಂದು ತಿಳಿಯಲಾಗಿದೆ. ಅಂತೆಯೇ ದ್ರಾವಿಡ (Dravidian) ಡೆಕ್ಕನ್ (Deccan) ದಕ್ಷಿಣ ಭಾರತ (South india) ಪರಿಕಲ್ಪನೆಗಳನ್ನು ಕ್ರಮಶಃ ಇಲ್ಲಿ ವಿವರಿಸಲಾಗಿದೆ.

ದ್ರಾವಿಡ **(Dravidion) :** ಒಂದು ಶತಮಾನಕ್ಕಿಂತಲೂ ಹಳೆಯದಾದ ಈ ಚರ್ಚೆಯಲ್ಲಿ ಭಾಷಾಶಾಸ್ತ್ರ, ಮಾನವಶಾಸ್ತ್ರ, ಮತ್ತು ಸಾಹಿತ್ಯ ಅಧ್ಯಯನಗಳ ನೆಲೆಯಿಂದ ಬೇರೆ ಬೇರೆ ಸಿದ್ಧಾಂತಗಳು ಮಂಡನೆಯಾಗಿವೆಯಾದರೂ ಈವರೆಗೆ ಸರ್ವಸಮ್ಮತವಾದ ನಿರ್ಣಯವೊಂದಕ್ಕೆ ಬರಲಾಗಿಲ್ಲವೆಂಬುದೇ ಗಮನಾರ್ಹವಾದ ಅಂಶವಾಗಿದೆ. ದ್ರಾವಿಡ ಪದದ ಬಗೆಗೆ ಭಾಷಾಶಾಸ್ತ್ರೀಯ ನೆಲೆಯಲ್ಲಿ ಸೇಡಿಯಾಪು ಅವರು ಆ ಬಗೆಗೆ ಶಬ್ದಶಾಸ್ತ್ರೀಯ ನೆಲೆಯಲ್ಲಿ ಒಂದು ತರ್ಕಬದ್ಧವಾದ ನಿರ್ಣಯಕ್ಕೆ ಬಂದಿದ್ದಾರೆ. ಇಂತಹ ಯಾವತ್ತೂ ಚರ್ಚೆಗಳಲ್ಲಿ ಅಂತಿಮ ನಿರ್ಣಯವೆಂಬುದೇ ಒಂದು ಸಮಸ್ಯೆ ಆಗುವುದರಿಂದ ಬಹುಮಟ್ಟಿಗೆ ಒಪ್ಪಿತವಾದ ನೆಲೆಗಟ್ಟೊಂದನ್ನು ತಾತ್ಕಾಲಿಕವೆಂಬಂತೆ ಒಪ್ಪಿಕೊಳ್ಳುವುದೇ ಮುಂದಿನ ಚರ್ಚೆಯ ಆರಂಭಕ್ಕೆ ನಾಂದಿಯಾಗಬಹುದು. ಹಾಗಾದುದರಿಂದ ದ್ರಾವಿಡ ಪರಿಕಲ್ಪನೆಯ ಚರ್ಚೆಯ ಸಾರಾಂಶಗಳನ್ನಷ್ಟೇ ಇಲ್ಲಿ ಮಂಡಿಸಿ ಮುಂದುವರಿಯ ಬಹುದಾಗಿದೆ.

ದ್ರಾವಿಡ ಎಂಬ ಪದವನ್ನು ವ್ಯಾಪಕವಾಗಿ 'ತಮಿಳ' ಪದಕ್ಕೆ ಪರ್ಯಾಯವಾಗಿ

ಬಳಸಲಾಗಿದೆ. ಹಾಗೆ ಪ್ರಯೋಗಿಸುವಾಗ ಅದರ ಮೂಲ ಮತ್ತು ಅರ್ಥಗಳಿಗೆ ಗಮನ ಕೊಡಲಾಗಿದೆ. ಸಂಸ್ಕೃತ ವಿದ್ವಾಂಸರ ಪ್ರಕಾರ ದ್ರಾವಿಡ ಎಂಬುದು ದಕ್ಷಿಣ ಭಾರತದ ಒಂದು ಭೂಭಾಗವೇ ಆಗಿದೆ. ಅದು ಭಾರತದ ಪೂರ್ವಕರಾವಳಿಯ ತಿರುಪತಿಯಿಂದ ಮೊದಲ್ಗೊಂಡು ಕನ್ಯಾಕುಮಾರಿ ಭೂಶಿರ ಮತ್ತು ಅರುವತ್ತು ಕಿ.ಮೀ.ವ್ಯಾಪ್ತಿಯ ಒಳನಾಡಿಗೆ ಸೇರಿದ ಭೂಪ್ರದೇಶವಾಗಿದೆ. ಹಾಗೆಯೇ ಕೆಲವೊಮ್ಮೆ ದ್ರಾವಿಡ ಪದವು ಹಗುರವಾಗಿ ಇಡೀ ದಕ್ಷಿಣ ಭಾರತವನ್ನೇ ಒಳಗೊಂಡಂತೆ ಪ್ರಯೋಗವಾಗಿರುವುದೂ ಇದೆ. ಪ್ರೊ.ವಿಲ್ಸನ್ ಮತ್ತು ಸರ್ ಮೋನಿಯಾರ್ ವಿಲಿಯಮ್ಸ್ ಅವರು 'ದ್ರಾವಿಡ' ಪದವು ಮೂರು ಅರ್ಥಗಳಲ್ಲಿ ಪ್ರಯೋಗವಾಗಿರುವುದಾಗಿ ವಿವರಿಸುತ್ತಾರೆ. (೧) ತಮಿಳು ಭಾಷೆ ರೂಢಿಯಲ್ಲಿರುವ ಭೂಪ್ರದೇಶ ಎಂಬ ಅರ್ಥ(೨) ತಮಿಳು ಭಾಷಿಗರು ಎನ್ನುವ ಅರ್ಥ(೩) ಪಂಚ ದ್ರಾವಿಡರು ಎಂದು ಕರೆಯಲಾಗುವ ಬ್ರಾಹ್ಮಣರು ಎನ್ನುವ ಅರ್ಥ. ಮೊದಲನೆಯ ಅರ್ಥದ ಬಗೆಗೆ ಪಾಶ್ಚಾತ್ಯ ಮತ್ತು ಪೌರ್ವಾತ್ಯ ವಿದ್ವಾಂಸರಲ್ಲಿ ಬಹುಮಟ್ಟಿಗೆ ಒಮ್ಮತವಿದೆ. (ಆದರೆ, ಸೇಡಿಯಾಪು ಅವರಿಗೆ ಇದರ ಬಗೆಗೆ ಭಿನ್ನಾಭಿಪ್ರಾಯಗಳಿವೆ). ಆದರೆ ಎರಡನೆಯ ಅಭಿಪ್ರಾಯದ ಬಗೆಗೆ, ಈ ಭೂಭಾಗದಲ್ಲಿ ನೆಲೆಸಿರುವ ಎಲ್ಲ ಜನಗಳಿಗೋ ಅಥವ ಕೇವಲ ನಿರ್ದಿಷ್ಟವಾದ ಸಮುದಾಯಕ್ಕೋ ಎಂಬುದರ ಬಗೆಗೆ ಅನುಮಾನಗಳಿವೆ. (ಏಕೆಂದರೆ ತಮಿಳು ಭಾಷಿಕರಾದ, ಬ್ರಾಹ್ಮಣೇತರರು ತಮ್ಮನ್ನು ತಮಿಳರೆಂದು ಕರೆದುಕೊಳ್ಳುವರಾದರೂ ದ್ರಾವಿಡರೆಂದು ಕರೆಯುವುದನ್ನು ಇಷ್ಟಪಡುವುದಿಲ್ಲ.) ಹಾಗೆಯೇ ತಮಿಳು ಬ್ರಾಹ್ಮಣರು ತಮ್ಮನ್ನು ಮಹಾಜನಗಳೆಂದು ಕರೆದುಕೊಳ್ಳುವರಾದರೂ ಭಾರತದ ಇತರ ಬ್ರಾಹ್ಮಣರಿಗೆ ಅವರು ದ್ರಾವಿಡರೆಂದೇ ಪರಿಚಿತರಾಗಿದ್ದಾರೆ. ಬಾಂಬೆ ಪ್ರೆಸಿಡೆನ್ಸಿಯಲ್ಲಿ ನಿವಾಸಿತರಾದ ತಮಿಳು ಬ್ರಾಹ್ಮಣ ರನ್ನು ದ್ರಾವಿಡರೆಂದು ಹೇಳಲಾಗುತ್ತದೆಯಲ್ಲದೆ ಅವರ ಹೆಸರಿನ ಮುಂದೆ ಅದು ಉಪನಾಮವಾಗಿ ಸೇರ್ಪಡೆಯೂ ಆಗುತ್ತದೆ. ಆದರೆ ತಮಿಳು ಭಾಷಿಗರಾದ ಬ್ರಾಹ್ಮಣೇತರರನ್ನು ಹಾಗೆ ಕರೆಯುವ ಪರಿಪಾಠವಿಲ್ಲ. ಅಂತೆಯೇ ಔತ್ತರೇಯ ತೆಲುಗು ಭಾಷಿಕರು ತಮಿಳು ಬ್ರಾಹ್ಮಣರನ್ನು 'ದ್ರಾವಿಡಲು' ಎಂದು. ತಮಿಳು ಬ್ರಾಹ್ಮಣರೇತರರನ್ನು ಶೂದ್ರಲು ಅಥವಾ 'ದಕ್ಷಿಣಾದಿ ಶೂದ್ರಲು' ಎಂದೂ ಕರೆಯಲಾಗುತ್ತದೆ. ಹಾಗೆಯೇ ಸೇಡಿಯಾಪು ವಿವರಿಸುವ ಪಂಚದ್ರಾವಿಡ, ಪಂಚಗೌಡ ಇತ್ಯಾದಿ ವಾಗ್ರೂಢಿಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಭಾರತೀಯ ಸಂಸ್ಕೃತಿ, ಭಾಷೆ, ಧರ್ಮ ಮತ್ತು ಇತಿಹಾಸದ ಮುಖ್ಯ ಪರಿಕಲ್ಪನೆಗಳಿಗೆಲ್ಲ ಇಂದಿನ ಆಧುನಿಕ ಭಾರತೀಯ ಪಂಡಿತರು, ಆಕ್ಷೇಪಿಸುವ ಆದರೂ ಘನವಿದ್ವಾಂಸರೆಂದು ಒಪ್ಪಿಕೊಳ್ಳುವ ಇಬ್ಬರು ಪಾಶ್ಚಾತ್ಯ ಪಂಡಿತರೇ ಈ ಪರಿಕಲ್ಪನೆಯನ್ನು ಅಧ್ಯಯನ ಕ್ಷೇತ್ರದಲ್ಲಿ ಪ್ರಚುರಗೊಳಿಸಿದವರಾಗಿದ್ದಾರೆ. ಮೊದಲನೆಯದಾಗಿ ಸಂಸ್ಕೃತದ ಮಹಾವಿದ್ವಾಂಸನಾದ ಫೆಡ್ರಿಕ್ ಮ್ಯಾಕ್ಸ್‌ಮುಲ್ಲರ್ ಮೊತ್ತ ಮೊದಲ ಬಾರಿಗೆ ಹತ್ತೊಂಬತ್ತನೆಯ ಶತಮಾನದ ದಶಕದಲ್ಲಿ ದ್ರಾವಿಡ ಭಾಷೆಗಳನ್ನು ಪ್ರತ್ಯೇಕ ಭಾಷಾವರ್ಗಕ್ಕೆ ಸೇರಿದ ಭಾಷೆಗಳೆಂದು

ವಿಭಾಗಿಸಿದ. ಅಲ್ಲಿಂದ ಮುಂದೆ 'ದ್ರಾವಿಡ' ಎಂಬುದು ಒಂದು ಭಾಷಿಕ ಪರಿಕಲ್ಪನೆಯಾಗಿ ಭಾರತದಲ್ಲಿ ನಿರ್ದಿಷ್ಟವಾದ ಒಂದು 'ಭಾಷಾಪರಿವಾರ' ಎಂಬರ್ಥದಲ್ಲಿ ಪ್ರಚರಣೆಗೊಂಡಿತು ಹಾಗೆಯೇ ೧೮೫೬ ರಲ್ಲಿ ಬಿಷಪ್ ರಾರ್ಬಟ್ ಕಾಲ್ಡ್‌ವೆಲ್ಲನ ಪಂಡಿತ ಕೃತಿಯಾದ 'A comparativa Grammar of Dravidian Or South indian family of Languages' ಎಂಬ ಗ್ರಂಥ ಪ್ರಕಟವಾಯಿತು. ಇದು ದ್ರಾವಿಡ ಭಾಷೆಗಳನ್ನು, ಭಾರತೀಯ ಮತ್ತು ಜಗತ್ತಿನ ಭಾಷಾಪಟದಲ್ಲಿ (language-mape) ಶಾಶ್ವತವಾಗಿ ನೆಲೆಗೊಳಿಸಿ ತಲ್ಲದೆ.ದ್ರಾವಿಡ ಭಾಷೆಗಳ ಗುಣಲಕ್ಷಣಗಳನ್ನು ವಿವರಿಸಿತು (ನೋಡಿ: S.K. Chatterji, Dravidian. ಪುಟ ೭) ಈ ಅಂಶವನ್ನು ಎರಡು ಕಾರಣಗಳಿಗೆ ಇಲ್ಲಿ ಉಲ್ಲೇಖಿಸಲಾಗಿದೆ. ಮೊದಲನೆಯದಾಗಿ ಸೇಡಿಯಾಪು ಅವರು ಹೇಳುವಂತೆ 'ದ್ರಾವಿಡ' ಭಾಷೆಗಳನ್ನು ಮೊದಲ ಬಾರಿಗೆ ವಿಭಾಗಿಸಿದವನು ಕಾಲ್ಡ್‌ವೆಲ್ಲ ಅಲ್ಲ, ಮ್ಯಾಕ್ಸ್‌ಮುಲ್ಲರ್ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಎರಡನೆಯದಾಗಿ ಕಾಲ್ಡ್‌ವೆಲ್ ಮಹಾಶಯನು ದ್ರಾವಿಡ ಪರಿಕಲ್ಪನೆಯ ಅಸ್ತಿಭಾರವನ್ನು ಗಟ್ಟಿಗೊಳಿಸಿದವನು ಎಂಬುದಾಗಿ ಒಂದು ಚಿಕ್ಕ ತಿದ್ದುಪಡಿಯೊಂದಿಗೆ ಅವರನ್ನು ಒಪ್ಪಬಹುದು ಎಂದೂ ಇದರಿಂದ ಮನವರಿಕೆಯಾಗುತ್ತದೆ. ಇನ್ನು ನಾವು ದ್ರಾವಿಡರ ಮೂಲದ ಬಗೆಗಿನ ಮುಖ್ಯವಾದ ಸಿದ್ಧಾಂತಗಳನ್ನು ಗಮನಿಸಬಹುದಾಗಿದೆ.

**ಮೂಲ ಆರ್ಯ ಸಿದ್ಧಾಂತ (The Early Aryan theory) :** ಈ ಸಿದ್ಧಾಂತವು ದ್ರಾವಿಡರು ದಕ್ಷಿಣ ಭಾರತದ ಮೂಲನಿವಾಸಿಗಳಲ್ಲವೆಂಬುದಾಗಿ ನಂಬುತ್ತದೆ. ಅಲ್ಲದೆ, ಈ ಸಿದ್ಧಾಂತದ ಪ್ರಕಾರ, ಇವರು ಭಾರತಕ್ಕೆ ಪ್ರಥಮವಾಗಿ ವಲಸೆ ಬಂದ ಆರ್ಯರ ಪೂರ್ವಜರು ಆಗಿರಬಹುದೆಂದು ತರ್ಕಿಸಲಾಗುತ್ತದೆ. ಸಾಮಾನ್ಯವಾಗಿ ಈ ಸಿದ್ಧಾಂತವನ್ನು ಯಾರೂ ಗಂಭೀರವಾಗಿ ಪರಿಗಣಿಸಿಲ್ಲ. ರಾಬರ್ಟ್ ಕಾಲ್ಡ್‌ವೆಲ್ಲನು ತನ್ನ ಗ್ರಂಥದಲ್ಲಿ ಇಂಡೋಯುರೋಪಿಯನ್ ಭಾಷಾಪರಿವಾರ ಮತ್ತು ತಮಿಳು ಭಾಷೆಗಳ ನಡುವೆ ಕೆಲವೊಂದು ಸಾದೃಶ್ಯತೆಯನ್ನು ಗುರುತಿಸುತ್ತಾನಾದರೂ ಆ ಎರಡು ಭಾಷಾಪರಿವಾರದ ವ್ಯಾಕರಣ ಮತ್ತು ಶಬ್ದಸಂಪತ್ತಿನಲ್ಲಿ ಗಮನಾರ್ಹವಾದ ವ್ಯತ್ಯಾಸವಿರುವುದನ್ನು ಗಮನಿಸುತ್ತಾನೆ. ಅದು ಮಾತ್ರವಲ್ಲದೆ ಪ್ರಾಗೈತಿಹಾಸಿಕವಾದ ಕೆಲವೊಂದು ಸಾಕ್ಷ್ಯಾಧಾರಗಳನ್ನು (ಮುಖ್ಯವಾಗಿ ಭಾರತ ಮತ್ತು ಇಂಗ್ಲೆಂಡಿನಲ್ಲಿ ದೊರೆತ ಬೃಹತ್ ಶಿಲಾಯುಗದ ಗೋರಿಗಳು) ಆರ್ಯರಿಗೆ ಆರೋಪಿಸುತ್ತ ಯೂರೋಪಿನ ಮೂಲನಿವಾಸಿಗಳಾದ ಸೆಲ್ಟ್ (calts) ಕುಲಜರಿಗೂ ಇವರಿಗೂ ಸಂಬಂಧ ಕಲ್ಪಿಸುವ ಚರ್ಚೆಯೂ ನಡೆದಿದೆ. ಆದರೆ ಸ್ವತಃ ತಮಿಳರೇ ಆರ್ಯರನ್ನು ಮ್ಲೇಂಛರೆಂದೂ ಪರಕೀಯರೆಂದೂ ತಿರಸ್ಕರಿಸುತ್ತಾರೆಂದ ಮೇಲೆ ಈ ಸಿದ್ಧಾಂತದ ಬಗೆಗೆ ವಿದ್ವತ್‌ವಲಯದಲ್ಲಿ ಅಂತಹ ಮಾನ್ಯತೆ ಪಡೆಯದಿರುವುದು ಸಹಜವೇ ಆದುದಾಗಿದೆ.

**ಲೆಮುರಿಯನ್ ಅಥವ ಸೆಲೆಟರ್ ಸಿದ್ಧಾಂತ (The Lemurian or S.lateris is theory)** ಈ ಸಿದ್ಧಾಂತದ ಪ್ರಕಾರ ದ್ರಾವಿಡರ ಮೂಲ ನೆಲೆಯು ಇದೀಗ ಹಿಂದೂ ಮಹಾಸಾಗರದಲ್ಲೆಲ್ಲೋ ಲಿಪ್ತವಾದ ಹಿಮಾಲಯ ಪರ್ವತಗಳು ರೂಪುಗೊಳ್ಳುವ ಮುನ್ನಿನ

ಲೆಮುರಿಯ (Lemuria) ಖಂಡವೆಂದು ಭಾವಿಸಲಾಗಿದೆ. ಈ ಭೂಖಂಡವು ಪಶ್ಚಿಮದಲ್ಲಿ ಮಡಗಾಸ್ಕರ್‌ನಿಂದ ಮೊದಲ್ಗೊಂಡು, ಪೂರ್ವಕ್ಕೆ ಮಲಯ್ ಅರ್ಶಿಪಲಗೋವರೆಗೆ (Archipelago) ಅಂದರೆ, ಒಂದು ಕಡೆಯಲ್ಲಿ ದಕ್ಷಿಣ ಭಾರತ ಮತ್ತು ಆಫ್ರಿಕಾ ಹಾಗೂ ಇನ್ನೊಂದು ಕಡೆಯಲ್ಲಿ ಆಸ್ಟ್ರೇಲಿಯಾವನ್ನು ಪರಸ್ಪರ ಸೇರಿಸುವ ಭೂಖಂಡವಾಗಿತ್ತು ಎಂದು ನಂಬಲಾಗಿದೆ. ಇದು ಹೌದಾದರೆ ದ್ರಾವಿಡರು ಈ ಭೂಖಂಡವು ಸಮುದ್ರದೊಳಗೆ ಲೀನ ವಾಗುವ ಮುನ್ನ ದಕ್ಷಿಣದ ಗುಂಟ ಭಾರತಕ್ಕೆ ಪ್ರವೇಶ ಮಾಡಿದ್ದಾರೆ ಎಂದೆನ್ನಬಹುದು ಇದಕ್ಕೆ ಅಧಾರವಾಗಿ ಈ ಕೆಳಗಿನತರ್ಕಗಳನ್ನು ಮಂಡಿಸಲಾಗಿದೆ.

**ಕುಲಶಾಸ್ತ್ರ (Ethnology):** ಭಾರತದಲ್ಲಿ ಜಾತಿ ಮತ್ತು ಬುಡಕಟ್ಟುಗಳ ವಿಧಿ-ನಿಷೇಧಗಳು (to tems) ಹಾಗೆಯೇ ದಕ್ಷಿಣ ಭಾರತದ ಕಲ್ಲನ್ ಜನ ವರ್ಗದ ಸಂಪ್ರದಾಯ ಆಸ್ಟ್ರೇಲಿಯಾದ ಕೆಲವೊಂದು ಬುಡಕಟ್ಟು ಜನಗಳನ್ನು ಹೊರತು ಪಡಿಸಿ ಇನ್ನೆಲ್ಲಿಯೂ ಕಂಡುಬರುವುದಿಲ್ಲ. ಆರ್.ವಾಲ್ಲೇಸ್ (R.Wallace) ಅವರು ಹೇಳುವಂತೆ, ಬೊರ್ನ್ಯೋ ಪ್ರದೇಶದ ಡ್ಯಾಕ್ ಜನಗಳ ಹಾಗೆ ಮರ ಹತ್ತುವ ಪರಿಪಾಠವೂ ಸಹ ಅನ್ನಾಮಲೆಯ್ ಪರ್ವತ ಪ್ರದೇಶದ ಕದರ್ ಬುಡಕಟ್ಟು ಜನಗಳಿಗೆ ಹೋಲಿಕೆಯಾಗುತ್ತದೆ. ಹಾಗೆಯೇ ನಮ್ಮ ಕದರ್ ಮತ್ತು ಮಲ-ವೇದನ್ ಜನಗಳಲ್ಲಿರುವಂತೆ, ಪೂರ್ಣಪ್ರಮಾಣದಲ್ಲಿ ಇಲ್ಲವೇ ಕೆಲವೇ ಮಟ್ಟಿಗೆ ಬಾಚಿ ಹಲ್ಲುಗಳನ್ನು ಕಡಿಯುವುದೂ ಸಹ ಮಲಯ್ ದ್ವೀಪಕಲ್ಪದ ಜಕೂನ್(Jakuns)ಬುಡಕಟ್ಟುಗಳಲ್ಲಿ ಕಂಡುಬರುತ್ತದೆ.

**ಶಬ್ದಶಾಸ್ತ್ರ (Philology):** ಬಿಷಪ್ ಕಾಲ್ಡ್‌ವೆಲ್ ಮತ್ತು ಹರ್ಬಟ್ ರಿಸ್ಲೆ ಅವರು ಗುರುತಿಸುವ ಭಾಷಿಕ ಹೋಲಿಕೆಗಳು ಮುಖ್ಯವಾಗಿ ಮುಂಡಾ ಭಾಷೆಯಲ್ಲಿರುವ ಸಂಖ್ಯಾ ವಾಚಿಗಳು ಮತ್ತು ಆಸ್ಟ್ರೇಲಿಯಾದ ಕೆಲವೊಂದು ಭಾಷೆಗಳ ಸಂಖ್ಯಾವಾಚಿಗಳ ನಡುವೆ ಕಾಣಿಸುವ ಸಾಮ್ಯತೆಗಳನ್ನು ಇಲ್ಲಿ ಪರಿಗಣಿಸಲಾಗಿದೆ. ಆದರೆ, ಮುಂಡಾ ಭಾಷೆಯು ಪ್ರತ್ಯೇಕ ವಾದ ದ್ರಾವಿಡ ಭಾಷೆಯಾಗಿರುತ್ತಾ ಸಂಖ್ಯಾವಾಚಿಗಳಲ್ಲಿ ಮಾತ್ರವೇ ಕಂಡುಬರುವ ಅಲ್ಪ ಪ್ರಮಾಣದ ಸಾದೃಶ್ಯತೆಯು ಎಷ್ಟರ ಮಟ್ಟಿಗೆ ನಂಬಲರ್ಹವಾದುದು ಎನ್ನುವ ಬಗೆಗೆ ಭಿನ್ನಾಭಿಪ್ರಾಯಗಳಿವೆ.

**ಭೂಗೋಳ ಶಾಸ್ತ್ರ (Geography):** ಇದನ್ನು ಪ್ರಾಸಂಗಿಕವಾಗಿ ಈಗಾಗಲೇ ಹೇಳಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಪ್ರಾಚೀನ ತಮಿಳ ಸಾಹಿತ್ಯದಲ್ಲಿ "ಭಯಂಕರವಾದ ಸಮುದ್ರವು ಪಹ್ರುಲಿ ನದಿಯನ್ನು ನಂಗಿನೊಣೆಯಿತು. ಅದು ಕುಮಾರಿನ್ ಶಿಖರ ಮತ್ತು ಅದರ ಪರ್ವತಾವಳಿಗಳನ್ನು ಮುಳುಗಿಸಿತು" ಎಂಬ ಉಲ್ಲೇಖವು ಕಂಡುಬರುತ್ತದೆ. ಪ್ರಾಚೀನ ತಮಿಳಿನಲ್ಲಿ ಕನ್ಯಾಕುಮಾರಿ ಭೂಶಿರವನ್ನು ನದಿ, ಪರ್ವತಾವಳಿ ಅಥವ ಸಮುದ್ರ ಎಂಬುದಾಗಿ ಕರೆಯಲಾಗಿದೆ. ಹಾಗೆಯೇ ಪ್ರಾಚೀನ ತಮಿಳರು ಜಾವಾ ದ್ವೀಪಕಲ್ಪಗಳು ಅಂದರೆ ಸಾಮಾನ್ಯಾರ್ಥದಲ್ಲಿ ಪೌರ್ವಾತ್ಯ ಆರ್ಶಿಪೆಲೆಗೋ ಪ್ರದೇಶಗಳ ನಿವಾಸಿತರಾಗಿದ್ದ ಆ ಕಾಲದಲ್ಲಿ ಅವರಿಗೆ ಆ ಎಲ್ಲ ಭೂಪ್ರದೇಶವು ಕನ್ಯಾಕುಮಾರಿ ಭೂಶಿರದ ಮುಂದುವರಿದ ಭಾಗವೆಂಬುದರ

ಪ್ರಚ್ಛನ್ನಯಿತ್ತು ಎಂಬುದಾಗಿ ಇದರಿಂದ ತಿಳಿದು ಬರುತ್ತದೆ. ಆದರೆ, ಇಲ್ಲಿ ಉಲ್ಲೇಖಿತ ವಾಗಿರುವ, ಸಮುದ್ರಾಳದಲ್ಲಿ ಮುಳುಗಿರುವ ಭೂಖಂಡದ ಬಗೆಗೆ ವಿದ್ವಾಂಸರು ಸಂಶಯ ವ್ಯಕ್ತಪಡಿಸಿದ್ದಾರೆ.

ಹಂಟರನ ಸಿದ್ಧಾಂತ: ಆರ್ಯೇತರ ಸಿದ್ಧಾಂತವನ್ನು ಪ್ರತಿಪಾದಿಸುವ ಡಬ್ಲ್ಯೂ.ಡಬ್ಲ್ಯೂ. ಹಂಟರನ ಪ್ರಕಾರ, ದ್ರಾವಿಡರಲ್ಲಿ ಕೊಲರಿಯನ್ನರು ಮತ್ತು ಮೂಲ ದ್ರಾವಿಡರು ಎಂದು ಎರಡು ಕವಲುಗಳಿವೆ. ಕೊಲರಿಯನ್ನರು ಈಶಾನ್ಯ ಭಾಗದಿಂದ ಭಾರತಕ್ಕೆ ವಲಸೆ ಬಂದವರಾಗಿ ವಿಂಧ್ಯಾಪ್ರಸ್ಥ ಭೂಮಿಯ ಉತ್ತರ ಭಾಗದಲ್ಲಿ ನೆಲೆನಿಂತರು. ಹೀಗೆ ನೆಲೆನಿಂತ ದ್ರಾವಿಡರು ಮುಂದೆ ವಿವಿಧ ಪ್ರದೇಶಗಳನ್ನು ವಶಪಡಿಸಿಕೊಳ್ಳುತ್ತಲೇ ತಮ್ಮ ತಮ್ಮಲ್ಲಿಯೇ ಒಳಪಂಗಡ ಗಳಾಗಿ ವಿಭಜನೆ ಗೊಂಡರು. ಅದರಲ್ಲಿ ದ್ರಾವಿಡರ ಮುಖ್ಯ ಪಂಗಡದಿಂದ ಬೇರ್ಪಟ್ಟು ವಾಯುವ್ಯಾಭಿಮುಖವಾಗಿ ಹೊರಟ ಒಂದು ಶಾಖೆಯು ಪಂಜಾಬಿನ ಮೂಲಕ ದಕ್ಷಿಣ ಭಾರತವನ್ನು ಪ್ರವೇಶಿಸಿತು. ಆದರೆ ಈ ಸಿದ್ಧಾಂತವನ್ನು ಸಮರ್ಥಿಸುವುದಕ್ಕೆ ಯಾವುದೇ ರೀತಿಯ ಶಬ್ದಶಾಸ್ತ್ರೀಯ ಸಮರ್ಥನೆಯಾಗಲೀ, ಮನುಕುಲಶಾಸ್ತ್ರೀಯ ಸಮರ್ಥನೆಯಾಗಲೀ ಇಲ್ಲ.

ಮಂಗೋಲಿಯನ್ ಸಿದ್ಧಾಂತ (**The Mongolian theory**): ಈ ಸಿದ್ಧಾಂತದ ಪ್ರಕಾರ ಮಧ್ಯ ಏಷ್ಯಾದ ಪ್ರಸ್ಥಭೂಮಿಯಲೆಲ್ಲೋ ಮಂಗೋಲಿಯನ್ನರ ಜತೆ ಜತೆಯಾಗಿಯೇ ವಾಸಿಸುತ್ತಿದ್ದ ದ್ರಾವಿಡರು, ಈಶಾನ್ಯದ ಕಡೆಯಿಂದ ಅಂದರೆ ಟಿಬೆಟ್ ಅಥವಾ ನೇಪಾಳದ ಕಡೆಯಿಂದ ಭಾರತವನ್ನು ಪ್ರವೇಶಿಸಿದರು. ಈ ಸಿದ್ಧಾಂತದ ಪ್ರಕಾರ ದ್ರಾವಿಡರು ಮಂಗೋಲಿ ಯನ್ ಮೂಲದವರಾಗಿದ್ದಾರೆ.

ಈಗ ವಿವರಿಸಿದ ಸಿದ್ಧಾಂತಗಳಿಗೆಲ್ಲ ಒಂದಲ್ಲೊಂದು ಪ್ರಬಲವಾದ ಆಕ್ಷೇಪವಿರುವುದಾಗಿ ಯಾವ ಸಿದ್ಧಾಂತವೂ ಅಪವಾದ ರಹಿತವಾಗಿಲ್ಲ. ಅಷ್ಟು ಮಾತ್ರವಲ್ಲ ಈ ಸಿದ್ಧಾಂತಗಳಲ್ಲೆಲ್ಲ ಆಧಾರಗಳಿಗಿಂತ ಊಹೆಯೇ ಅಧಿಕವಾಗಿರುವುದರಿಂದ ಅವುಗಳಿಗೆ ವಿದ್ವತ್ ಮನ್ನಣೆಯೂ ಸಿಕ್ಕಿಲ್ಲ. ಈ ಬಗೆಗಿನ ಚರ್ಚೆಯನ್ನು ಮುಗಿತಾಯಗೊಳಿಸುವುದಕ್ಕೆ ಮುನ್ನ ತತ್ಸಂಬಂಧಿಯಾದ ಇನ್ನೊಂದು ಸಿದ್ಧಾಂತದ ಬಗೆಗೆ ಸಂಕ್ಷಿಪ್ತವಾಗಿ ವಿವರಿಸಬಹುದು; ಪಶ್ಚಿಮ ಏಷ್ಯಾದ ಕಡೆಯಿಂದ ಸಮುದ್ರ ಮಾರ್ಗವಾಗಿ ಇಲ್ಲವೇ ಭೂಮಾರ್ಗವಾಗಿ ವಲಸೆ ಬಂದ ಅಸಂಖ್ಯಾಕ ಜನಸಮುದಾಯ ಪಶ್ಚಿಮ ಘಟ್ಟಗಳ ಮೂಲಕ ದಕ್ಷಿಣ ಭಾರತಕ್ಕೆ ಬಂದುವು. ಈ ಜನ ಸಮುದಾಯಗಳು ಲೆಮುರಿಯನ್ ಬುಡಕಟ್ಟುಗಳೊಂದಿಗೆ ಬೆರೆತು ಹೋದುವು. ಆಗ ಇನ್ನೂ ದಕ್ಷಿಣ ಭಾರತಕ್ಕೆ ಆರ್ಯರ ಆಗಮನವಾಗಿರಲಿಲ್ಲ. ಹೀಗೆ ವಲಸೆ ಬಂದ ಜನಸಮುದಾಯಗಳ ಮೂಲ ಆವಾಸ ಸ್ಥಾನವು ಅಸ್ಸಿರಿಯಾ ಅಥವಾ ಏಷ್ಯಾ ಮೈನರ್ ಆದುದಾಗಿ, ಅವರು ಭಾರತಕ್ಕೆ ವಲಸೆ ಬರುವ ಪೂರ್ವದಲ್ಲಿ ಪ್ರಾಚೀನ ಅಕಾಡಿಯನ್ನರು ಮತ್ತು ಇತರ ತುರೇನಿಯ ಜನಾಂಗಗಳ ಒಡನಾಡಿಗಳಾಗಿರಬೇಕು.

ಈಗಾಗಲೇ ಹೇಳಿರುವಂತೆ ಪ್ರಸ್ತುತ ಲೇಖನದಲ್ಲಿ ದ್ರಾವಿಡರ ಬಗೆಗೆ ಪ್ರತ್ಯೇಕವಾದ

ಚರ್ಚೆಯನ್ನು ಬೆಳೆಸುವ ಉದ್ದೇಶವಿಲ್ಲ. ಇಂತಹುದೇ ಇನ್ನೊಂದು ಚರ್ಚೆಯಾದ 'ಡೆಕ್ಕನ್'ಗೆ ಸಂಬಂಧಿಸಿದಂತೆ ಮುಂದುವರಿಯಲು ಇದು ಪ್ರವೇಶಿಕೆ ಮಾತ್ರ.

'ಡೆಕ್ಕನ್' ಅಥವಾ 'ದಖ್ಖಿನ್' ಎಂಬುದಾಗಿ ಇಂಗ್ಲಿಷ್ ಬರವಣಿಗೆಗಳಲ್ಲಿ ಪ್ರಚಲಿತ ವಿರುವ ಈ ಪದವು ಸಂಸ್ಕೃತದ ದಕ್ಷಿಣ (ಹಾಗೆಯೇ ಕನ್ನಡದಲ್ಲಿಯೂ ಪ್ರಯೋಗ ಗೊಳ್ಳುವ) ಪದದ ಅಪಭ್ರಂಶ ರೂಪವೇ ಆಗಿದೆ. ಹೀಗೆ 'ದಕ್ಷಿಣ' ವೆಂದು ನಿರ್ದೇಶನ ಗೊಳ್ಳುವ ಈ ಪದವು ಭಾರತದ ದಕ್ಷಿಣಕ್ಕೆ ಎಂದರೆ ನರ್ಮದೆಯ ದಕ್ಷಿಣಕ್ಕೆ ಇರುವ ಭೂಪ್ರದೇಶವನ್ನು ಒಳಗೊಳ್ಳುತ್ತದೆ. ಇನ್ನೂ ಖಚಿತವಾಗಿ ಹೇಳುವುದಾದರೆ ವಿಂಧ್ಯಾ ಪರ್ವತಾವಳಿಗಳ ದಕ್ಷಿಣದ ಭೂಪ್ರದೇಶವನ್ನು ಒಳಗೊಳ್ಳುವುದಾಗಿ ಅದು ಇಂಗ್ಲಿಷ್‌ನ 'peninsual' ಎಂಬುದಕ್ಕೆ ಪರ್ಯಾಯವಾದ ಪದವೆಂದು ವಾಗ್ರೂಢಿಯಾಗಿಯಾಗಿದೆ. ಆದರೆ 'ಡೆಕ್ಕನ್' ಪದವು ಈಗ ಹೇಳಿದಂತೆ 'ದಕ್ಷಿಣ' ಪದದಿಂದ ನಿಷ್ಪತ್ತಿಯಾದುದಾಗಿರದೆ 'ದಂಡಕ' ಪದದಿಂದ (ರಾಮಾಯಣದಲ್ಲಿ ಉಲ್ಲೇಖಿತವಾದ ದಂಡಕಾರಣ್ಯ) ನಿಷ್ಪತ್ತಿ ಯಾದುದೆಂದೂ ಹೇಳಲಾಗು ತ್ತಿದೆ. ಆದರೆ ಡೆಕ್ಕನ್ ಪದವು ಪ್ರಾಕೃತದ ದಖ್ಖಿನ್, ಆ ಮೂಲಕ ಸಂಸ್ಕೃತದ 'ದಕ್ಷಿಣ' ಪದದಿಂದ ಜನ್ಯವಾದ ಪದವೇ ಆಗಿದೆ, ಎಂಬುದರ ಬಗೆಗೆ ವಿದ್ವಾಂಸರಲ್ಲಿ ಒಂದು ಒಮ್ಮತವಿದೆ. ಅಥವ 'ಡೆಕ್ಕನ್' ಪದವನ್ನು 'ದಂಡಕ' ದಿಂದ ಸಾಧಿಸುವುದಕ್ಕಿಂತಲೂ 'ದಕ್ಷಿಣ' ಪದದಿಂದ ಸಾಧಿಸುವುದಕ್ಕೆ ಹೆಚ್ಚಿನ ಆಧಾರಗಳಿವೆ.

**ವೈದಿಕ ಗ್ರಂಥಗಳು ಮತ್ತು ಪುರಾಣ ಪರಂಪರೆಯಲ್ಲಿ ದಕ್ಷಿಣ ಅಥವ ಡೆಕ್ಕನ್:** ಪ್ರಾಚೀನ ಸಂಸ್ಕೃತ ಆಕರಗಳಲ್ಲಿ ದಕ್ಷಿಣ (ಡೆಕ್ಕನ್) ಭೂಭಾಗವನ್ನು ವಿಶಾಲಾರ್ಥದಲ್ಲಿ ನಿರ್ವಚಿಸ ಲಾಗಿದೆ. 'ಋಗ್ವೇದ' ದಲ್ಲಿ ' ದಕ್ಷಿಣಾಪಥ'ದ ಉಲ್ಲೇಖವಿದೆ. ಋಗ್ವೇದದಲ್ಲಿ ಇದಕ್ಕೆ ಸಂಬಂಧಿಸಿದಂತೆ ಯಾವುದೇ ಬುಡಕಟ್ಟುಗಳ, ನದಿಗಳ ಪರ್ವತಗಳ ಉಲ್ಲೇಖಗಳು ಉಕ್ತವಾಗಿಲ್ಲವಾದುದರಿಂದ, ಗೋದಾವರಿ ಮತ್ತು ಕೃಷ್ಣಾನದಿ ನಡುವಿನ ಭೂಭಾಗವನ್ನು ಸರ್ವ ಸಾಧಾರಣವಾಗಿ ಅಲ್ಲಿ ನಿರ್ದೇಶಿಸಿರುವಂತೆ ಕಂಡುಬರುತ್ತದೆ. 'ಕಾಠಕ ಸಂಹಿತೆ'ಯಲ್ಲಿ 'ಕುಂತಿ' ಜನಗಳ ಬಗೆಗೆ ಉಲ್ಲೇಖವಿದ್ದು ಇವರನ್ನು ಚಂಬಲ್ ಕಣಿವೆಯ ಜನಸಮುದಾಯ ವೆಂದು ಭಾವಿಸಲಾಗಿದೆ. ಆದರೆ, ಇದಕ್ಕಿಂತ ಮುಂದೆ ದಕ್ಷಿಣಕ್ಕೆ ಹರಡಿರುವ ಭೂಭಾಗದ ಬಗೆಗೆ ಅಲ್ಲಿ ವಿವರಗಳು ಕಂಡುಬರುವುದಿಲ್ಲ. ಶತಪಥ ಬ್ರಾಹ್ಮಣದಲ್ಲಿ ರೇವ ಅಥವ ನರ್ಮದೆಯ ಉಲ್ಲೇಖವಿರುವುದಾಗಿ ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. (ಉದಾ: 'ರೇವೋತ್ತರಸ್ ಚಕ್ರ ಪಥವ ಸ್ಥಪತಿ' ಮೊದಲಾದ ಪ್ರಯೋಗಗಳು) ಆದರೆ, ರೇವೋತ್ತರ ಎಂಬಲ್ಲಿ 'ರೇವದಿಂದ ಉತ್ತರದ ನಿವಾಸಿ' ಎಂಬರ್ಥ ವಿದೆಯೇ ಎನ್ನುವ ಬಗೆಗೆ ಅನುಮಾನಗಳು ಇವೆ. 'ಗೋದಾವರಿ, ಕೃಷ್ಣ, ಮೊದಲಾದ ನದಿಗಳು ಅವುಗಳ ಉಪನದಿಗಳ ಬಗೆಗೆ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಉಲ್ಲೇಖವಿಲ್ಲ.

ಕೌಷೀತಕಿ ಉಪನಿಷತ್ತಿನಲ್ಲಿ ಪ್ರಯೋಗವಾಗಿರುವ 'ದಕ್ಷಿಣಾಪಥಃ' ಎಂಬುದು ವಿಂಧ್ಯಾ ವನ್ನು ನಿರ್ದೇಶಿಸುವುದೇ ಹೊರತು ಅದು ಸಹ್ಯಾದ್ರಿ ಅಥವಾ ಮಹೇಂದ್ರ ಪರ್ವತವನ್ನು

ನಿರ್ದೇಶಿಸುವುದಲ್ಲ. ಪುರಾಣಗಳಲ್ಲಿ ವಿಂಧ್ಯವು ನಿಷಾಧರ ವಾಸಸ್ಥಾನವೆಂಬುದಾಗಿ ಮತ್ತೆ ಮತ್ತೆ ಉಲ್ಲೇಖವಾಗಿದೆ. ಶತಪಥ ಬ್ರಾಹ್ಮಣದಲ್ಲಿ ಇವರನ್ನು ನೈಷಧರೆಂದು ಹೇಳಲಾಗಿದೆ. ಆದರೆ ಈಗಣ ಮಹಾರಾಷ್ಟ್ರ ಅಥವ ಆಂಧ್ರ ಭೂಪ್ರದೇಶದ ಜನಗಳ ಬಗೆಗೆ ಇಲ್ಲಿ ಯಾವುದೇ ಉಲ್ಲೇಖವಿಲ್ಲ. ಆದರೆ ಐತರೇಯ ಬ್ರಾಹ್ಮಣದಲ್ಲಿ ಪ್ರಸ್ತಾಪಿಸಲ್ಪಟ್ಟ 'ದಕ್ಷಿಣ ದಿಶಾ' ಎಂಬುದು ಕುರುಪಾಂಚಾಲದಿಂದಲೂ ಆಚೆಗೆ ಅಂದರೆ ಇಂದಿನ ಚಂಬಲ್‌ನಿಂದ ಆಚೆಗೆ ಮುಂದುವರಿದಿತ್ತು. ಮಹಾಭಾರತದಲ್ಲಿ ಇದನ್ನು ಪಾಂಚಾಲದ ದಕ್ಷಿಣದ ಮೇರೆ ಎಂದು ಹೇಳಲಾಗಿದೆ. ಪುರಾಣಗಳ ಕಾಲದಲ್ಲಿ ಮತ್ತು ಕೌಟಿಲ್ಯನ ಅರ್ಥಶಾಸ್ತ್ರದ ಕಾಲಕ್ಕೆ ಭೋಜರು ಇದನ್ನಾಳುತ್ತಿದ್ದರು. ಅದರಲ್ಲಿ ಅವರು ವಿದರ್ಭದ ವರ್ದಾ ಮತ್ತು ದಂಡಕಗಳನ್ನಾಳುತ್ತಿದ್ದರು. ಈ ಪ್ರದೇಶಗಳು ಸ್ಪಷ್ಟವಾಗಿಯೇ ಗೋದಾವರಿಯ ನದಿಯ ತೀರದಲ್ಲಿರುವವು. ಬ್ರಾಹ್ಮಣಗಳಲ್ಲಿ ವಿದರ್ಭರಾಜದ ಭೀಮನ ಸ್ಪಷ್ಟ ಉಲ್ಲೇಖವಿರುವುದಾಗಿ, ಮೇಲಿನ ತರ್ಕಕ್ಕೆ ಇದು ಪೂರಕವಾಗುತ್ತದೆ. ಪುರಾಣಗಳ ಕಾಲದಲ್ಲಿ ವಿದರ್ಭದ ರಾಜಧಾನಿಯಾದ ಕೌಂಡಿನ್ಯ ಪುರದ ಉಲ್ಲೇಖವಿರುವುದಾಗಿ ಬೃಹ್ಯದಾರಣ್ಯಕೋಪನಿಷತ್ತಿನಲ್ಲಿ ಕೆಲವು ಗುರುವರ್ಯರಿಗೂ ಇರುವ ತತ್ಸಂಬಂಧಿಯಾದ ಗೌರವಗಳು ಅದನ್ನೇ ನಿರ್ದೇಶಿಸುವ ಸಾಧ್ಯತೆಯೂ ಇದೆ. ಆದರೆ, ಐತರೇಯ ಬ್ರಾಹ್ಮಣದಲ್ಲಿ ಕಂಡುಬರುವ ನೀಚ್ಯರು ಮತ್ತು ಅತಾಚ್ಯರು ಪರ್ಯಾಯ ದ್ವೀಪದ ಪಶ್ಚಿಮದವರೇ ಎಂಬುದರ ಬಗೆಗೆ ಅನುಮಾನಗಳಿವೆ. ಅಶೋಕನ ಕಾಲದಲ್ಲಿ ಅಂದರೆ ಕ್ರಿ.ಪೂ.೩ನೇ ಶತಮಾನದಲ್ಲಿ ಉಲ್ಲೇಖಿಸಲಾಗಿರುವ ನೀಚ್ಯರು ಎಂಬ ಪದವು ಚರ್ಕವರ್ತಿಗಳಿಗೆ ಸಂಬಂಧಿಸಿರುವುದಾಗಿದೆ.

ಇದೀಗ ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಿತರಾಗಿರುವ ದಕ್ಷಿಣದ ಬುಡಕಟ್ಟುಗಳ ಹೆಸರುಗಳೂ ಕುತೂಹಲಕಾರಿಯಾಗಿವೆ. ಐತರೇಯ ಬ್ರಾಹ್ಮಣದಲ್ಲಿ ಉದಾಂತ್ಯರು ಮತ್ತು ದಸ್ಯುಗಳ ಉಲ್ಲೇಖವಿದೆ. ಇವರು ಆಂಧ್ರರು, ಪೌಂಢ್ರರು, ಸವರ, ಪುಲಿಂದ ಮತ್ತು ಮೂತಿಭ ಜನ ವರ್ಗದವರಾಗಿದ್ದರೆ. ಇವರೆಲ್ಲ ಗಂಗೆ, ನರ್ಮದಾ, ಗೋದಾವರಿ ಮತ್ತು ಅದರ ಉಪನದಿಗಳು ಮತ್ತು ಕೃಷ್ಣನದಿಗಳ ಕಣಿವೆಗಳಲ್ಲಿ ವಾಸಿಸುತ್ತಿದ್ದ ಜನರಾಗಿದ್ದಾರೆ. ಆಂಧ್ರರು ಗೋದಾವರಿ ಮತ್ತು ಕೃಷ್ಣಾನದಿಗಳ ಕೆಳದಂಡೆಯ ಕಣಿವೆಯಲ್ಲಿ ವಾಸಿಸುತ್ತಿದ್ದವರು. ಅವರಲ್ಲಿಯೇ ಒಂದು ಗುಂಪಿನ ಜನರು ವಿದರ್ಭದ ಸಮೀಪದಲ್ಲಿಯೇ ವಾಸಿಸುತ್ತಿದ್ದರು. ಪೌಂಢ್ರಕರು ಮೂಲತಃ ಬಂಗಾಳದ ಉತ್ತರ ಭಾಗದಲ್ಲಿ ವಾಸಿಸುವರಾಗಿದ್ದರೂ ವಿದರ್ಭದ ಸಮೀಪವೂ ಅವರ ನೆಲೆಗಳಿರುವುದು ಕಂಡುಬಂದಿದೆ. ಸವರ ಜನಗಳು ಬಹುಶಃ ವಿಂಧ್ಯಾ ಮತ್ತು ಶವರಿ (ಗೋದಾವರಿ ನದಿಯ ಉಪನದಿ) ನದಿಗಳ ನಡುವಣದ ನಾಡಿನಲ್ಲಿ ವಾಸಿಸುತ್ತಿರಬೇಕು. ಮೂತಿಭರು ಗಂಗಾನದಿಯ ಮುಖಜ ಭೂಮಿಯಲ್ಲಿರುವ ದ್ವೀಪಗಳಲ್ಲಿ ವಾಸಿಸುತ್ತಿದ್ದರೆಂದು ಸದ್ಯಕ್ಕೆ ತಿಳಿಯಲಾಗಿದೆ. ಪುಲಿಂದರೂ ಕೂಡ ಇದೇ ಭೂಪ್ರದೇಶದವರೆಂದು ಭಾವಿಸಲಾಗಿದೆ.

ಹೀಗೆ, ಪ್ರಾಚೀನ ವೈದಿಕ ಗ್ರಂಥಗಳನ್ನು ಹೊರತುಪಡಿಸಿದ್ದರೆ ಮುಂದಿನ ಕಾಲಘಟ್ಟವು

'ಸೂತ್ರ' ಗ್ರಂಥಗಳಿಗೆ ಸಂಬಂಧಿಸಿರುವುದಾಗಿದೆ. ಹಾಗೆಯೇ, ಇದು ಜೈನ ಮತ್ತು ಬೌದ್ಧ ಧರ್ಮಗಳ ಕಾಲವೂ ಹೌದು. ಈ ಕಾಲಘಟ್ಟದಲ್ಲಿ ದಕ್ಷಿಣಾಪಥ ಮತ್ತು ಅದರ ಜನವರ್ಗಗಳ ಬಗೆಗೆ ಹೆಚ್ಚು ಸ್ಪಷ್ಟವಾದ ಮಾಹಿತಿಗಳು ಲಭ್ಯವಾಗುತ್ತವೆ. ಆದರೆ ಇಲ್ಲಿಯೂ ಸಹ ದಕ್ಷಿಣಾಪಥದ ವಿಸ್ತಾರಕ್ಕೆ ಸಂಬಂಧಿಸಿದಂತೆ ಸಂದಿಗ್ಧತೆಯೇ ಕಂಡುಬರುತ್ತದೆ. 'ಬೌದ್ಧಾಯನ ಧರ್ಮಸೂತ್ರ', 'ಸುತ್ತನಿಪಾತ', 'ವಿನಯ' ಮೊದಲಾದ ಗ್ರಂಥಗಳಲ್ಲಿ ದಕ್ಷಿಣಾಪಥದ ಉಲ್ಲೇಖವಿದ್ದು, ಅದು ಗೋದಾವರಿಯ ತೀರ ಪ್ರದೇಶವೇ ಆಗಿದೆ. ಪಾಣಿನಿಯ ಸೂತ್ರದಲ್ಲಿ ದಕ್ಷಿಣಕ್ಕೆ ಅಥವಾ ದಕ್ಷಿಣಾಪಥಕ್ಕೆ 'ದಾಕ್ಷಿಣಾತ್ಯ' ಎಂಬ ಪರ್ಯಾಯ ನಾಮವು ಕಂಡು ಬರುತ್ತದೆ. ಬೌದ್ಧರು ಅಸ್ಸಕ, (ಅಶ್ಮಕ) ಮೂಲಕ ಮತ್ತು ಅಂಧಕರನ್ನು (ಅಥವ ಆಂಧ್ರಾರು) ದಕ್ಷಿಣಾ ಪಥದದ ಜನವರ್ಗವೆಂದೇ ಕರೆಯುತ್ತಾರೆ. (ಇವರು ಬ್ರಿಟಿಷ್ ರಾಜ್ಯದಲ್ಲಿ ಹೈದ್ರಾಬಾದ್ ರಾಜ್ಯ ಮತ್ತು ಮದ್ರಾಸ್ ಪ್ರೆಸಿಡೆನ್ಸಿಯ ಕೆಲ ಭೂಭಾಗಗಳಿಗೆ. ಸೇರಿದ ಜನಗಳು). 'ಮಹಾಗೋವಿಂದ', 'ಸುತಂತ', 'ಉತ್ತರಾ ಧ್ಯಾಯನ ಸೂತ್ರ', ಪಾಣಿನಿಯ 'ಅಷ್ಟಾಧ್ಯಾಯೀ' ಮೊದಲಾದ ಕೃತಿಗಳಲ್ಲಿ ಕಳಿಂಗ ರಾಜ್ಯದ ಹೆಸರು ಕಂಡು ಬರುತ್ತದೆ. ಪುರಾಣಗಳ ಕಾಲದಲ್ಲಿ ಅದು ವೈತರಣಿಗುಂಟ ಪಸರಿಸಿದ ನಾಡಾಗಿದ್ದು, ಆಮೇಲೆ ಆಂಧ್ರದವರೆಗೆ ಅದರ ಮೇರೆ ವಿಸ್ತರಿಸಿರಬೇಕು. ದಕ್ಷಿಣಾಪಥದ ವಿಸ್ತೃತವಾದ ಭೂಪ್ರದೇಶದ ಬಗೆಗೆ ಇನ್ನಷ್ಟು ವಿವರಗಳು ಈ ಕಾಲದ ಗ್ರಂಥಗಳಲ್ಲಿ ಕಂಡುಬರುವುದಿಲ್ಲ. ಆದರೆ ಕಳಿಂಗವನ್ನು ಆವರಿಸಿದ್ದ ಕಳಿಂಗಾರಣ್ಯದ ಬಗೆಗೆ ಈ ಗ್ರಂಥಗಳಲ್ಲಿ ಉಲ್ಲೇಖವಿದೆ. ಗೋದಾವರಿಯಿಂದ ಮುಂದೆ ಇರುವ ಕೃಷ್ಣಾನದಿಯ ತೀರ ಪ್ರದೇಶಗಳು ಮತ್ತು ತಮಿಳುನಾಡು (ದಮಿಳರಟ್ಠ) ಪ್ರದೇಶಗಳ ಉಲ್ಲೇಖವು ಪಾಲಿಗ್ರಂಥಗಳಲ್ಲಿ ಕಂಡುಬರುವುದಿಲ್ಲ, ಬದಲಾಗಿ ಜಾತಕ ಕಥೆಗಳಲ್ಲಿ ಕಂಡು ಬರುತ್ತದೆಯಷ್ಟೇ. ಜೈನಗ್ರಂಥಗಳಾದ ಅಂಗಗಳು-ಅದರಲ್ಲಿಯೂ ಭಗವತಿ-ಉಲ್ಲೇಖಿಸುವ ದಕ್ಷಿಣದ ತುತ್ತತುದಿಯ ಬಗೆಗಿನ ವಿವರಗಳು ಕೂಡ ಇದಕ್ಕಿಂತ ಪ್ರಾಚೀನವಾದುವುಗಳೇನಲ್ಲ.

**ಪುರಾಣಗಳು:** ರಾಮಾಯಣದ 'ಕಿಷ್ಕಿಂಧಾಕಾಂಡ'ದಲ್ಲಿ ದಕ್ಷಿಣ ಭಾರತದ ಪಾಂಡ್ಯರಾಜರ ಬಗೆಗೆ ವಿವರಗಳಿವೆ. ಅಯೋಧ್ಯಾಕಾಂಡದಲ್ಲಿಯೂ ಸಹಿತವಾಗಿ -

ದಿಶಾಮಾಸ್ತಾಯ ಕೈಕೇಯೀ ದಕ್ಷಿಣಮ್ ದಂಡಕಾರಣ್ಯನ್ ಪ್ರತಿ
ವೈಜಯನ್ತಮಿತಿ ಖ್ಯಾತಮ್ ಪುರಮ್ ಯತ್ರ ತಿಮಿಧ್ವಜಃ

ಎಂಬ ಶ್ಲೋಕದಲ್ಲಿರುವಂತೆ, ದಂಡಕಾರಣ್ಯದ ದಕ್ಷಿಣಕ್ಕೆ ವೈಜಯಂತಿಪುರವಿದೆ ಎಂಬ ನಿರ್ದೇಶನವನ್ನು ಗಮನಿಸಬಹುದಾಗಿದೆ. ಇಲ್ಲಿರುವ ವೈಜಯಂತಿ ಪುರವು ಬಹುಮಟ್ಟಿಗೆ ಉತ್ತರ ಕರ್ನಾಟಕದ ವಿಜಯಂತಿ ಅಥವ ಬನವಾಸಿಯೇ ಆಗಿದೆ. ಇದೇ ಕಾವ್ಯದ ಅರಣ್ಯ ಕಾಂಡದಲ್ಲಿ ಇದಕ್ಕಿಂತ ಭಿನ್ನವಾದ ವಿವರಗಳು ದೊರೆಯುತ್ತವೆ. ಪಂಪಾಸರಸ್ಸು ಅಥವ ತುಂಗಭದ್ರಾನದಿಯ ಇಡಿಯ ಭೂಪ್ರದೇಶದಿಂದ ಆರಂಭಿಸಿ, ಮಂದಾಕಿನಿ ಮತ್ತು ಚಿತ್ರ ಕೂಟಗಳು ಸಹಿತವಾಗಿ ಅದು ರಾಕ್ಷಸರ ನಿವಾಸಸ್ಥಾನವಾಗಿದೆ ಎಂಬ ವಿವರಗಳಿವೆ. ಈ

ಭೂಪ್ರದೇಶವನ್ನು ಒಟ್ಟಾಗಿ ದಂಡ ಕಾರಣ್ಯವೆಂದು ಕರೆಯಲಾಗಿದೆ. ರಾಮಾಯಣದಲ್ಲಿ ಬರುವ ಈ ದಂಡಕಾರಣ್ಯಕ್ಕೆ ಸಂಬಂಧಿಸಿದಂತೆ, ಇತರ ಗ್ರಂಥಗಳಿಂದ (ಕೌಟಿಲ್ಯನ ಅರ್ಥಶಾಸ್ತ್ರ ಮೊದಲಾದ ಗ್ರಂಥಗಳಲ್ಲಿ) ಪೂರ್ವಭಾಗವು ಬಸ್ತಾರಿನ ವರೆಗೆ ಮತ್ತು ಮೇಲ್ಭಾಗವು ಗೋದಾವರಿಯ ಪಶ್ಚಿಮದವರೆಗೆ ಹರಡಿರುವುದಾಗಿ ತಿಳಿದು ಬರುತ್ತದೆ. ದಂಡಕಾರಣ್ಯದ ವಿವಿಧ, ಭಾಗಗಳಿಗೆ ಬೇರೆ ಬೇರೆ ಹೆಸರುಗಳಿರುವುದಾಗಿ ರಾಮಾಯಣದಿಂದ ತಿಳಿದು ಬರುತ್ತದೆ. ಉದಾ: ಮಧುಕವನ, ಚಿತ್ರಕೂಟ, ಪಿಪ್ಪಲಾವನ, ಜನಸ್ಥಾನ, ಕ್ರೌಂಚಾರಣ್ಯ, ಮತಂಗವನ ಇವೆಲ್ಲವೂ ದಂಡಕಾರಣ್ಯದ ವ್ಯಾಪ್ತಿಯಲ್ಲೇ ಬರುವ ಅರಣ್ಯಗಳಾಗಿವೆ. ರಾಮಾಯಣ ಮಹಾಕಾವ್ಯದಲ್ಲಿ ದಂಡಕಾರಣ್ಯದಲ್ಲಿರುವ ಅನೇಕ ನದಿ ನದಗಳ ಉಲ್ಲೇಖ ವಿರುವುದಾದರೂ ಮುಖ್ಯವಾಗಿ ಮಂದಾಕಿನಿ, ಗೋದಾವರಿ ಮತ್ತು ಪಂಪಾಸರಸ್ಸು ಗಳು ವಿಶೇಷವಾಗಿ ವರ್ಣಿತವಾಗಿವೆ. ಇವುಗಳನ್ನು ಬಿಟ್ಟರೆ ಕೃಷ್ಣವೇಣಿ, ಕೃಷ್ಣಾ ಸಹಿತವಾಗಿ ನರ್ಮದಾ, ಕಾವೇರಿ, ಮತ್ತು ತಾಮ್ರಪರ್ಣಿ ನದಿಗಳ ಪ್ರಸ್ತಾಪವಿದೆ.

ಮಹಾಭಾರತದಲ್ಲಿ ದಿಗ್ವಿಜಯ, ತೀರ್ಥಯಾತ್ರೆ, ಜಂಬೂಖಂಡ ಮೊದಲಾದ ವಿವರಣೆಗಳಲ್ಲಿ ದಕ್ಷಿಣಾಪಥವನ್ನು ವಿಶೇವಾಗಿ ಉಲ್ಲೇಖ ಮಾಡಲಾಗಿದೆ. ಮಹಾಭಾರತದಲ್ಲಿ ವಿಶೇಷವಾಗಿ ಬರುವ ನಳ, ರುಕ್ಮಿಣಿ ಮೊದಲಾದ ರಾಜಕುಮಾರ-ಕುಮಾರಿಯರ ಆಖ್ಯಾಯಿಕೆ ಗಳು ಈ ಭೂಭಾಗದಲ್ಲಿಯೇ ನಡೆಯುತ್ತವೆ. ವಿದರ್ಭದ ರಾಜಕುಮಾರನಾದ ರುಕ್ಮಿಗೆ ಕುರುಕ್ಷೇತ್ರದಲ್ಲಿ ಯುದ್ಧವನ್ನು ನಿರಾಕರಿಸಲಾಗುತ್ತದೆ. ಆದರೆ, ಆತನ ಜನರು ಕಳಿಂಗ, ಮೇಕಲ, ತ್ರಿಪುರರೇ ಮೊದಲಾದ ದಾಕ್ಷಿಣಾತ್ಯರೊಂದಿಗೆ ಮಹಾಭಾರತದಲ್ಲಿ ವರ್ಣಿತ ವಾಗಿದ್ದಾರೆ. ಮಹಾಭಾರತದ ಸಭಾಪರ್ವದಲ್ಲಿ ಉಲ್ಲೇಖಿತರಾದ 'ಅಟವಿಕಾಃ' ಮತ್ತು 'ಕಾಂತಾರಕಾಃ' ದಕ್ಷಿಣಾಪಥದ ಜನವರ್ಗಗಳೆಂದು ನಂಬಲಾಗಿದೆ. ಈ ಕಾವ್ಯದಲ್ಲಿ ಪುರುಷಾದರು ಮತ್ತು ಕಾಳಾಮುಖರ ಉಲ್ಲೇಖವೂ ಇದ್ದು ಅವರನ್ನು 'ನರರಾಕ್ಷಸ ಯೋನಯಃ' ಎಂದರೆ ನರಮಾಂಸ ಭಕ್ಷಕರೆಂದೂ ಹೇಳಲಾಗಿದೆ. ಅದೇ ರೀತಿ ವಂಶಗುಲ್ಮರು ಅಥವ ವಸ್ತು ವಗುಲ್ಮರೆಂಬ ನಾಗರಿಕ ಸಮುದಾಯಗಳ ಬಗೆಗೂ ಹೇಳ ಲಾಗಿದೆ. ದಕ್ಷಿಣಪಥ ಪೂರ್ವಕರಾವಳಿಯಲ್ಲಿ ಕಳಿಂಗರು ಮತ್ತು ಆಂಧ್ರರು ವಾಸಿಸುತ್ತಿದ್ದರೆಂದು ಇಲ್ಲಿ ಹೇಳಲಾಗಿದೆ. ಪಶ್ಚಿಮ ಕರಾವಳಿಯಲ್ಲಿ 'ಶೂರ್ಪಾರಕ'ವೆಂಬದು ಪವಿತ್ರ ಕ್ಷೇತ್ರವಾಗಿದೆ. ಅದು ರಾಮ ಪರಶುರಾಮರು ಸಂಪರ್ಕಿಸಿದ ತಾಣವಾಗಿದೆ. ಇದೇ ರೀತಿಯಲ್ಲಿ ಪೂರ್ವ ಕರಾವಳಿಗೆ ಸಮೀಪವಾಗಿರುವ 'ಮಹೇಂದ್ರ ಪರ್ವತ'ವೂ ನಮಗೆ ಮುಖ್ಯವಾದುದಾಗಿ ಅದು ಪರಶುರಾಮ ಋಷಿಯ ಆವಾಸ ಸ್ಥಾನವೇ ಆದುದಾಗಿದೆ. ಮುಂದುವರಿದು ದಕ್ಷಿಣಾಪಥದ ಸಂಜಯಂತಿ, ಕರಹಾಟಕ (ಕರ್ಹಾಡ) ಕೊಲ್ಲಾಗಿರಿ ಮತ್ತು ಬನವಾಸಿಗಳೇ ಮೊದಲಾದ ಒಳನಾಡುಗಳನ್ನು ಸ್ಪಷ್ಟವಾಗಿ ಹೆಸರಿಸಲಾಗಿದೆ. ಅಶ್ಮಕ, ಗೋಪರಾಷ್ಟ್ರ, ಕೊಂಕಣಿ, ಕರ್ನಾಟಕ, ಮತ್ತು ಕುಂತಲ (ಒಟ್ಟಾಗಿ ಇಂದಿನ ಕರ್ನಾಟಕ) ಮಹಿಪಕ (ಮೈಸೂರು?) ಮೊದಲಾದ ಪುರಾತನ ರಾಜ್ಯಗಳು ಮಹಾ ಭಾರತದ ಆದಿಪರ್ವ ಮತ್ತು ಭೀಷ್ಮಪರ್ವಗಳಲ್ಲಿ ಪ್ರಸ್ತಾಪಿಸಲ್ಪಟ್ಟಿವೆ.

**ದಕ್ಷಿಣ-ದಕ್ಷಿಣಾಪಥ-ಡೆಕ್ಕನ್:** ಸಂಸ್ಕೃತದ ಪ್ರಾಚೀನ ಸಾಹಿತ್ಯ ಆಕರಗಳಲ್ಲಿ (ಅದರಲ್ಲಿಯೂ ಮಹಾಭಾರತದಲ್ಲಿ) 'ದಕ್ಷಿಣಾಪಥ'ಅಥವ 'ದಕ್ಷಿಣ' ಎಂಬ ಭೂಪ್ರದೇಶದ ಉಲ್ಲೇಖ ವಿಶೇಷವಾಗಿ ಕಂಡುಬರುತ್ತಿದ್ದು, ಅದು ಒಟ್ಟಾಗಿ ಪ್ರಸ್ಥಭೂಮಿಗೆ ಅಂದರೆ ನರ್ಮದೆಯಿಂದ ದಕ್ಷಿಣದ ಭೂಪ್ರದೇಶದಕ್ಕೆ ಅನ್ವಯವಾಗುತ್ತದೆ. ಮಾರ್ಕಂಡೇಯ, ವಾಯು ಮತ್ತು ಮತ್ಸ್ಯಪುರಾಣಗಳಲ್ಲಿ ಉಕ್ತವಾದ ದಕ್ಷಿಣಾಪಥವೆಂಬ ಭೂಭಾಗದಲ್ಲಿ ಚೋಳ, ಪಾಂಡ್ಯ ಮತ್ತು ಕೇರಳ ದೇಶಗಳ ಉಲ್ಲೇಖವಿದ್ದು ಅವುಗಳೀಗ ತಂಜಾವೂರು, ಮದುರೆ ಮತ್ತು ಮಲಬಾರ್‌ಗಳಿಗೆ ಅನ್ವಯವಾಗುತ್ತವೆ. ಹಾಗೆಯೇ ಇದೀಗ ಈ ಪ್ರದೇಶಗಳು ದಕ್ಷಿಣ ಭಾರತದ ದಕ್ಷಿಣದ ಮೂಲೆಯಲ್ಲಿವೆ. ಸಹದೇವನು ದಕ್ಷಿಣಾಪಥದಲ್ಲಿ ದಿಗ್ವಿಜಯ ವನ್ನು ಕೈಗೊಂಡು ಪಾಂಡ್ಯರನ್ನು ಸೋಲಿಸಿದನೆಂಬುದಾಗಿ ಮಹಾಭಾರತದಲ್ಲಿ ಕಥೆಯಿದೆ. ಹಾಗೆಯೇ 'ವಾಯು ಪುರಾಣ'ದಲ್ಲಿ ಗೋದಾವರಿಯೇ ಮೊದಲಾಗಿ ಸಹ್ಯಾದ್ರಿ ಯಿಂದ ಉದ್ಭವಿಸುವ ನದಿಗಳು ದಕ್ಷಿಣಾಪಥಕ್ಕೆ ಸೇರಿದುವು ಎಂದು ಹೇಳಲಾಗಿದೆ. ಆದರೆ ನರ್ಮದಾ ಮತ್ತು ತಪತಿಗಳ ಬಗೆಗೆ-ಅವು ದಕ್ಷಿಣಾಪಥದ ನದಿಗಳೆಂಬ ಬಗೆಗೆ ಅಂತಹ ಸ್ಪಷ್ಟೀಕರಣ ಕಂಡುಬರುವುದಿಲ್ಲ. ಹಾಗಾದುದರಿಂದ ಅವುಗಳ ಕಣಿವೆ ಪ್ರದೇಶಗಳನ್ನು ದಕ್ಷಿಣಾಪಥವೆಂದು ಆಗ ಪರಿಗಣಿಸಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಹಾಗಾದುದರಿಂದ ದಕ್ಷಿಣಾಪಥವೆಂಬ ಪ್ರಯೋಗವು ಯಾವಾಗಲೂ ಒಂದೇ ಅರ್ಥದಲ್ಲಿ ಪ್ರಯೋಗವಾಗಿದೆ ಎಂದು ಭಾವಿಸ ಬೇಕಾಗಿಲ್ಲ. ಈ ಬಗೆಗೆ ಇನ್ನಷ್ಟು ವಿವರಗಳಿಗೆ ಹೋಗಬಹುದು. ಮನುಸ್ಮೃತಿಯಲ್ಲಿ ಹಿಮಾಲಯ ಮತ್ತು ವಿಂಧ್ಯಪರ್ವತಗಳ ನಡುವಿನ ಪವಿತ್ರ ಪ್ರದೇಶವನ್ನು 'ಆರ್ಯಾವರ್ತ' ವೆಂದು ಪರಿಗಣಿಸಲಾಗಿದೆ. ಪತಂಜಲಿಯು ಪಾಣಿನಿಯ ವ್ಯಾಕರಣ ಗ್ರಂಥಕ್ಕೆ ಬರೆದ ಮಹಾಭಾಷ್ಯದಲ್ಲಿ ಮೇಲಿನ ಅಭಿಪ್ರಾಯವೇ ಮಾನ್ಯವಾಗಿದೆ. ಈ ಆರ್ಯಾವರ್ತಕ್ಕೆ ಉತ್ತರಾ ಪಥವೆಂಬ ಇನ್ನೊಂದು ಹೆಸರೂ ಸಂಸ್ಕೃತ ಸಾಹಿತ್ಯದಲ್ಲಿ ಕಂಡು ಬರುತ್ತದೆ.

ಹೀಗೆ ಉತ್ತರಾಪಥ ಹಾಗೂ ದಕ್ಷಿಣಾಪಥಗಳೆಂದು ಅಖಂಡ ಭಾರತವನ್ನು ಭೌಗೋಳಿಕ ವಾಗಿ ಮತ್ತು ಸಾಂಸ್ಕೃತಿಕವಾಗಿ ಹಿಂದಿನಿಂದಲೂ ನಿರ್ದೇಶಿಸುವುದು ಕಂಡುಬರುತ್ತದೆ. ಈಗಾಗಲೇ ಹೇಳಿದಂತೆ ಹಿಮಾಲಯದಿಂದ ಮೊದಲ್ಗೊಂಡು ವಿಂಧ್ಯಪರ್ವತಗಳವರೆಗೆ ಉತ್ತರಾಪಥದ ಮೇರೆಯಾದರೆ, ವಿಂದ್ಯದ ದಕ್ಷಿಣಕ್ಕಿರುವುದೇ ಈಗ ನಮ್ಮ ಚರ್ಚೆಯ ಪ್ರಧಾನ ವಿಷಯವಾದ ದಕ್ಷಿಣಾಪಥ. ದಕ್ಷಿಣಾಪಥದ ಬಗೆಗೆ ವಿದೇಶೀಯರ ಬರೆಹಗಳಲ್ಲಿ ಸಿಗುವ ಮೊದಲ ಪ್ರಾಚೀನ ಆಧಾರವು ಅನಾಮಿಕ ಗ್ರೀಕ್ ಪ್ರವಾಸಿಯೊಬ್ಬನ (ಳ?) 'periplus of the Erythrean Sea' ಗ್ರಂಥವಾಗಿದ್ದು (ಕ್ರಿ.ಶ. ೧ನೇ ಶತಮಾನ) ಅದರಲ್ಲಿ 'Dachinabades' (ದಕ್ಷಿಣಾಪಥ > ದಕ್ಷಿಣಾಪಥ) ಎಂದು ಈ ಭೂಪ್ರದೇಶವನ್ನು ಉಲ್ಲೇಖಿಸಲಾಗಿದೆ. ಅನಂತರ ಬಂದ ಚೀನೀ ಯಾತ್ರಿಕನಾದ ಫಾಹಿಯಾನನು (ಕ್ರಿ.ಶ. ೫ನೇ ಶ.ಮಾ.ದ ಆರಂಭ) ದಕ್ಷಿಣಾ ಪಥವನ್ನು 'ತ - ದ್ರಿಸನ್' ಎಂದು ಗುರುತಿಸುತ್ತಾನೆ.

ಈಗ ದಕ್ಷಿಣಾಪಥ ಎಂಬ ಭೂಪ್ರದೇಶದ ವ್ಯಾಪ್ತಿಯ ಬಗೆಗೆ ನಾವು ಚರ್ಚಿಸುತ್ತಿದ್ದೇವು.

ಆ ಚರ್ಚೆಯಲ್ಲಿ ದಕ್ಷಿಣಾಪಥವೆಂಬ ನಾಮನಿರ್ದೇಶನವು ಕೆಲವೊಮ್ಮೆ ವ್ಯಾಪಕವಾಗಿ ದಕ್ಷಿಣಭಾರತಕ್ಕೆ ಮತ್ತೆ ಕೆಲವೊಮ್ಮೆ ಸೀಮಿತವಾದ ಭೂಪ್ರದೇಶಕ್ಕೂ ಅನ್ವಯಿಸುವುದನ್ನು ಗಮನಿಸಲಾಯಿತು. ಆ ಚರ್ಚೆಯನ್ನು ಇನ್ನಷ್ಟು ವಿಸ್ತರಿಸಲು ಈಗ ತೊಡಗಬಹುದು. ಭರತನ ನಾಟ್ಯಶಾಸ್ತ್ರದಲ್ಲಿ ದಕ್ಷಿಣ ಸಮುದ್ರಾಂಕಿತವಾದ ವಿಂಧ್ಯಾದ ವರೆಗಿನ ಭೂಪ್ರದೇಶ ವನ್ನು ದಕ್ಷಿಣ ಅಥವ ಡೆಕ್ಕನ್ ಎಂದು ಕರೆಯಲಾಗಿದೆ. ಪುರಾಣಗಳಲ್ಲಿ ಮತ್ತು ರಾಜಶೇಖರನ ಕಾವ್ಯಮೀಮಾಂಸೆಯೇ ಮೊದಲಾದ ಸಂಸ್ಕೃತ ಗ್ರಂಥಗಳಲ್ಲಿ ಜನಪದಗಳು ಎಂದು ಗುರುತು ಮಾಡುವ ಭೂಪ್ರದೇಶವೇ ದಕ್ಷಿಣಾಪಥ ಅಥವ ಡೆಕ್ಕನ್ ಎಂಬುದಾಗಿದೆ. ಅಲಹಾಬಾದಿನ ಕಂಬ ಶಾಸನದಿಂದ ತಿಳಿದು ಬರುವಂತೆ, ಕ್ರಿ.ಶ.೪ನೇ ಶತಮಾನದಲ್ಲಿ ದಕ್ಷಿಣಾಪಥವು ದಕ್ಷಿಣಕ್ಕೆ ಕಾಂಚಿವರೆಗೆ ಮಾತ್ರವೇ ಹರಡಿಗೊಂಡಿತ್ತು. ಅದರಿಂದ ಮುಂದುವರಿದಿರಲಿಲ್ಲ ಎಂದು ತಿಳಿದು ಬರುತ್ತದೆ. ಈಗಾಗಲೇ ಹೇಳಿರುವ 'ಪೆರಿಪ್ಲಸ್' (Periplus) ಗ್ರಂಥದಲ್ಲಿ ಉಲ್ಲೇಖಿತವಾದ 'ದಚಿಣ ಬಡೆಸ್' (Dachinabaddes) ಎಂಬುದು ತಮಿಳು ನಾಡನ್ನುಳಿದ ಭೂಪ್ರದೇಶವೇ ಆಗಿದೆ. 'ಲಲಿತವಿಸ್ತರ' ವೆಂಬ ಸಂಸ್ಕೃತ ಗ್ರಂಥದಲ್ಲಿ ದಕ್ಷಿಣ ಮತ್ತು ದ್ರಾವಿಡ ದೇಶಗಳನ್ನು ಪ್ರತ್ಯೇಕಿಸಲಾಗಿದೆ. ರಾಮಾಯಣ ಕಾವ್ಯದಲ್ಲಿಯೂ ದ್ರಾವಿಡ ಮತ್ತು ದಕ್ಷಿಣಾಪಥ ಜನಪದಗಳ ನಡುವೆ ವ್ಯತ್ಯಾಸವನ್ನು ಕಲ್ಪಿಸಲಾಗಿದೆ. ಮಹಾಭಾರತದ ಕರ್ಣಪರ್ವದಲ್ಲಿ ದಾಕ್ಷಿಣಾತ್ಯ ಜನಗಳನ್ನು ದ್ರಾವಿಡ, ತುಂಡಿಕ, ನಿಷಧ, ಪುಲಿಂದ,ಕುಂಡಲ, ಮೇಕಲ, ದಶಾರ್ಣ ಮತ್ತು ಕಳಿಂಗರಿಗಿಂತ ಭಿನ್ನರಾದ ಜನಗಳೆಂದು ವಿವರಿಸಲಾಗಿದೆ. ಹಾಗೆಯೇ ಪುರಾಣಗಳಲ್ಲಿ ಈ ಜನಗಳನ್ನೇ ದಕ್ಷಿಣಾಪಥದ ಮೂಲನಿವಾಸಿಗಳೆಂದೂ ಹೇಳಲಾಗಿದೆ. ಅದೇ ಮಹಾಭಾರತದ ಸಭಾಪರ್ವದಲ್ಲಿ ದಕ್ಷಿಣದ ಕೊಟ್ಟ ಕೊನೆಯಲ್ಲಿರುವ ಪಾಂಡ್ಯ ರಾಜ್ಯವನ್ನು ದಕ್ಷಿಣಾಪಥದಿಂದ ಕೈಬಿಡಲಾಗಿದೆ. 'Imperial Gazetter of India' ದಲ್ಲಿ "ಡೆಕ್ಕನ್ ಭೂಪ್ರದೇಶವು ವ್ಯಾಪಕವಾದ ಅರ್ಥದಲ್ಲಿ ವಿಂಧ್ಯಾಪರ್ವತಾವಳಿಗಿಂತ ದಕ್ಷಿಣಕ್ಕೆ ಮತ್ತು ಉತ್ತರದಲ್ಲಿ ನರ್ಮದೆಯೇ ಮೇರೆಯಾಗಿ ಇರುವ ಅಖಂಡವಾದ ಪರ್ಯಾಯವಾದ ದ್ವೀಪವನ್ನು ಒಳಗೊಳ್ಳುತ್ತದೆ" ಎಂದು ವ್ಯಾಖ್ಯಾನಿಸಲಾಗಿದೆ ೧೯೪೫ ರಲ್ಲಿ ನಡೆದ ದಖ್ಖನ್ ಇತಿಹಾಸ ಸಮ್ಮೇಳನದಲ್ಲಿ (Decean History Conference) ಅದರ ಮೇರೆಗಳನ್ನು ಹೀಗೆ ವ್ಯಾಖ್ಯಾನಿಸಲಾಗಿದೆ "ದಖ್ಖನ್ ಭೂಪ್ರದೇಶವು ಉತ್ತರದಲ್ಲಿರುವ ತಪತೀ ನದಿಯಿಂದ ಪ್ರಸ್ಥಭೂಮಿಯ ದಕ್ಷಿಣದ ತುದಿಯ ವರೆಗೆ ಮತ್ತು ಸಮುದ್ರದಿಂದ ಸಮುದ್ರದವರೆಗೆ ಇರುವ ಭೂಪ್ರದೇಶವಾಗಿದೆ". ಇಲ್ಲಿ ತಪತೀ ನದಿಯು ಉತ್ತರಕ್ಕೆ ಸಾತ್ಪಪುರ ಪರ್ವತಾವಳಿ ಮತ್ತು ನರ್ಮದಾ ನದಿಯವರೆಗೆ ಉತ್ತರದ ಮೇರೆಯಾಗಿದೆ. ಈ ಭೂಭಾಗ ವನ್ನು ಮಧ್ಯಕಾಲೀನ ಯುಗದಲ್ಲಿ 'ಖಾನ್ದೇಶ' ಎಂದು ಕರೆಯಲಾಗಿದ್ದು, ಸತ್ಮಾಲಾ ಪರ್ವತಾ ವಳಿಯು ಅದರ ದಕ್ಷಿಣದ ಮೇರೆಯಾಗಿತ್ತು. ಜೊವಿಯೋ - ಡುಬೇವಿಲ್ ಅವರು ಡೆಕ್ಕನ್ ಭೂಪ್ರದೇಶವು ಉತ್ತರದಲ್ಲಿ ನರ್ಮದಾ ಮತ್ತು ಮಹಾನದಿಗಳೇ ಮೇರೆಯಾಗಿ, ಪೂರ್ವದಲ್ಲಿ ಬಂಗಾಳ ಕೊಲ್ಲಿ ಮತ್ತು ಪಶ್ಚಿಮದಲ್ಲಿ ಅರಬ್ಬೀ ಸಮುದ್ರದಿಂದ ಆವೃತಗೊಂಡು,

ದಕ್ಷಿಣದಲ್ಲಿ ನೀಲಗಿರಿ ಪರ್ವತಾವಳಿ ಮತ್ತು ದಕ್ಷಿಣ ಪೆನ್ನಾರ್ ವರೆಗೆ ಹರಡಿಕೊಂಡಿದೆ ಎಂದು 'Ancient History of Deccan' (ಪು ೫) ನಲ್ಲಿ ವಿವರಿಸುತ್ತಾರೆ. ಹೀಗೆ ಡೆಕ್ಕನ್ ಭೂಭಾಗವು ಆ ಪ್ರಕಾರವಾಗಿ, ದಕ್ಷಿಣದ ಕರಾವಳಿ ಮತ್ತು ದಖ್ಖನ ಪ್ರಸ್ತಭೂಮಿಯ ಮುಖ್ಯ ಭೂಭಾಗಗಳನ್ನು ಒಳಗೊಳ್ಳುತ್ತದೆ. ಈ ದಖ್ಖನ್ ಭೂಪ್ರದೇಶವು ಭೌಗೋಳಿಕವಾಗಿ ಐದು ರೀತಿಯ ವಿಂಗಡಣೆಗೊಳಗಾಗಿದೆ (೧) ಪಶ್ಚಿಮ ಘಟ್ಟ ಪ್ರದೇಶ ಅಥವ ಕರಾವಳಿ ಸಹಿತವಾಗಿ ಸಹ್ಯಾದ್ರಿ ಶಿಖರಗಳು (೨) ಔತ್ತರೇಯ ಡೆಕ್ಕನ್ (೩) ದಕ್ಷಿಣ ಡೆಕ್ಕನ್ (೪) ಪೂರ್ವ ಪ್ರಸ್ಥಭೂಮಿ (೫) ಕರಾವಳಿ ಸಹಿತವಾಗಿ ಪೂರ್ವಘಟ್ಟಗಳು, ಈಶಾನ್ಯ ಮೇರೆಯಾಗಿ ಮಹಾನದಿ ಪರ್ಯಂತ ಡೆಕ್ಕನ್ ಭೂಪ್ರದೇಶವಿರುತ್ತದೆ. ಹೀಗೆ ದಖ್ಖನ್ ಪ್ರಸ್ಥಭೂಮಿಯು ದಕ್ಷಿಣ ಮತ್ತು ನೈರ್ಋತ್ಯಕ್ಕೆ ಬಂದಂತೆಲ್ಲ ಕಿರಿದಾಗುತ್ತ ಸಾಗುತ್ತದೆ. ಮಧ್ಯಕಾಲೀನ ಚರಿತ್ರೆಯನ್ನು ಗಮನಿಸಿದಾಗ ಮಲಬಾರ್ ಮತ್ತು ತಮಿಳು ನಾಡುಗಳು ದಕ್ಷಿಣಾಪಥದಲ್ಲಿ, ದಖ್ಖನ್ ಅಥವ ಡೆಕ್ಕನ್ನಿನಲ್ಲಿ ಸೇರ್ಪಡೆಯಾಗುವುದಿಲ್ಲ. ಮಧ್ಯಕಾಲೀನ ಚರಿತ್ರೆಯನ್ನು ಸಮನಿಸಿದರೆ ದೇವಗಿರಿ ಅಥವ ವಿಜಯನಗರ ಮೊದಲಾದ ಸಾಮ್ರಾಜ್ಯಗಳು ಕೇಂದ್ರವಾಗಿ ಡೆಕ್ಕನ್ ಭೂಪ್ರದೇಶವು ಆಳ್ವಿಕೆಗೊಳಪಟ್ಟಿರುವುದು ವಿದಿತವಾಗುತ್ತದೆ.

ಈಗಾಗಲೇ ಹೇಳಿದಂತೆ ಮಧ್ಯಕಾಲೀನ ಡೆಕ್ಕನ್ ಅಥವ ದಕ್ಷಿಣ ಅಥವ ದಕ್ಷಿಣಾಪಥ ವೆಂಬುದರಲ್ಲಿ ಮಲಬಾರ್ ಮತ್ತು ತಮಿಳುನಾಡುಗಳು ಸೇರ್ಪಡೆಯಾಗುವುದಿಲ್ಲ. ('The Early History ofIndia' 1924) ಉಲ್ಲೇಖಿತ ಗ್ರಂಥದಲ್ಲಿ ಸ್ಮಿತ್ ಅವರು "ದಕ್ಷಿಣ ಭಾರತವು ಅದರ ವೈಶಿಷ್ಟ್ಯವೆನಿಸಿದ ಪ್ರಸ್ಥಭೂಮಿಯೊಳಗೊಂಡು, ಕೃಷ್ಣ ಮತ್ತು ತುಂಗಭದ್ರ ನದಿಮುಖ ಭೂಮಿಯಿಂದ ಹೊರತಾದುದಾಗಿರುತ್ತದೆ. ಏಕೆಂದರೆ, ಆ ಭೂಭಾಗದ ಗುಣಲಕ್ಷಣವು ವಿಶಿಷ್ಟವಾದುದಾಗಿ, ಸಾಮಾನ್ಯವಾಗಿ ಭಾರತದ ಇತಿಹಾಸಕ್ಕಿಂತ ಭಿನ್ನವಾದ ಇತಿಹಾಸವನ್ನೊಳಗೊಂಡುದಾಗಿದೆ" ಎಂದೆನ್ನುತ್ತಾರೆ. ಅವರು ಮುಂದುವರಿದು ಹೀಗೆ ಕೃಷ್ಣ ಮತ್ತು ತುಂಗಭದ್ರಾನದಿಗಳ ಮುಖಜ ಭೂಮಿಯ ಈ ಪ್ರದೇಶವನ್ನು ಆಧುನಿಕ ಕಾಲದಲ್ಲಿ ಮದ್ರಾಸ್ ಪ್ರೆಸಿಡೆನ್ಸಿ(Madrass Precidency) ಎಂದು ಕರೆಯಬಹುದಾಗಿದ್ದು ಅವುಗಳಲ್ಲಿ ವಿಶಾಖಪಟ್ಟಣಂ ಮತ್ತು ಗಂಜಮ್ ಪ್ರದೇಶಗಳ ಹೊರತಾಗಿ, ಮೈಸೂರು, ಕೊಚ್ಚಿನ್ ಮತ್ತು ತಿರುವಾಂಕೂರ್ ರಾಜ್ಯಗಳನ್ನು ಡೆಕ್ಕನ್ ಭೂಪ್ರದೇಶದಲ್ಲಿ ಸೇರಿಸಬಹುದಾಗಿದೆ ಎಂದು ಹೇಳುತ್ತಾರೆ. ವಾತ್ಸ್ಯಾಯನನ ಕಾಮಸೂತ್ರದಲ್ಲಿ ದಕ್ಷಿಣಾಪಥ ವೆಂಬುದು ನರ್ಮದೆಯ ದಕ್ಷಿಣದ ಭೂಭಾಗವೆಂದು ಹೇಳಲಾಗಿದೆ. ರಾಜಶೇಖರನು ತನ್ನ ಬಾಲರಾಮಾಯಣದಲ್ಲಿ ರೇವನದಿಯು (ನರ್ಮದೆ) ಆರ್ಯವರ್ತಾ ಮತ್ತು ದಕ್ಷಿಣಾಪಥದ ಮೇರೆಯೆಂದು ಹೇಳಿರುವುದನ್ನು ಇಲ್ಲಿ ಸ್ಮರಿಸಬಹುದು. ಇದೇ ರಾಜಶೇಖರನ ತನ್ನ 'ಕಾವ್ಯಮೀಮಾಂಸಾ' ಕೃತಿಯಲ್ಲಿ ದಕ್ಷಿಣಾಪಥವು ನರ್ಮದೆಯಿಂದ ಮಾಹಿಷ್ಮತೀಯ ದಕ್ಷಿಣದ ಭೂಭಾಗವೆಂದು ಹೇಳುತ್ತಾನೆ. ಇವೆಲ್ಲವುಗಳ ಆಧಾರದಿಂದ ವಿಂದ್ಯಾಪರ್ವತಾವಳಿ ಗಳು ಅಥವ ಇನ್ನೂ ಖಚಿತವಾಗಿ ನರ್ಮದೆಯನ್ನು ಡೆಕ್ಕನ್ನಿನ ಉತ್ತರದ ಮೇರೆ ಎಂಬುದಾಗಿ ಪರಿಗಣಿಸುವುದೇ

ಸೂಕ್ತವೆನಿಸುತ್ತದೆ. ಆದರೆ, ನರ್ಮದೆಯು ಸಮುದ್ರದಿಂದ ಸಮುದ್ರದವರೆಗೆ ಹರಿಯುವ ನದಿಯಲ್ಲವಾದುದರಿಂದ, ಉತ್ತರದಿಂದ ದಕ್ಷಿಣದವರೆಗೆ ಗಡಿರೇಖೆಯನ್ನು ನಿರ್ಧರಿಸುವುದಾದರೆ, ಮನಿಯರಿ ಮತ್ತು ಮಹಾನದಿಗಳನ್ನು (ಒರಿಸ್ಸಾದ ಕಟಕ್ ಬಳಿಯಲ್ಲಿ ಬಂಗಾಳ ಕೊಲ್ಲಿಯನ್ನು ಸೇರುವ ನದಿಗಳು) ಸೇರಿಸಿಕೊಳ್ಳಬೇಕಾಗುತ್ತದೆ.

ಹೀಗೆ, ದಖ್ಖನ್ನಿನ ವ್ಯಾಖ್ಯಾನದಲ್ಲಿ ಇಂದಿನ ಗುಜರಾತಿನ ದಕ್ಷಿಣದ ಭಾಗ, ಇಡಿಯಾಗಿ ಮಹಾರಾಷ್ಟ್ರ, ಆಂಧ್ರಪ್ರದೇಶದ ಉತ್ತರದಲ್ಲಿರುವ ಉತ್ತರದ ಪೆನ್ನಾರ್ ವರೆಗಿನ ಭೂಪ್ರದೇಶ, ಮಧ್ಯಪ್ರದೇಶ ಮತ್ತು ಒರಿಸ್ಸಾ ರಾಜ್ಯಗಳ ಅಂದರೆ ಮಹಾನದಿಯ ದಕ್ಷಿಣದ ಕೆಲಭಾಗಗಳು ಸೇರ್ಪಡೆಯಾಗುತ್ತವೆ.

ಇದು ಡೆಕ್ಕನ್ ಬಗೆಗೆ ವೈದಿಕ ಗ್ರಂಥಗಳು, ಪುರಾಣಗಳ ಇತಿಹಾಸಕಾರರು ಹೇಳುವ ವಿವರಣೆಯಾಗಿದೆ. ಆದರೆ ಯಾವುದೇ ಇತಿಹಾಸಕಾರನಿಗೆ 'ಡೆಕ್ಕನ್' ಭೂಪ್ರದೇಶವನ್ನು ನಿಖರವಾಗಿ ಗೆರೆಕೊರೆದು ಚಿತ್ರಿಸುವುದಕ್ಕೆ ಆಗಿಲ್ಲ, ಆಗುವುದೂ ಇಲ್ಲ. ಇದು ಕೇವಲ ದಕ್ಷಿಣ (ಅಥವ ಡೆಕ್ಕನ್) ಭೂಪ್ರದೇಶದ ಕಥೆಯಷ್ಟೇ ಅಲ್ಲ, ಭಾರತದ ಇತರ ಭೌಗೋಳಿಕ ಪ್ರದೇಶಗಳ ಕಥೆಯೂ ಹೌದು. ಹಾಗಾದುದರಿಂದ 'ಡೆಕ್ಕನ್' ಪ್ರದೇಶದ ಚಾರಿತ್ರಿಕ ಅಧ್ಯಯನವನ್ನು ಗಮನಿಸುತ್ತಲೇ ಅಂತಹ ಅಧ್ಯಯನದ ಚರಿತ್ರೆಯನ್ನು ಮಂಡಿಸುವುದರಿಂದಲೂ ಚರ್ಚೆಯನ್ನು ನಿಖಿತಗೊಳಿಸುವ ಸಾಧ್ಯತೆಯಿದೆ. ಇನ್ನು ಮುಂದೆ ನಾವು ಆ ಬಗೆಗೆ ಗಮನ ಹರಿಸಬಹುದು.

'ಡೆಕ್ಕನ್' ನ ಬಗೆಗೆ ಮೊತ್ತ ಮೊದಲ ಬಾರಿಗೆ ಅಧ್ಯಯನ ನಡೆಸಿದ ಭಾರತೀಯ ಲೇಖಕರೆಂದರೆ ರಾಮಕೃಷ್ಣ ಗೋಪಾಲ ಭಾಂಡಾರಕರ (R.G. ಭಾಂಡಾರ್‌ಕರ್) ಅವರ Early History of Deccan ೧೮೮೨ ರಲ್ಲಿ ಪ್ರಕಟವಾಯಿತು. ಅವರ ಅಧ್ಯಯನವು ಬಹುಮಟ್ಟಿಗೆ ಇಂದಿನ 'ಮಹಾರಾಷ್ಟ್ರ'ವೆಂದು ಕರೆಯಲಾಗುವ ದಕ್ಷಿಣಾಪಥಕ್ಕೆ (ಡೆಕ್ಕನ್) ಸಂಬಂಧಿಸಿರುವುದಾಗಿದೆ. ಆಗಿನ ಕಾಲಕ್ಕೆ ಲಭ್ಯಮಾಹಿತಿಗಳನ್ನು ಮುಖ್ಯವಾಗಿ ಸಾಹಿತ್ಯ ಆಕರಗಳನ್ನು ಆಧರಿಸಿ ದಕ್ಷಿಣದ ಆರ್ಯಪೂರ್ವದ ಇತಿಹಾಸವನ್ನು ರಚಿಸುವ ಪ್ರಯತ್ನ ಈ ಗ್ರಂಥದಲ್ಲಿದೆ. ಭಂಡಾರಕರ್ ಅವರು ತಮಗೆ ದತ್ತವಾದ ಮಾಹಿತಿಗಳನ್ನಾಧರಿಸಿ 'ದಸ್ಯು'ಗಳು ಡೆಕ್ಕನ್ನಿನ ಮೂಲನಿವಾಸಿಗಳೆಂದು ನಿರ್ಣಯಿಸಿದ್ದಾರೆ. ದಸ್ಯುಗಳ ಬಳಿಕ ನಂದರು ಮತ್ತು ಮೌರ್ಯರು ಈ ಭಾಗವನ್ನಾಕ್ರಮಿಸಿಕೊಂಡರು. ನಂದರು ಮತ್ತು ಮೌರ್ಯರು ಆರ್ಯ ರಾಜರುಗಳಾದುದರಿಂದ ಅಲ್ಲಿಂದ ಮುಂದೆ ಈ ಭೂಪ್ರದೇಶವು ಆರ್ಯರ ಪ್ರಭಾವಕ್ಕೆ ಒಳಗಾಯಿತು-ಎಂದು ಅವರು ನಿರ್ಣೈಸಿದ್ದಾರೆ. ಆ ಬಳಿಕ ೧೯೨೨ ರಲ್ಲಿ ಪ್ರಕಟವಾದ ಜಿ.ದುಬ್ರೇಲಿ ಅವರ 'Ancient History of the Deccan' ಎಂಬುದು ಅಷ್ಟೇ ಮುಖ್ಯವಾದ ಕೃತಿಯಾಗಿದೆ. ಈ ಕೃತಿಯಲ್ಲಿ ಮೇಲೆ ಪ್ರಸ್ತಾಪಿಸಿದ ಭಾಂಡಾರಕರ್ ಅವರ ಪುಸ್ತಕದ ಬಗೆಗೆ ಕೆಲವು ಒಳನೋಟಗಳಿವೆ. ಅಂತಹ ಒಳನೋಟವೂ ಸಹಿತ ಐತಿಹಾಸಿಕ ವಾದುದಾಗಿ ಅದರ ಸಾರಾಂಶವನ್ನು ಇಲ್ಲಿ ಅನುವಾದಿಸಲಾಗಿದೆ.

"....ಈ ಪುಸ್ತಕವು ಪ್ರಸಿದ್ಧವಾದುದಾಗಿ ಅದರ ಮೌಲ್ಯವನ್ನು ಎತ್ತಿ ಹೇಳುವ ಅಗತ್ಯ ಇಲ್ಲಿಲ್ಲ. ಆದರೆ, ಇಂದೀಗ ಅದಕ್ಕೆ ಒಂದು ಕೊರತೆ ಇದೆ; ಇದೀಗ ಆ ಗ್ರಂಥವು ಇಪ್ಪತ್ತೈದು ವರ್ಷಗಳಿಗಿಂತ ಹಳೆಯದಾಗಿದೆಯಲ್ಲದೆ, ಗತವರ್ಷಗಳಲ್ಲಿ ಅನೇಕ ಮಹತ್ತ್ವದ ಶೋಧನೆಗಳಾಗಿವೆ. ಹಾಗೆ ನೋಡಿದರೆ ಈ ಕೃತಿಯು ಪ್ರಾಚೀನ ದಕ್ಷಿಣಾಪಥದ (ಡೆಕ್ಕನ್) ಇತಿಹಾಸವನ್ನು ಒಳಗೊಂಡಿಲ್ಲ. ಏಕೆಂದರೆ ಆಗ ದೊರೆತ್ತಿದ್ದ ಮಾಹಿತಿಗಿಂತ ಇಂದಿನ ಮಾಹಿತಿಯು ವಿಪುಲವಾಗಿದೆ. ಹಾಗೆಯೇ ಆ ಪುಸ್ತಕದಲ್ಲಿ ಗುರುತಿಸಲಾದ ಬಾಂಬೆ ಪ್ರೆಸಿಡೆನ್ಸಿಯಷ್ಟೇ ಡೆಕ್ಕನ್ ಭೂ ಪ್ರದೇಶವಲ್ಲ.

ಹಾಗಾದುದರಿಂದ ಇಂದು ಡೆಕ್ಕನ್ನಿನ ಇತಿಹಾಸವೆಂಬುದು ಹೊಸ ಅಧ್ಯಯನವೇ ಆಗಿದೆ. ಇದಕ್ಕೆ ಸಂಬಂಧಿಸಿದಂತೆ ಕ್ರಿ.ಪೂ.೨೬೧ ರಿಂದ ಕ್ರಿ.ಶ. ೬೧೦ ರವರೆಗಿನ ಡೆಕ್ಕನ್ನಿನ ಇತಿಹಾಸವೆಂದು ತಿಳಿಯ ಬಯಸುವ ವಿದ್ಯಾರ್ಥಿಗಳಿಗೆ ಪ್ರಯೋಜನಕಾರಿಯಾಗುವ ಯಾವ ಗ್ರಂಥಗಳೂ ಈಗ ಇಲ್ಲ. ಈ ಕಾಲಘಟ್ಟದ ಇತಿಹಾಸವು ತುಂಬ ಸಂದಿಗ್ಧವಾದುದಾಗಿದೆ. ಆದರೆ ಈ ಸಂಬಂಧದಲ್ಲಿ ನಮಗೆ ಶಾಸನದ ಕೊರತೆಯೇನಿಲ್ಲ. ಏಕೆಂದರೆ ಕದಂಬ ಸಾಮ್ರಾಜ್ಯಕ್ಕೆ ಸಂಬಂಧಿಸಿರುವಂತೆಯೇ ನಮ್ಮಲ್ಲಿ ಮೂವತ್ತಕ್ಕಿಂತಲೂ ಹೆಚ್ಚು ತಾಮ್ರ ಶಾಸನಗಳಿವೆ. ಹಾಗೆಯೇ ಪಲ್ಲವ ಮತ್ತು ಗಂಗರ ಬಗೆಗೂ ವಿಪುಲ ಮಾಹಿತಿ ನಮ್ಮಲ್ಲಿದೆ. ಹೀಗಿರುವಾಗ ಸಾಮ್ರಾಜ್ಯಗಳು ಕಾಲಾನುಕ್ರಮಣಿಕೆಯು ಇಷ್ಟೊಂದು ಗೊಂದಲಕಾರಿ ಯಾಗಿರುವುದು ಏತಕ್ಕೆ? ಕಾರಣವಿಷ್ಟೇ: ಅವುಗಳೆಲ್ಲವನ್ನು ಒಂದೆಡೆ ಕಲೆಹಾಕುವ ಮೂಲಕವೇ ಅಂತಹ ಒಂದು ಸಾಂಗತ್ಯವನ್ನು ನಾವು ಸಾಧಿಸಬೇಕಾಗಿದೆ. ಹಾಗಾದಾಗ ನಮಗೆ ಕತ್ತಲೆಯಲ್ಲಿ ಬೆಳಕಿನ ರೇಖೆ ಕಂಡೀತು. ಆ ಮೂಲಕ ಈವರೆಗೆ ಯಾವುದು ನಮಗಿನ್ನೂ ಸಿಕ್ಕಿಲ್ಲವೋ-ಆ ಪ್ರಾಚೀನ ದಕ್ಕನ್ನಿನ ಇತಿಹಾಸ ದೊರೆಯಬಹುದು. ಅಂತಹ ಅಧ್ಯಯನವು ಮುಖ್ಯವಾದುದು. ಅದು ವಿಸ್ತಾರವಾದ ಭೂಪ್ರದೇಶದ ಒಂಬತ್ತು ಶತಮಾನಗಳು ವೈಭವಯುತ ಇತಿಹಾಸವೇ ಆದುದಾಗಿದೆ...... (ಪು. ೬- ೭)"

ಹೀಗೆ ಈಕೃತಿಯಲ್ಲಿ ಭಾಂಡಾರಕರ ಅವರ ಕೃತಿಯ ಕೊರತೆಗಳನ್ನು ಗಮನಿಸಲಾಗಿದೆ ಅನ್ನುವುದಕ್ಕಿಂತಲೂ ಆ ಕೃತಿಯ ಅಧ್ಯಯನದ ಮಿತಿಗಳನ್ನು ಮೀರುತ್ತ ಹಿಂದಿನ ಅಧ್ಯಯನವನ್ನು ಸಮಕಾಲೀನಗೊಳಿಸಲಾಗಿದೆ ಎಂದೇ ತಿಳಿಯಬೇಕಾಗಿದೆ. ಪ್ರಸ್ತುತ ಕೃತಿಯಲ್ಲಿ ಡೆಕ್ಕನ್ ಭೂಪ್ರದೇಶವನ್ನು ತುಂಬ ವಿಶಾಲಾರ್ಥದಲ್ಲಿ ಗ್ರಹಿಸಲಾಗಿದೆ. ಅದರ ಉತ್ತರದ ಮೇರೆಯಾಗಿ ನರ್ಮದಾ ಮತ್ತು ಮಹಾನದಿಗಳಿದ್ದರೆ, ಪೂರ್ವದಲ್ಲಿ ಬಂಗಾಳ ಕೊಲ್ಲಿ ಪಶ್ಚಿಮದಲ್ಲಿ ಅರಬ್ಬೀ ಸಮುದ್ರ; ದಕ್ಷಿಣದಲ್ಲಿ ನೀಲಗಿರಿ ಪರ್ವತ ದಕ್ಷಿಣ ಪೆನ್ನಾರ್ ಇವುಗಳು ಮೇರೆಗಳಾಗಿವೆ. ಈ ಗ್ರಂಥದಲ್ಲಿ ವಿಸ್ತೃತವಾಗಿ ಈ ಪ್ರದೇಶದ ರಾಜಕೀಯ ಚರಿತ್ರೆಯನ್ನು ವಿವರಿಸಲಾಗಿದೆ. ಮುಖ್ಯವಾಗಿ ಈವರೆಗೆ ದೊರೆತ ಪುರಾತತ್ವ ಮತ್ತು ಶಾಸನಾಧಾರಿತ ಮಾಹಿತಿಗಳನ್ನು ಇಲ್ಲಿ ವಿಫುಲವಾಗಿ ಬಳಸಿಕೊಳ್ಳಲಾಗಿದೆ.

ಇದಾದ ಮೇಲೆ ೧೯೮೨ ರಲ್ಲಿ ಜಿ. ಯಝ್ದನಿ (Yazdani) ಅವರ ಸಂಪಾದನೆಯಲ್ಲಿ

ಎರಡು ಸಂಪುಟಗಳಲ್ಲಿ ಪ್ರಕಟಗೊಂಡ 'The Early History of the Decean (೧೯೮೨)' ಗಮನಾರ್ಹ ಕೃತಿಯಾಗಿದೆ. ಈ ಕೃತಿಯಲ್ಲಿ ನಿರ್ದಿಷ್ಟವಾದ ಮತ್ತು ರಾಜಕೀಯವಾದ ವ್ಯಾಖ್ಯಾನವನ್ನು ಅನುಸರಿಸಿರುವುದಾಗಿ, ಮೇಲಿನ ಕೃತಿಗಳಲ್ಲಿ ಈವರೆಗೆ ಸೇರ್ಪಡೆಯಾಗಿರದ ನಿಝಾಮನ ಸಂಸ್ಥಾನದ ಪ್ರದೇಶಗಳನ್ನೂ ಅಧ್ಯಯನ ಮಾಡಲಾಗಿದೆ. ಗ್ರಂಥದ ಪ್ರಸ್ತಾವನೆಯಲ್ಲಿಯೇ ಹೇಳಿರುವಂತೆ ಹೈದ್ರಾಬಾದ್ ರಾಜ್ಯವನ್ನು ಸೇರಿಸಿಕೊಂಡಂತೆ ಒಂದು ವ್ಯವಸ್ಥಿತವಾದ ಡೆಕ್ಕನ್ನಿನ ಇತಿಹಾಸ ರಚನೆಯೇ ಈ ಸಂಪುಟಗಳ ಗುರಿಯಾಗಿದೆ. ಈ ಅಧ್ಯಯನದ ವ್ಯಾಖ್ಯಾನುಸಾರ ವರ್ತಮಾನದ ರಾಜ್ಯಗಳಾದ ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರಪ್ರದೇಶಗಳು ಒಳಗೊಳ್ಳುತ್ತವೆ. ಉಳಿದಂತೆ ಬೇರೆಬೇರೆ ಅಧ್ಯಾಯಗಳು ಬೇರೆಬೇರೆ ರಾಜಮನೆತನಗಳು ರಾಜ್ಯಾಡಳಿತದ ಮೇರೆಗಳನ್ನು ಹಾಗೂ ದಕ್ಷಿಣದ ಭೂಪ್ರದೇಶಕ್ಕೆ ಅವುಗಳ ಐತಿಹಾಸಿಕ ಕೊಡುಗೆಗಳನ್ನೂ ಚರ್ಚಿಸುತ್ತವೆ.

ಹಾಗಿದ್ದಾಗಲೂ ಈ ಸಂಪುಟಗಳಲ್ಲಿ ಅವರು ದಕ್ಷಿಣ ಭಾರತವು ದಕ್ಷಿಣ ಪ್ರಸ್ಥಭೂಮಿಯ ಒಂದು ಐತಿಹಾಸಿಕ ಭೂಪ್ರದೇಶವಾಗಿದ್ದು, ಉತ್ತರದಲ್ಲಿ ಸಹ್ಯಾದ್ರಿ ಪರ್ವತ ಮತ್ತು ಮಹೇಂದ್ರಗಿರಿಗಳು ಹಾಗೂ ಮಹಾನದಿ ಮತ್ತು ಗೋದಾವರಿನದಿಗಳಿಂದ ಆವೃತವಾಗಿ, ದಕ್ಷಿಣದಲ್ಲಿ ಕೃಷ್ಣಾ ಮತ್ತು ತುಂಗಭದ್ರಾ ನದಿ ಪ್ರದೇಶವನ್ನೊಳಗೊಂಡುದಾಗಿ, ಪಶ್ಚಿಮದಲ್ಲಿ ಅರಬ್ಬೀ ಸಮುದ್ರದಿಂದ ಆರಂಭಿಸಿ ಪೂರ್ವದಲ್ಲಿ ಬಂಗಾಳ ಕೊಲ್ಲಿಯ ವರೆಗೆ ಅದರ ವ್ಯಾಪ್ತಿಯೆಂದು ಪರಿಗಣಿಸಲಾಗಿದೆ. ಆದರು, ಭಾಂಡಾರಕರ್ ಅವರ ಹಾಗೆಯೇ ಈ ಅಧ್ಯಯನದಲ್ಲಿ ಡೆಕ್ಕನ್ ಭೂಪ್ರದೇಶದಲ್ಲಿ ಆರ್ಯರ ಮುಖ್ಯ ನೆಲೆಗಳು ಸ್ಥಾಪನೆ ಗೊಂಡುದು, ಆ ಕಾರಣದಿಂದಾಗಿಯೇ ಈ ಭೂಪ್ರದೇಶದಲ್ಲಿ ಆರ್ಯಸಂಸ್ಕೃತಿ ಪಸರಿಸಿದುದು, ಮಾತ್ರವಲ್ಲದೆ ಆ ಮೂಲಕ ದಕ್ಷಿಣದ ಸಾಂಸ್ಕೃತಿಕ ಪರಿಸರದಲ್ಲಿ ಆದ ಪಲ್ಲಟಗಳು, ಜತೆಗೆ ಆರ್ಯರ ಭಾಷಿಕ ಪ್ರಭಾವಗಳನ್ನು ಚರ್ಚಿಸಲಾಗಿದೆ. ಬೇರೆ ಬೇರೆ ಭಾಷೆಗಳ ಪ್ರಭಾವ ಎಷ್ಟರಮಟ್ಟಿಗಾಯಿತೆಂಬುದಕ್ಕೆ ಮರಾಠಿಯು ಪಶ್ಚಿಮ ಡೆಕ್ಕನ್ನಿನಲ್ಲಿ ವ್ಯಾಪಕವಾಗಿ ಪಸರಿಸಿದು ದನ್ನು ಇಲ್ಲಿ ನಿದರ್ಶನವಾಗಿ ಎತ್ತಿಕೊಳ್ಳಲಾಗಿದೆ. ಆ ಮೇಲೆ ಬಂದ 'Studies in Historical Geography and Ethnography of Decan' (ಸುಮತಿ ಮುಲಯ್, ೧೯೭೨) ಕೃತಿಯಲ್ಲಿ 'ಡೆಕ್ಕನ್' ಎಂಬ ಭೂಪ್ರದೇಶಕ್ಕೆ ಸಂಬಂಧಿಸಿದ ವ್ಯಾಖ್ಯೆಯನ್ನು ವಿಶಾಲಾರ್ಥದಲ್ಲಿ ಗ್ರಹಿಸುವ ಪ್ರಯತ್ನವಿರುವುದಾದರೂ, ಅಲ್ಲಿಯೂ ಸೀಮಿತವಾದ ದೃಷ್ಟಿ ಕೋನವೇ ಪೂರ್ವಗ್ರಹೀತವಾಗಿರುವುದರಿಂದ 'ಡೆಕ್ಕನ್' ಎಂಬುದನ್ನು ಇಂದಿನ ಮಹಾರಾಷ್ಟ್ರ ವೆಂದೇ ಪರಿಗಣಿಸಬಹುದಾಗಿದೆ.

ಪ್ರೊ. ನೀಲಕಂಠ ಶಾಸ್ತ್ರೀ ಅವರ 'History of South india' (೧೯೮೨) ಎಂಬುದು ಅನಂತರದ ಮುಖ್ಯವಾದ ಕೃತಿಯಾಗಿದೆ. ಶಾಸ್ತ್ರಿಯವರು ಇಡಿಯಾಗಿ ದಕ್ಷಿಣಭಾರತವನ್ನು ಈ ಅಧ್ಯಯನ ಕಕ್ಷೆಯಲ್ಲಿ ಒಳಗೊಳಿಸಿದ್ದಾರೆ. ಆರ್.ಜಿ. ಭಾಂಡಾರಕರ ಅವರ ಬಳಿಕ ಡೆಕ್ಕನ್ನಿನ ವ್ಯಾಪಕವಾದ ಅಧ್ಯಯನ ನಡೆಸಿದ ಇನ್ನೊಂದು ಕೃತಿಯಿದು. ಆದರೆ, ಹಿಂದಿನ

ಕೃತಿಗಳ ಹಾಗೆಯೇ ದಕ್ಷಿಣ ಭಾರತದಲ್ಲಿ ಆರ್ಯರ ಪ್ರಭಾವವನ್ನು ಗುರುತಿಸುವ ಸಂಪ್ರದಾಯವನ್ನೇ ಇಲ್ಲಿ ಅನುಸರಿಸಲಾಗಿದೆ. ನೀಲಕಂಠ ಶಾಸ್ತ್ರಿಯವರ ಪ್ರಕಾರ "ದಕ್ಷಿಣವು ಜಗತ್ತಿನಲ್ಲಿಯೇ ಅತ್ಯಂತ ಪ್ರಾಚೀನವಾದ ಜನವಸತಿ ಹೊಂದಿರುವ ಒಂದು ಭೂಭಾಗ ವಾಗಿದ್ದು, ಅದರ ಪ್ರಾಚೀನ ಪುರಾತತ್ವ ನೆಲೆಗಳು ಮತ್ತು ನೆರೆಯ ರಾಜ್ಯಗಳೊಂದಿಗೆ ಅದರ ಸಂಬಂಧಗಳನ್ನು ಬಹುಮಟ್ಟಿಗೆ ಗುರುತಿಸಬಹುದಾಗಿರುವುದರಿಂದ ಜಗತ್ತಿನ ನಾಗರೀ ಕತೆಗಳ ಇತಿಹಾಸದಲ್ಲಿ ಅದೊಂದು ಮುಖ್ಯವಾದ ಅಧ್ಯಾಯವೇ ಆದೀತು" (ಪು.೩೦). ಈಗಾಗಲೇ ಹೇಳಿರುವಂತೆ, ಭಾಂಡಾರಕರ್ ಹಾಗೆಯೇ ದಕ್ಷಿಣ ಭಾರತದಲ್ಲಿ ಆರ್ಯರ ನೆಲೆಗಳು, ಸಾಂಸ್ಕೃತಿಕ ಪ್ರಭಾವಗಳನ್ನು ಗುರುತಿಸುವಲ್ಲಿ ಶಾಸ್ತ್ರಿಯವರು ಮುಖ್ಯವಾಗಿ ಸಾಹಿತ್ಯ ಆಕರಗಳನ್ನೇ ಆಧರಿಸುತ್ತಾರೆ. ಈಗಾಗಲೇ ಹೇಳಿರುವಂತೆ ಐತಿಹಾಸಿಕವಾಗಿ ಡೆಕ್ಕನ್, ಅಥವ ದಕ್ಷಿಣ ಭಾರತವೆಂಬ ಪರಿಕಲ್ಪನೆಗಳಿಗೆ ಕಾಲಕಾಲಕ್ಕೆ ಬೇರೆ ಬೇರೆ ಅರ್ಥಗಳು ಪ್ರಾಪ್ತವಾಗಿರುವಂತೆ ತತ್ಸಂಬಂಧಿಯಾದ ಅಧ್ಯಯನಗಳಲ್ಲಿಯೂ ಭಿನ್ನಾಭಿಪ್ರಾಯವಿದೆ. ಅಧ್ಯಯನಕ್ಕೆ ಸಂಬಂಧಿಸಿದಂತೆ ಈವರೆಗೆ ಪ್ರಸ್ತಾಪಿಸಿದ ಮುಖ್ಯ ಗ್ರಂಥಗಳಲ್ಲಿ ದಕ್ಷಿಣ ಭಾರತಕ್ಕೆ ಹೆಚ್ಚುಗಮನ ನೀಡಲಾಗಿದೆಯಲ್ಲದೆ ಡೆಕ್ಕನ್ನನ್ನು ಅದರ ಒಂದು ಅಂಗಭಾಗವೆಂದು ಪರಿಗಣಿಸಲಾಗಿದೆ-ಎಂದೇ ಅಭಿಪ್ರಾಯ ಪಡಲಾಗಿದೆ. ಅಲೋಕ ಪದಶರ ಸೇನ್ ಅವರು 'Social and Economic History of Early Decean' ಕೃತಿಯಲ್ಲಿ ಅಂತಹ ಅಧ್ಯಯನಗಳಿಗೆ ಸಂಬಂಧಿಸಿದಂತೆ ಹೀಗೆ ಹೇಳಿದ್ದಾರೆ.:-

"ದಕ್ಷಿಣ ಭಾರತದ ಅಧ್ಯಯನಗಳಲ್ಲಿ ವಿಂಧ್ಯಾದ ದಕ್ಷಿಣದ ಭೂಪ್ರದೇಶಗಳ ಇತಿಹಾಸವನ್ನು ದಕ್ಷಿಣ ಭಾರತದ ಹಿನ್ನೆಲೆಯಲ್ಲಿಯೇ ಗ್ರಹಿಸುವುದರಿಂದ, ಡೆಕ್ಕನ್ನಿನ ಬಗೆಗೆ ಸರಳವಾದ ಗೃಹೀತಗಳನ್ನೇ ಇಟ್ಟುಕೊಳ್ಳಲಾಗಿದೆ. ನಮ್ಮ ಅಭಿಪ್ರಾಯದಂತೆ ದಕ್ಷಿಣ ಭಾರತ ವೆಂಬುದು ವಿವಿಧ ಉಪಪ್ರಾಂತ್ಯಗಳನ್ನೊಳಗೊಂಡ ಒಂದು ಸಂಕೀರ್ಣವಾದ ಭೌಗೋಳಿಕ ವಾದ ಅಸ್ಮಿತೆಯಾಗಿದೆ. ಆದರೆ, ಖಂಡಿತವಾಗಿಯೂ ಅದನ್ನು ಒಂದು ಐತಿಹಾಸಿಕ ಅಸ್ಮಿತೆ ಯೆಂಬಂತೆ ನೋಡಲಾಗುವುದಿಲ್ಲ. ಕಳೆದ ೧೭೫ ವರ್ಷಗಳ ಅವಧಿಯಲ್ಲಿ ಬಂದ ಪ್ರತ್ಯೇಕವಾದ ಅಧ್ಯಯನಗಳನ್ನೇ ದಕ್ಷಿಣ ಭಾರತದ ಅಧ್ಯಯನವೆಂಬಂತೆ ಪರಿಗಣಿಸುವ ಪರಿಕ್ರಮವೊಂದನ್ನು ಸಹಿತ ಈಗಾಗಲೇ ಗಮನಿಸಲಾಗಿದೆ. ಅಂತಹ ವ್ಯಾಖ್ಯಾನಗಳಲ್ಲಿ ಆಕರಗಳಿಗೆ ಸಂಬಂಧಿಸಿದ ದೃಷ್ಟಿಕೋನ ಇಲ್ಲವೇ ಇಡಿಯಾಗಿ ಭೌಗೋಳಿಕ ಪ್ರದೇಶವನ್ನು ಗ್ರಹಿಸುವ ಅಖಂಡ ದೃಷ್ಟಿಕೋನವಾಗಲೀ ಪ್ರಧಾನವಾಗಿರುವುದು ಕಂಡುಬರುತ್ತದೆ. ನಮ್ಮ ಗಮನಕ್ಕೆ ಬಂದಂತೆ ಇಂತಹ ಅಧ್ಯಯನಗಳ ಪ್ರಕ್ರಿಯೆಗನುಸಾರವಾಗಿ ದಕ್ಷಿಣ ಭಾರತದ ಉತ್ತರಭಾಗವಾದ ಡೆಕ್ಕನ್ ಸಾಮಾನ್ಯವಾಗಿ ಅವಜ್ಞೆಗೀಡಾಗುವುದಿದೆ. ಡೆಕ್ಕನ್ ಭೂಪ್ರದೇಶವು ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುವುದಾಗಿ ಕಾಲಕಾಲಕ್ಕೆ ಆಳಿದ ರಾಜ ಮಹಾರಾಜರಿಂದಾಗಿ ಕಾಲಾನುಕಾಲದಲ್ಲಿ ಅಲ್ಲಿ ಪಲ್ಲಟನೆಗಳುಂಟಾಗಿವೆ. (ಪು ೩- ೪)

**ದಕ್ಷಿಣ ಭಾರತ:** ಇದೀಗ ನಾವು ಈ ಚರ್ಚೆಯ ಕೊನೆಯ ಭಾಗಕ್ಕೆ ಬಂದಂತಾಗಿದೆ.

ದ್ರಾವಿಡ ಮತ್ತು ಡೆಕ್ಕನ್ ವಿಷಯವಾಗಿ ಚರ್ಚಿಸುತ್ತಿದ್ದಾಗ ಪ್ರಾಸಂಗಿಕವಾಗಿ ದಕ್ಷಿಣ ಭಾರತದ ಪ್ರಸ್ತಾಪನೆಯೂ ಆಗಿದೆ. ಅಥವಾ ಅಂತಹ ವಿವರಗಳಲ್ಲಿ ಈಗಾಗಲೇ ದಕ್ಷಿಣ ಭಾರತದ ಬಗೆಗೆ ಆರಂಭಿಕ ಚರ್ಚೆಗಳನ್ನು ಮಾಡಲಾಗಿದೆ. ಈಗ ಆ ವಿಷಯಗಳನ್ನು ಮತ್ತೆ ಪುನರಾವರ್ತಿಸದೆ, ಉಳಿದ ವಿಷಯಗಳ ಬಗೆಗೆ ಗಮನ ಹರಿಸಬಹುದಾಗಿದೆ.

ಈಗಾಗಲೇ ಪ್ರಾಸಂಗಿಕವಾಗಿ ಉಲ್ಲೇಖಿಸಿದಂತೆ ಪುರಾಣಗಳ ಕಾಲದಿಂದಲೂ ಅಖಂಡವಾದ ಭಾರತವನ್ನು 'ಉತ್ತರಾಪಥ ಮತ್ತು ದಕ್ಷಿಣಾಪಥ' ಎಂಬ ಎರಡು ಭೌಗೋಳಿಕ ನೆಲೆಗಳಲ್ಲಿ ವಿವರಿಸಲಾಗಿದೆ. ನಾವೀಗ ದಕ್ಷಿಣ ಭಾರತವೆಂದು ನಿರ್ದೇಶಿಸುತ್ತಿರುವ ಭೂಪ್ರದೇಶವೇ ಅಂದಿನ ದಕ್ಷಿಣಾಪಥವಾಗಿತ್ತು. ಆಂದಿನಿಂದ ಇಂದಿನವರೆಗೆ ದಕ್ಷಿಣ ಭಾರತವನ್ನು ಸಂಕೀರ್ಣವಾದ ಭೌಗೋಳಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯವೆಂದೇ ಪರಗಣಿಸಲಾಗಿದೆ. ಉತ್ತರಾಪಥವೇ ಆಗಲೀ ದಕ್ಷಿಣಾಪಥವೇ ಆಗಲೀ, ಅಥವಾ ಉತ್ತರ ಭಾರತವೇ ಆಗಲೀ ದಕ್ಷಿಣ ಭಾರತವೇ ಆಗಲೀ, ನಿಖರವಾಗಿ ಅದರದೇ ಆದ ಗುಣಲಕ್ಷಣಗಳನ್ನು ನಿರ್ಧರಿಸುತ್ತ ಆ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುವುದು ಅಷ್ಟೊಂದು ಸುಲಭವಾದ ವಿಷಯವೇನಲ್ಲ. ದಕ್ಷಿಣ ಭಾರತದ ಬಗೆಗೆ ಅಧ್ಯಯನ ಮಾಡಿದ ವಿದ್ವಾಂಸರು ಈ ಸಮಸ್ಯೆಯನ್ನು ಪರಿಗಣಿಸಿದ್ದಾರೆ. ಮುಖ್ಯವಾಗಿ ವಿವಿಧ ಜಾತಿ, ಭಾಷೆ, ಧರ್ಮ ಸಂಸ್ಕೃತಿ ಹಾಗೆಯೇ ಭಿನ್ನಭಿನ್ನ ಭೌಗೋಳಿಕ ವಲಯಗಳನ್ನೊಳಗೊಂಡ ವಿಸ್ತೃತವಾದ ಭಾರತವನ್ನು ವಿವರಿಸುವುದಕ್ಕೆ ಒಂದು ದೃಷ್ಟಿಕೋನ, ಒಂದು ವ್ಯಾಖ್ಯಾನ ಸಾಕಾಗಲಾರದು ಎಂಬುದರಿಂದಲೇ 'ದಕ್ಷಿಣ ಭಾರತದ' ಅಧ್ಯಯನವು ಪ್ರತ್ಯೇಕವಾದ ಒಂದು ಜ್ಞಾನಶಾಖೆಯಾಗಿಯೇ ರೂಪುಗೊಳ್ಳಲು ಕಾರಣವಾಗಿದೆ. ಭಾರತದ ಇತಿಹಾಸ ಅಥವ ಭಾರತದ ಅಧ್ಯಯನವೆಂಬುದು ಉತ್ತರ ಭಾರತಕ್ಕಷ್ಟೇ ಸೀಮಿತವಾದ ಕಾಲಘಟ್ಟದಲ್ಲಿ ಹಾಗೂ ದಕ್ಷಿಣ ಭಾರತವು ಅಧ್ಯಯನಕಾರರಿಗೆ ಅಪರಿಚಿತವಾದುದಾಗಿತ್ತು. ದಕ್ಷಿಣ ಭಾರತದ ಇತಿಹಾಸಕ್ಕೆ ಸಂಬಂಧಿಸಿದಂತೆ ಇದ್ದ ಅಸ್ಪಷ್ಟತೆಗಳೇ ಕಾರಣವಾಗಿದ್ದುವು. ದಕ್ಷಿಣ ಭಾರತದ ಇತಿಹಾಸಕ್ಕೆ ಸಂಬಂಧಿಸಿದಂತೆ ಕ್ರಿ.ಶ. ೬೦೦ ರ ಪೂರ್ವದ ಬಗೆಗೆ ಇದ್ದ ಮಾಹಿತಿಯೇ ಅಸ್ಪಷ್ಟವಾಗಿತ್ತು. ಆದರೆ, ಉತ್ತರ ಭಾರತಕ್ಕೆ ಸಂಬಂಧಿಸಿದಂತೆ ಇದಕ್ಕಿಂತಲೂ ೧೭ನೆಯ ಶತಮಾನಗಳ ಪೂರ್ವದ ವರೆಗಿನ ಇತಿಹಾಸದ ಸ್ಪಷ್ಟ ಹೆಜ್ಜೆಗುರುತುಗಳು ಅಧ್ಯಯನದ ಕಣ್ಣುಗಳಿಗೆ ಕಾಣುತ್ತಿದ್ದುವು. ಇದು ದಕ್ಷಿಣ ಭಾರತದ ಅಧ್ಯಯನಕಾರರಿಗೆ ಗಮನಾರ್ಹ ಸಂಗತಿಯಾದುದಾಗಿ ಅವರು ದಕ್ಷಿಣ ಭಾರತದ ಬಗೆಗೆ ಅಧ್ಯಯನ ಕೈಗೊಳ್ಳುವುದಕ್ಕೆ ಪ್ರೇರಣೆಯಾಯಿತು.

ಹಾಗಾದುದರಿಂದ ದಕ್ಷಿಣ ಭಾರತ ಯಾವುದೇ ರೀತಿಯ ಅಧ್ಯಯನವೆಂದಾಗ ಅದು ಸ್ಥೂಲವಾದ ಅರ್ಥದಲ್ಲಿ ಭಾರತ ಬಗೆಗಿನ ಅಧ್ಯಯನವೇ ಆಗುತ್ತದೆ. ಈಗಾಗಲೇ ಹೇಳಿರುವಂತೆ ದಕ್ಷಿಣ ಭಾರತಕ್ಕೆ ಸಂಬಂಧಿಸಿದಂತೆ ಅಧ್ಯಯನ ನಡೆಸಿರುವುದರಲ್ಲಿ ಇತಿಹಾಸಕಾರರಿಗೆ ಮೊದಲ ಮನ್ನಣೆ ಸಲ್ಲುತ್ತದೆ. ದಕ್ಷಿಣ ಭಾರತವು ಮನುಕುಲದ ಪ್ರಾಚೀನ ರಾಜಧಾನಿ, ಎಂಬ ದೃಷ್ಟಿಯೊಂದಿಗೆ ಅದು ಜಗತ್ತಿನ ಇತಿಹಾಸದ ಒಂದು ಅಧ್ಯಾಯವೂ

ಆಗುತ್ತದೆ. (ನೋಡಿ ನೀಲಕಂಠ ಶಾಸ್ತ್ರೀ, A History of South idndia ಪು.೪) ಎಂಬುದು ಪೂರ್ವಸೂರಿಗಳ ಮತವಾಗಿದೆ. ಹಾಗಾದುದರಿಂದ, ಒಂದರ್ಥದಲ್ಲಿ ದಕ್ಷಿಣ ಭಾರತದ ಅಧ್ಯಯನವು ಉತ್ತರ ಭಾರತದ ಅಧ್ಯಯನಕ್ಕೆ ಪರ್ಯಾಯವಾಗಿಯೂ ಇತಿಹಾಸದ ಬಗೆಗೆ ಪ್ರಜ್ಞಾಪೂರ್ವಕವಾಗಿಯೂ ಮೂಡಿರುವ ಜ್ಞಾನಶಾಖೆಯಾಗಿದೆ.

ದ್ರಾವಿಡ ಮತ್ತು ಡೆಕ್ಕನ್ ಪರಿಕಲ್ಪನೆಗಳ ಅಭಿಪ್ರಾಯ ಭೇದಗಳು 'ದಕ್ಷಿಣ ಭಾರತ' ಎಂಬ ಪರಿಕಲ್ಪನೆಯಲ್ಲಿ ಕಂಡುಬರುವುದಿಲ್ಲ. ದಕ್ಷಿಣ ಭಾರತವೆಂಬುದು ಇಡಿಯ ದಕ್ಷಿಣದ ಪ್ರಸ್ಥಭೂಮಿಗೆ ಅನ್ವಯಿಸುವ ಪರಿಭಾಷೆಯಾಗಿ, ಮುಖ್ಯವಾಗಿ ಭೌಗೋಳಿಕ ಪರಿಭಾಷೆಯಾಗಿ ಬಹುಮಟ್ಟಿಗೆ ಒಪ್ಪಿತವಾಗಿದೆ. ಇತಿಹಾಸಿಕವಾಗಿ ಇದನ್ನು ಬೃಹತ್ ದ್ರಾವಿಡದೇಶ ಎಂಬುದಾಗಿ ಕರೆಯಲಾಗಿದೆ. ಪ್ರಾಚೀನ ಉಲ್ಲೇಖಗಳಲ್ಲಿರುವಂತೆಯೇ ಬೃಹತ್ ದ್ರಾವಿಡ ದೇಶದ ಪೂರ್ವದಲ್ಲಿ ಪೂರ್ವಸಮುದ್ರ (ಬಂಗಾಳಕೊಲ್ಲಿ) ಪಶ್ಚಿಮದಲ್ಲಿ ಅಪರ ಸಮುದ್ರ ಅಥವ ರತ್ನಾಕರ (ಅರಬ್ಬೀ ಸಮುದ್ರ) ಹಾಗೂ ದಕ್ಷಿಣದಲ್ಲಿ ಮಧ್ಯೋದಧಿಗಳು ಮೇರೆಯಾಗಿವೆ. ವಿಂದ್ಯಪರ್ವತವು ಐತಿಹಾಸಿಕವಾಗಿ ದಕ್ಷಿಣ ಭಾರತದ ಉತ್ತರಮೇರೆಯಾಗಿತ್ತಲ್ಲದೆ ಬಹುಮಟ್ಟಿಗೆ ಈಗಲೂ ಅದನ್ನು ಹಾಗೆಯೇ ಪರಿಗಣಿಸಲಾಗುತ್ತದೆ. ಈಗಾಗಲೇ ಹೇಳಿರುವಂತೆ ಉತ್ತರಾಪಥ ಮತ್ತು ದಕ್ಷಿಣಾಪಥವೆಂಬುದಾಗಿ ಪುರಾಣಗಳ ಕಾಲದಲ್ಲಿ ಭಾರತವನ್ನು ವಿಭಜನೆ ಮಾಡಿರುವಂತೆಯೇ ಅಧ್ಯಯನದ ಅನುಕೂಲಕ್ಕಾಗಿಯೂ 'ಗಂಗಾನದಿ ಬಯಲು' ಮತ್ತು 'ಕೋರಮಂಡಲ ಬಯಲು' ಎಂಬುದಾಗಿ ವಿಂಗಡಿಸಲಾಗಿದೆ. ಮುಖ್ಯವಾಗಿ ನಾಗರಿಕತೆಯ ದೃಷ್ಟಿಯಿಂದ ಇದನ್ನು 'ಹಿಂದೂ ಆರ್ಯ ಭಾರತ' ಮತ್ತು 'ಹಿಂದೂ-ದ್ರಾವಿಡ ಭಾರತ' ಎಂಬುದಾಗಿ ಪರಿಗಣಿಸಲಾಗುತ್ತದೆ. (ನೋಡಿ Burtain Stain p.32) ಇದಕ್ಕೆ ಕೇವಲ ಭಾರತದ ಭೌಗೋಳಿಕ ಲಕ್ಷಣವಷ್ಟೇ ಕಾರಣವಲ್ಲ. ಬದಲಾಗಿ ದಕ್ಷಿಣದಲ್ಲಿ ಕೃಷ್ಣ ನದಿಯ ಮತ್ತು ಉತ್ತರದಲ್ಲಿ ಕೈಮೂರ್ ಪರ್ವತಾವಳಿಗಳ ನಡುವಣ ಸಂಸ್ಕೃತಿ ಮತ್ತು ರಾಜಕೀಯ ನಡಾವಳಿಗಳು ಕಾರಣವಾಗಿವೆ.

ಈ ಲೇಖನದಲ್ಲಿ ಆರಂಭದಿಂದಲೂ ದ್ರಾವಿಡ ಅಧ್ಯಯನ ಮತ್ತು ದಕ್ಷಿಣ ಭಾರತದ ಅಧ್ಯಯನದ ನಡುವೆ ಒಂದು ಸಂಬಂಧವನ್ನು ಕಲ್ಪಿಸಲು ಪ್ರಯತ್ನಿಸಲಾಗಿದೆ. ಆದುದರಿಂದ ದ್ರಾವಿಡ- ಡೆಕ್ಕನ್-ದಕ್ಷಿಣ ಭಾರತ ಎಂಬ ಪರಿಕಲ್ಪನೆಗಳ ವಿವರಿಸುವಾಗ ಎರಡು ಮಾದರಿಗಳನ್ನು ಉದ್ದಕ್ಕೂ ಅನುಸರಿಸಲಾಯಿತು. ಆ ಪರಿಕಲ್ಪನೆಯ ಇತಿಹಾಸ ಹಾಗೂ ಅಂತಹ ಪರಿಕಲ್ಪನೆಯನ್ನು ಪ್ರತಿಪಾದಿಸುವ ಅಧ್ಯಯನದ ಇತಿಹಾಸಗಳೆರಡರನ್ನೂ ಜತೆಜತೆಯಲ್ಲಿಯೇ ಪರಿಗಣಿಸಲಾಗಿದೆ. ಇಂತಹ ತೌಲನಿಕ ಅಧ್ಯಯನದ ಮಹತ್ತ್ವ ಈಗಾಗಲೇ ಸಹೃದಯರಿಗೆ ಅರಿವಾಗಿರಬಹುದು ಎಂಬುದು ನನ್ನ ಭಾವನೆ. ಇದನ್ನು ಸ್ವಲ್ಪ ಮಟ್ಟಿಗೆ ವಿವರಿಸುವುದಾದರೆ 'ದ್ರಾವಿಡ' ಎನ್ನುವ ಪರಿಕಲ್ಪನೆಯ ಬಗೆಗೆ ನಡೆದ ವಾಗ್ವಾದಗಳು ಅದನ್ನು ಡೆಕ್ಕನ್ ಮತ್ತು ದಕ್ಷಿಣ ಭಾರತದವರೆಗಿನ ಚರ್ಚೆಯವರೆಗೆ ಅನ್ವಯಿಸುವುದಕ್ಕೆ ಹೋಗುವುದಿಲ್ಲ. ಅಂದರೆ, ಅಂತಹ ಚರ್ಚೆಗಳು ಪ್ರಾಚೀನ ಬೇರುಗಳನ್ನು ಅರಸುತ್ತ ಹೋಗುತ್ತವೆಯೇ ವಿನಾ ವರ್ತಮಾನದ (ದಕ್ಷಿಣದ ಭಾರತದ) ಅಗತ್ಯಗಳನ್ನು ಪ್ರತಿಪಾದಿಸುವುದಿಲ್ಲ.

ಹಾಗಾದುದರಿಂದ ಈ ಎಲ್ಲ ವಾಗ್ವಾದಗಳಿಗೆ ಒಂದು ತಾತ್ವಿಕ ನೆಲೆಯನ್ನು ನಾವು ಕಲ್ಪಿಸಬೇಕಾಗಿದೆ.ದ್ರಾವಿಡ ಅಧ್ಯಯನವೆಂದಾಗ ಅದಕ್ಕೆ ಸೀಮಿತವಾದ ಅರ್ಥವಲಯವೊಂದು ಆವರಿಸುವ ಅಪಾಯವಿದೆ.ಮೊದಲನೆಯದಾಗಿ ಭಾಷಾಶಾಸ್ತ್ರೀಯ ಮತ್ತು ಆ ಮೂಲಕ 'ಪಂಚದ್ರಾವಿಡ 'ಭಾಷೆಗಳ ಪ್ರದೇಶವೆಂಬ ಅರ್ಥ. ಆದರೆ ಸಂಸ್ಕೃತಿ ಅಥವ ಅದಕ್ಕಿಂತಲೂ ಮುಖ್ಯವಾಗಿ ಅಧ್ಯಯನದ ನೆಲೆಗಳು ಭಾಷಿಕ, ಭೌಗೋಳಿಕ ನೆಲೆಗಳನ್ನು ದಾಟಲು ಯಾವಾಗಲೂ ಪ್ರಯತ್ನಿಸುತ್ತಿರುತ್ತವೆ.ಆವಾಗ ಸ್ವತಃ ಕಾಲ್ಡ್‌ವೆಲ್ ಮೊದಲಾದವರು ಅನುಸರಿಸುವ 'ದ್ರಾವಿಡ' ಅಥವ 'ದಕ್ಷಿಣ ಭಾರತ' ಎಂಬ ವಿಶಾಲ ಪರಿಕಲ್ಪನೆಯತ್ತ ಅದನ್ನು ವಿಸ್ತರಿಸಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಭಾಷೆ, ಗಡಿ ಇತ್ಯಾದಿ ಎಲ್ಲೆಗಳನ್ನು ಆತ್ಯಂತಿಕವೆಂದು ಪರಿಗಣಿಸಬಾರದು. ಆದಕ್ಕಾಗಿಯೇ ದ್ರಾವಿಡ ಪರಿಕಲ್ಪನೆಯನ್ನು ದಕ್ಷಿಣ ಭಾರತದವರೆಗೂ ವಿಸ್ತರಿಸಲಾಯಿತು. ಹಾಗೆ ವಿಸ್ತರಿಸುವುದಕ್ಕೆ ಕಾರಣವೂ ಇದೆ ಎಂಬ ನಿದರ್ಶನವನ್ನೂ ನೀಡಿದುದಾಯಿತು.

ಆದರೆ, ಈ ಅಧ್ಯಯನದ ವ್ಯಾಪ್ತಿಯನ್ನು ಇನ್ನೂ ವಿಶಾಲ ವ್ಯಾಪ್ತಿಯಲ್ಲಿ ಚರ್ಚಿಸುವುದಕ್ಕೆ ಸಾಧ್ಯವಿದೆ. ಹಾಗೆ ನೋಡಿದಾಗ ಇಂದು ಜನಪ್ರಿಯವಾಗುತ್ತಿರುವ ಹೊಸ ಅಧ್ಯಯನ ಕ್ಷೇತ್ರವಾದ 'ದಕ್ಷಿಣ ಏಷ್ಯಾ ಅಧ್ಯಯನ' (South Assian Studias) ಕ್ಷೇತ್ರದಲ್ಲಿ ಭಾರತವೂ ಸೇರಿದಂತೆ ದಕ್ಷಿಣ ಭಾರತದ ಅಧ್ಯಯನವೂ ಸೇರ್ಪಡೆಯಾಗುತ್ತದೆ. ಇಡಿಯ ದಕ್ಷಿಣ ಏಷ್ಯಾವನ್ನೇ ಭಾಷಿಕ, ಭೌಗೋಳಿಕ ಸಾಂಸ್ಕೃತಿಕ ಘಟಕವಾಗಿ ಇಂತಹ ಅಧ್ಯಯನದಲ್ಲಿ ಪರಿಗಣಿಸಲಾಗುತ್ತದೆ. ದಕ್ಷಿಣ ಭಾರತದಂತಹ ಯಾವತ್ತೂ ಅಧ್ಯಯನಗಳಿಗೆ ಅದು ಸೂಕ್ತವಾದ 'ಪರಿಪ್ರೇಕ್ಷ್ಯ'ವಾಗುತ್ತದೆ. ವಿಶ್ವದ ಅನೇಕ ವಿಶ್ವವಿದ್ಯಾಲಯಗಳಲ್ಲಿ ದಕ್ಷಿಣ ಏಷ್ಯಾ ಅಧ್ಯಯನದಡಿಯಲ್ಲೇ ದಕ್ಷಿಣ ಭಾರತದ ಅಧ್ಯಯನವನ್ನೂ ಪರಿಗಣಿಸಲಾಗುತ್ತಿದೆ. ಅಂತಹ ವಿಶಾಲವಾದ ಅಧ್ಯಯನ ಕ್ಷೇತ್ರಕ್ಕೆ ಪ್ರವೇಶಿಕೆಯೊಂದನ್ನು ರೂಪಿಸುವುದು ಇಲ್ಲಿಯ ಉದ್ದೇಶವಾಗಿದೆ.

## ಪರಾಮರ್ಶನ ಗ್ರಂಥಗಳು

1. Aiyangar K., **Some Conributions of South India to Indian Culture.** Cosmo Publications, New Delhi, 1981.
2. Aloka Parasher- sen, **Social and Economic History of Early Deccan: Some Interpretations.** Manohar,1993.
3. Baierlein, **The Land of The Tamilians And its Missions.** Asian Eductional Services, New Delhi, 1955.
4. Bhandarkar.R.G., **Early History of The Dekkan.** Assian Educational Services, New Delhi,1985.
5. Burton Stein, **Peasant State and Society In Medieval South India.** Delhi, Oxford University Press, Oxford, 1994

6. Chatterji S.K., **Dravidian** Annamalai University Annamalinagar 1965
7. Dipakranjan Das, **Economic History of The Deccan.** Munsharm Manoharlal, Delhi, 1967
8. Dubreuil G.J, **Ancient History of Deccan**. Delhi, 1979.
9. Gribble.J.D.E, **History of The Deccan.** Mittal Publications. New Delhi, 1990.
10. Jones Kenneth W. **Socioreligious Reform movements in British India.** Combridge University Press, Cambridge, 1994.
11. Krishnaswami Aiyanar S, **South India and Her Muhammadan Invaders.** Assian Educational Services, New Delhi, 1991
12. Nilakanta Sastri, **A History of South India**, Oxford University Press Oxford, Delhi, 1999.
13. Prakash Chander, **Encylopaedia of Indian History Ancient, Medieval:** A.P.H.Publishing Corporation, New Delhi, 1999.
14. Sivaramamurti, **Royal Conquests And Cultural Migrations in South India and The Deccan.** Indian Museum, Calcutta, 1964
15. Savariroyan.D.Pandit, **The Tamilian Antiquary.** Asian Educational Services, New Delhi, 1986.
16. Yazdani G.(Ed), **The Early History of Deccan**, Oxford University press Oxford, 1960.
17. Wilk Mark, **Historical Sketches of The South Indian History.** Cosmo Publications, New Delhi, 1980.




೮

# ಜರ್ಮನಿಯ ಪ್ರಸಿದ್ಧ ದ್ರಾವಿಡಾಧ್ಯಯನಕಾರರು

*ಇಂಗ್ಲಿಷ್ ಮೂಲ : ಡಾ. ಹರ್ಬರ್ಟ್ ಹರ್‍ರಿಂಗ್*
*ಕನ್ನಡಕ್ಕೆ : ಡಾ. ಎ. ಸುಬ್ಬಣ್ಣ ರೈ*

೧೯ನೆಯ ಶತಮಾನದಾದಿಯ ರಮ್ಯ ಚಳುವಳಿಯು ಇತರೆ ಹಲವಾರು ವಿಷಯಗಳ ಜತೆಗೆ, ನಮ್ಮ ಪ್ರಸ್ತುತ (ವರ್ತಮಾನದ) ಸ್ಥಿತಿಗತಿಗಳನ್ನು ಅರಿತುಕೊಳ್ಳುವಲ್ಲಿ ನಮ್ಮ ಗತದ ಬಗೆಗಿನ ತಿಳುವಳಿಕೆ ಎಷ್ಟು ಮಹತ್ವದ್ದು? ಮತ್ತು ಎಷ್ಟು ಮುಖ್ಯವಾದುದೆಂಬುದನ್ನೂ ತೋರಿಸಿಕೊಟ್ಟಿತು. ಇಂದಿನ ಸ್ಥಿತಿ-ಗತಿಗಳ ಮೂಲ ಹಾಗೂ ಅದರ ನಿರ್ಣಾಯಕವಾದ ಸಾಂಸ್ಕೃತಿಕ ಮತ್ತು ಸಮಾಜೋ-ರಾಜಕೀಯ ಶಕ್ತಿಗಳನ್ನೂ ಬೆಳಕಿಗೆ ತಂದಿತು. ಪ್ರಾಚೀನ ಗ್ರೀಕ್, ರೋಮನ್, ಹೀಬ್ರೂ ಮತ್ತು ಜರ್ಮನ್ ಆಕರಗಳಿಂದ ಐರೋಪ್ಯ (ಪಾಶ್ಚಾತ್ಯ) ಸಂಸ್ಕೃತಿಯನ್ನು ಕಂಡುಕೊಳ್ಳುವಲ್ಲಿ ಅನ್ವೇಷಕ ಮನಸ್ಸು ದೂರಪೂರ್ವದ ಅದರಲ್ಲೂ ಪ್ರಬಲವಾಗಿ ಚೈನಾ ಮತ್ತು ಭಾರತದಂತಹ ಪೌರ್ವಾತ್ಯ ಪ್ರಭಾವಗಳ ಜತೆ ಗುರುತಿಸಿ ಕೊಂಡಿತು. ಹೀಗೆ ಚಾರಿತ್ರಿಕ ಪ್ರಜ್ಞೆಯು ಉದಯವಾದ ಅವಧಿಯಲ್ಲೇ ತೌಲನಿಕ ಭಾಷಾ ಶಾಸ್ತ್ರ, ಭಾಷಾವಿಜ್ಞಾನ ಮತ್ತು ಭಾರತಾಧ್ಯಯನಗಳಂತಹ ವಿದ್ವತ್ (ಪಂಡಿತ) ಶಿಸ್ತುಗಳೂ ಅಸ್ತಿತ್ವಕ್ಕೆ ಬಂದುವು. ಪ್ರಾರಂಭಿಕ ಹಂತದಲ್ಲಿ ಇವೆಲ್ಲಾ ಹೆಚ್ಚು ಕಡಿಮೆ ಚಾರಿತ್ರಿಕ ಪ್ರಜ್ಞೆಯ (ಅಧ್ಯಯನದ) ಶಾಖೆಗಳಾಗಿಯೇ ನಡೆಯುತ್ತಿದ್ದುವು. ವಿಲ್‌ಹೆಲ್ಮ್ ವೊನ್ ಹಂಬೋಲ್ಟ್, ಫ್ರೆಡರಿಕ್ ವೊನ್ ಶ್ಲೆಗಲ್ ಹಾಗೂ ೧೮೨೦ರಲ್ಲಿ ಬರ್ಲಿನ್ ವಿಶ್ವವಿದ್ಯಾಲಯದ ಇಂಡೋ-ಜರ್ಮನಿಕ್ ಸ್ಟಡೀಸ್ ವಿಭಾಗದಲ್ಲಿ ಪ್ರಾಧ್ಯಾಪಕನಾಗಿ ನಿಯುಕ್ತನಾದ ಫ್ರಾನ್ಜ್-ಬಾಪ್ಪ್-ಇವರುಗಳು ತೌಲನಿಕ ಭಾಷಾಶಾಸ್ತ್ರ ಅಥವಾ ಭಾಷಾವಿಜ್ಞಾನ ಕ್ಷೇತ್ರದ ಮಾರ್ಗ ಪ್ರವರ್ತಕರೆನ್ನಬಹುದು. (ಪ್ರಸ್ಸಿಯಾದ ಆಗಿನ ಶಿಕ್ಷಣ ಮಂತ್ರಿ ಯಾಗಿದ್ದ ವಿಲ್‌ಹೆಲ್ಮ್ ವೊನ್ ಹಂಬೋಲ್ಟ್‌ನಿಂದ ೧೮೧೦ರಲ್ಲಿ ಬರ್ಲಿನ್ ವಿಶ್ವವಿದ್ಯಾಲಯವು ಸ್ಥಾಪಿತವಾಯಿತು) ಫ್ರಾನ್ಜ್ ಬಾಪ್ಪ್‌ನು ೧೮೧೬ರಲ್ಲಿ ರಚಿಸಿದ ಹಲವು ಸಂಪುಟಗಳುಳ್ಳ ಕೃತಿಯು ತೌಲನಿಕ ಭಾಷಾಶಾಸ್ತ್ರ/ಭಾಷಾವಿಜ್ಞಾನಗಳ ಹುಟ್ಟನ್ನು ಗುರುತಿಸಿತು. (ಬೊಟ್ಟು ಮಾಡಿತು.) "ಆನ್

ದ ಕಾನ್ಜುಗೇಷನ್ ಸಿಸ್ಟಮ್ ಆಫ್ ಸಂಸ್ಕೃತ್ ಇನ್ ಕಂಪೇರಿಸನ್ ವಿದ್ ದಾಟ್ ಆಫ್ ದ ಗ್ರೀಕ್, ಲ್ಯಾಟಿನ್, ಪರ್ಶಿಯನ್ ಆ್ಯಂಡ್ ಜರ್ಮಾನಿಕ್ ಲಾಂಗ್ವ್ಯುವೇಜಸ್. ವಿದ್ ಎಡಿಷನಲ್ ಎಪಿಸೋಡ್ಸ್ ಫ್ರಮ್ ದಿ ರಾಮಾಯಾಣ ಆ್ಯಂಡ್ ಮಹಾಭಾರತ, ರೆಂಡರ್ಡ್ ಇನ್ ಎಕ್ಸಾಕ್ಟ್ ಮೀಟ್ರಿಕ್ ಟ್ರಾನ್ಸ್‌ಲೇಷನ್ ಫ್ರಮ್ ದಿ ಒರಿಜಿನಲ್ ಟೆಕ್ಸ್ಟ್ಸ್ ಆ್ಯಂಡ್ ವಿದ್ ಸೆವೆರಲ್ ಪ್ಯಾಸೇಜಸ್ ಫ್ರಮ್ ದಿ ವೇದಾಸ್" (ಗ್ರೀಕ್, ಲ್ಯಾಟಿನ್, ಪರ್ಶಿಯನ್ ಮತ್ತು ಜರ್ಮನ್ ಭಾಷೆಗಳ ತುಲನೆಯಲ್ಲಿ ಸಂಯೋಗ ವ್ಯವಸ್ಥೆಯ ಕುರಿತು ರಾಮಾಯಣ ಮತ್ತು ಮಹಾಭಾರತದ ಹೆಚ್ಚುವರಿ ಭಾಗಗಳ ಮೂಲಪಠ್ಯಗಳ ಯಥಾ ಛಂದಸ್ಸಿನ ಅನುವಾದ ಹಾಗೂ ವೇದಗಳ ಹಲವು ಭಾಗಗಳೊಂದಿಗೆ) ಎಂಬ ಅದರ ಶೀರ್ಷಿಕೆಯೇ ಅತ್ಯಂತ ಗಂಭೀರವಾಗಿದೆ. ಇದರ ಬೆನ್ನಲ್ಲೇ, ಅಂದರೆ ೧೮೨೦ರಲ್ಲಿ "ಅನಾಲಿಟಿಕಲ್ ಕಂಪೇರಿಸನ್ ಆಫ್ ದಿ ಸಂಸ್ಕೃತ್, ಗ್ರೀಕ್, ಲ್ಯಾಟೀನ್ ಆ್ಯಂಡ್ ಟ್ಯೂಟಾನಿಕ್ ಲ್ಯಾಂಗುವೇಜಸ್, ಶೋವಿಂಗ್ ದಿ ಒರಿಜನಲ್ ಐಡೆಂಟಿಟಿ ಆಫ್ ದೆಯರ್ ಗ್ರಮಾಟಿಕಲ್ ಸ್ಟ್ರಕ್ಚರ್" (ವ್ಯಾಕರಣ ಸ್ವರೂಪದ ಮೂಲ ಅನನ್ಯತೆಯನ್ನು ತೋರಿಸುವ ಸಂಸ್ಕೃತ, ಗ್ರೀಕ್, ಲ್ಯಾಟೀನ್ ಹಾಗೂ ಟ್ಯೂಟಾನಿಕ್ ಭಾಷೆಗಳ ವಿಶ್ಲೇಷಣಾತ್ಮಕ ತುಲನೆ) [ಆನ್ನಲ್ಸ್ ಆಫ್ ಓರಿಯೆಂಟಲ್ ಲಿಟರೇಚರ್, ಲಂಡನ್] ಎಂಬ ಕೃತಿಯೂ ಪ್ರಕಟವಾಯಿತು.

ಭಾರತ್ಯಾಧ್ಯಯನದ ಮೊದಲ ಜರ್ಮನ್ ಪೀಠವು ಬಾನ್ ವಿಶ್ವವಿದ್ಯಾಲಯದಲ್ಲಿ, ೧೮೧೮ರಲ್ಲಿ ಸ್ಥಾಪಿತವಾಯಿತು. ಫ್ರೆಡರಿಕ್ ವೊನ್ ಶ್ಲೇಗಲ್‌ನ ಅಣ್ಣನಾದ ಆಗಸ್ಟ್ ವಿಲ್‌ಹೆಲ್ಮ್ ವೊನ್ ಶ್ಲೇಗಲ್‌ನು ಅದರ ಅಧ್ಯಕ್ಷನಾದನು. ೧೮೦೮ರಲ್ಲಿ ಫ್ರೆಡರಿಕ್ ವೊನ್‌ಶ್ಲೇಗಲ್‌ನು "ಆನ್ ದ ಲಾಂಗುವೇಜ್ ಆ್ಯಂಡ್ ವಿಸ್ಡಮ್ ಆಫ್ ದ ಇಂಡಿಯನ್ಸ್" (ಭಾರತೀಯರ ಭಾಷೆ ಮತ್ತು ವಿವೇಕದ ಕುರಿತು) ಎಂಬ ಕೃತಿಯನ್ನು ಪ್ರಕಟಿಸಿದನು. ಈ ಕೃತಿಯು ೧೭೯೧ರಲ್ಲಿ ಜಾರ್ಜ್ ಫಾಸ್ಟರನು ಪ್ರಕಟಿಸಿದ ಕಾಳಿದಾಸನ ಶಾಕುಂತಲದ ಮೊದಲ ಜರ್ಮನ್ ಭಾಷಾಂತರದ ಜತೆ ಸೇರಿ ಜರ್ಮನ್ ಭಾರತಾಧ್ಯಯನದ ಸ್ಥಾಪನೆಗೆ ಪ್ರೇರಕವಾಯಿತೆನ್ನಬಹುದು.

ಶ್ಲೇಗಲ್ ಸಹೋದರರು ಫ್ರೆಂಚ್ ವಿದ್ವಾಂಸನಾದ ಎ.ಎಲ್.ಡಿ.ಚೆಜಿಯ ಜತೆ ನಿಕಟ ಸಂಪರ್ಕ ಏರಿಸಿಕೊಂಡಿದ್ದರು ಎ.ಎಲ್.ಡಿ.ಚೆಜಿಯು ೧೮೧೪ರಲ್ಲಿ ಪ್ಯಾರಿಸ್ ವಿಶ್ವವಿದ್ಯಾಲಯದಲ್ಲಿ ಸ್ಥಾಪಿತವಾದ ಮೊದಲ ಯುರೋಪಿಯನ್ ಸಂಸ್ಕೃತ ಪೀಠದ ಅಧ್ಯಕ್ಷನಾಗಿದ್ದನು. ಆಗಸ್ಟ್ ವಿಲ್‌ಹೆಲ್ಮ್ ವೊನ್ ಶ್ಲೇಗಲನು ಮೂಲತಃ ಪ್ರಾಚೀನ ಗ್ರೀಕ್ ಮತ್ತು ಲ್ಯಾಟಿನ್ ವಿದ್ವಾಂಸ. ಇದಲ್ಲದೆ ಆತ ಶೇಕ್ಸ್‌ಪಿಯರ್ ಕೃತಿಗಳ ಸಮರ್ಥ ಭಾಷಾಂತರಕಾರನೂ ಆಗಿದ್ದನು. ೧೮೨೩ರಲ್ಲಿ ಆತನು ಮೂಲ ಸಂಸ್ಕೃತ ಪಠ್ಯದೊಂದಿಗೆ ಭಗವದ್ಗೀತೆಯ ಲ್ಯಾಟಿನ್ ಭಾಷಾಂತರವೊಂದನ್ನು ಸಂಪಾದಿಸಿದನು. ೧೮೨೯ರಲ್ಲಿ ರಾಮಾಯಣದ ಆಯ್ದ ಭಾಗವನ್ನು ಲ್ಯಾಟಿನ್ ಭಾಷಾಂತರ ದೊಂದಿಗೆ ಸಂಪಾದಿಸಿದನು. ೧೮೨೫ ಮತ್ತು ೧೮೩೦ರ ನಡುವೆ ಆತ ಭಾರತದ ಸಾಂಸ್ಕೃತಿಕ ಪರಂಪರೆ ಮತ್ತು ಜನಜೀವನದ ಅಧ್ಯಯನವನ್ನೊಳಗೊಂಡ

"ಇಂಡಿಯನ್ ಲೈಬ್ರೆರಿ" (ಭಾರತೀಯ ಗ್ರಂಥಾಲಯ) ಎಂಬ ಮೂರು ಸಂಪುಟಗಳ ಗ್ರಂಥವನ್ನು ಪ್ರಕಟಿಸಿದನು. ಅದರಲ್ಲಿ "ದ ಪ್ರೆಸೆಂಟ್ ಸ್ಟೇಟ್ ಆಫ್ ಇಂಡಿಯನ್ ಫಿಲಾಲಜಿ" (ಭಾರತೀಯ ಭಾಷಾಶಾಸ್ತ್ರದ ಇಂದಿನ ಸ್ಥಿತಿಗತಿ) ಎಂಬ ಸ್ವತಃ ಆತನ ಒಂದು ಪ್ರಬಂಧವೂ ಸೇರಿದೆ. ಅಂತಿಮವಾಗಿ 'ಹಿತೋಪದೇಶ'ದ ವ್ಯಾಖ್ಯಾನ ಸಹಿತವಾದ ಲ್ಯಾಟಿನ್ ಭಾಷಾಂತರಕ್ಕಾಗಿ ನಾವಾತನಿಗೆ ಋಣಿಯಾಗಿರಬೇಕಾಗುತ್ತದೆ. ಈ ಕೆಲಸಗಳು ಯುರೋಪಿನಲ್ಲಿನ ವ್ಯವಸ್ಥಿತವಾದ ಸಂಸ್ಕೃತಾಧ್ಯಯನ ಮತ್ತು ವ್ಯಾಪಕವಾದ ಭಾರತಾಧ್ಯಯನಗಳ ಹುಟ್ಟನ್ನು ಗುರುತಿಸಿತೆಂದು ಹೇಳುವಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಆಗಸ್ಟ್ ವಿಲ್‌ಹೆಲ್ಮ್ ವೊನ್ ಷ್ಲೆಗಲನು ಬಾನ್‌ನಲ್ಲಿ ಜರ್ಮನಿಯ ಮೊತ್ತ ಮೊದಲ ದೇವನಾಗರಿ ಮುದ್ರಣಾಲಯವನ್ನು ಸ್ಥಾಪಿಸಿ, ಅದರಲ್ಲಿ 'ಭಗವದ್ಗೀತೆ'ಯನ್ನು ದೇವನಾಗರಿ ಲಿಪಿಯಲ್ಲಿ, ಲ್ಯಾಟಿನ್ ಭಾಷಾಂತರದೊಂದಿಗೆ ಮುದ್ರಿಸಿದನೆಂಬುದನ್ನು ಇಲ್ಲಿ ಉಲ್ಲೇಖಿಸಲೇ ಬೇಕಾಗುತ್ತದೆ.

ಭಾರತಾಧ್ಯಯನದೊಳಗಡೆ ಬಿಂಬಿತವಾಗಿರುವ ದ್ರಾವಿಡಾಧ್ಯಯನದ ಕುರುಹುಗಳ ಕುರಿತು ಮಾತನಾಡಬೇಕಾದ ಉಪನ್ಯಾಸದಲ್ಲಿ ಯಾಕೆ ನಾನು ಈ (ಮೇಲಿನ) ಅಂಶಗಳನ್ನೆಲ್ಲಾ ಪ್ರಸ್ತಾಪಿಸಿದೆ? ಅದಕ್ಕೆ ಉತ್ತರ ಸರಳವಾಗಿದೆ : ಯಾಕೆಂದರೆ ಪ್ರಾರಂಭಿಕ ಹಂತದಲ್ಲಿ ಭಾರತಾಧ್ಯಯನವೆಂಬುದು ಬಹುಮಟ್ಟಿಗೆ ಸಂಸ್ಕೃತಾಧ್ಯಯನದೊಂದಿಗೆ ಅಭೇದವಾಗಿ ಗುರುತಿಸಿಕೊಂಡಿತ್ತು. (ಸಂಸ್ಕೃತಾಧ್ಯಯನಕ್ಕೆ ಸಂವಾದಿಯಾಗಿತ್ತು.) ಸಂಸ್ಕೃತಾಧ್ಯಯನದ ಈ ಪ್ರಾಬಲ್ಯವನ್ನು ಕ್ರಿ.ಶ.೧೯ನೆಯ ಶತಮಾನದ ಕೊನೆಯ ವೇಳೆಗೆ ಮ್ಯಾಕ್ಸ್ ಮುಲ್ಲರನು ಗುರುತಿಸಿದ್ದಾನೆ. ತನ್ನ ಕೊನೆಯ ಕೃತಿಯಾದ "ದ ಸಿಕ್ಸ್ ಸಿಸ್ಟಮ್ಸ್ ಆಫ್ ಇಂಡಿಯನ್ ಫಿಲಾಸಫಿ" (ಭಾರತೀಯ ತತ್ತ್ವಶಾಸ್ತ್ರದ ಆರು ಪ್ರಸ್ಥಾನಗಳು)ಯಲ್ಲಿ ಆತ ದ್ರಾವಿಡಾಧ್ಯಯನ ಕ್ಷೇತ್ರವನ್ನು ಕಡೆಗಣಿಸಿದ್ದರೂ ವಿಶಾಲವೂ ಪ್ರಶಂಸನೀಯವೂ ಆದ ಸಂಸ್ಕೃತಾಧ್ಯಯನದ ಬಗೆಗೆ ತರುಣ ವಿದ್ವಾಂಸರ ಗಮನವನ್ನು ಸೆಳೆದಿದ್ದಾನೆ :

"ಭಾರತದ ದಕ್ಷಿಣ ಭಾಗದಲ್ಲಿ ತತ್ತ್ವಶಾಸ್ತ್ರೀಯ ಸಾಹಿತ್ಯವೊಂದು ಅಸ್ತಿತ್ವದಲ್ಲಿದೆ. ಅದು ಸಂಸ್ಕೃತ ಪ್ರಭಾವದ ಸ್ಪಷ್ಟ ಸುಳಿವನ್ನು ನೀಡಬಹುದಾದರೂ ಮಹಾನ್ ಸೌಂದರ್ಯದ ಹಾಗೂ ಚಾರಿತ್ರಿಕ ಮಹತ್ವವುಳ್ಳ ಮೂಲ, ಸ್ಥಳೀಯ ಅಂಶಗಳನ್ನೂ ಒಳಗೊಂಡಿದೆ. ದುರದೃಷ್ಟವಶಾತ್ ಇದುವರೆಗೆ ಕೆಲವೇ ಮಂದಿ ವಿದ್ವಾಂಸರು ಮಾತ್ರ ದ್ರಾವಿಡ ಭಾಷೆಗಳ ಮತ್ತು ಸಾಹಿತ್ಯದ ಅಧ್ಯಯನವನ್ನು, ಕೈಗೊಂಡಿದ್ದಾರೆ. ಆದರೆ ಸಂಸ್ಕೃತ ಸಾಹಿತ್ಯದಲ್ಲಿ ಇನ್ನು ಅಧ್ಯಯನ ನಡೆಸುವಂಥಾದ್ದೇನೂ ಉಳಿದಿಲ್ಲ ಎಂದು ದೂರುವ ತರುಣ ವಿದ್ಯಾರ್ಥಿಗಳು ಆ (ದ್ರಾವಿಡಾಧ್ಯಯನ) ಕ್ಷೇತ್ರದಲ್ಲಿ ತೃಪ್ತಿಕರವಾಗಿ ತಮ್ಮನ್ನು ತಾವು ತೊಡಗಿಸಿಕೊಳ್ಳಬೇಕೆಂದು ನಾನು ಭಾವಿಸುತ್ತೇನೆ".

ಮ್ಯಾಕ್ಸ್‌ಮುಲ್ಲರನು ಸಂಸ್ಕೃತಾಧ್ಯಯನ ಕ್ಷೇತ್ರದಲ್ಲಿ ಗಮನಾರ್ಹ ಸಂಶೋಧನೆ ನಡೆಸಿದವನು. ೧೮೪೯ ಮತ್ತು ೧೮೭೪ರ ನಡುವೆ ಆರು ಸಂಪುಟಗಳಲ್ಲಿ ಆತ ಪ್ರಕಟಿಸಿದ 'ಋಗ್ವೇದ'ದ ವಿಮರ್ಶಾತ್ಮಕ ಆವೃತ್ತಿಯು ಮೊದಲ ಸಂಪೂರ್ಣ ಆವೃತ್ತಿಯೆಂಬ ಹೆಗ್ಗಳಿಕೆಗೆ

ಪಾತ್ರವಾಗಿದೆ. ಹಾಗಿದ್ದರೂ ಕೂಡಾ ೧೮೪೬ ರಿಂದ ೧೯೦೦ರ ತನಕ ಆತ ವಾಸವಾಗಿದ್ದ ಇಂಗ್ಲೆಂಡ್‌ನಲ್ಲಿ ಆತನಿಗೆ ಭಾರತಾಧ್ಯಯನ ಅಥವಾ ಸಂಸ್ಕೃತಾಧ್ಯಯನಕ್ಕೆ ಸಂಬಂಧಿಸಿದ ಯಾವುದೇ ಪೀಠವನ್ನೂ ಕೊಡಮಾಡಲಿಲ್ಲ. ಆತ ಜನ್ಮತಃ ಬ್ರಿಟಿಷ್‌ರವನಲ್ಲವೆಂಬುದು ಇದಕ್ಕೆ ಒಂದು ಕಾರಣವಾಗಿರಬಹುದು. ಭಾರತೀಯ ರಾಜಕೀಯ ಸ್ವಾತಂತ್ರ್ಯವನ್ನು ಪ್ರತಿಪಾದಿಸುತ್ತಿದ್ದ ಹಠವಾದಿಯೂ, ಪ್ರಾಮಾಣಿಕ (ವಿಶ್ವಾಸ ಪಾತ್ರ)ನೂ ಆದ ವಕೀಲನಾಗಿದ್ದ ನೆಂಬುದು ಇನ್ನೊಂದು ಕಾರಣವಾಗಿರಬಹುದು. ಆದರೆ ಹೆಚ್ಚು ಕಾಲ ಆತನನ್ನು ಪಕ್ಕಕ್ಕಿಡಲು ಸಾಧ್ಯವಾಗಲಿಲ್ಲ. ಕೊನೆಗೂ ೧೮೬೮ರಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಆತನಿ ಗಾಗಿಯೇ ತೌಲನಿಕ ಭಾಷಾಶಾಸ್ತ್ರದ ವಿಶೇಷ ಪೀಠವೊಂದು ಸ್ಥಾಪಿತವಾಯಿತು. ಆತನು ಪ್ರಧಾನ ಸಂಪಾದಕನಾಗಿದ್ದ ಸ್ಮರಣೀಯ ಕೃತಿ 'ದ ಸೇಕ್ರೆಡ್ ಬುಕ್ಸ್ ಆಫ್ ದ ಈಸ್ಟ್' (ಪೂರ್ವದ ಪವಿತ್ರ ಗ್ರಂಥಗಳು) ಆತನನ್ನು ತೌಲನಿಕ ಧರ್ಮಶಾಸ್ತ್ರದಲ್ಲಿ ಅಧಿಕೃತನ್ನಾಗಿ ಮಾಡಿತು. ೧೮೬೭ರಲ್ಲಿ ಅದನ್ನು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಪಠ್ಯಕ್ರಮದಲ್ಲಿ ಒಂದು ಹೊಸ ಶಿಸ್ತನ್ನಾಗಿಯೂ ಪರಿಚಯಿಸಲಾಯಿತು. (ಅಳವಡಿಸಲಾಯಿತು). ಯುರೋಪಿಯನ್ ಭಾರತಾಧ್ಯಯನಕಾರರ ಆದರ್ಶಪ್ರಾಯವಾದ ಈ ಸಾಮೂಹಿಕ ಕೃತಿಯ ಒಟ್ಟು ೫೧ ಸಂಪುಟಗಳಲ್ಲಿ ೩೧ ಸಂಪುಟಗಳು ಭಾರತೀಯ ಪಠ್ಯಗಳಿಗೆ ಮೀಸಲಾಗಿವೆ. ಗ್ರಂಥದ ಪ್ರಸ್ತಾವನೆ(ಮುನ್ನುಡಿ)ಯಲ್ಲಿನ ಕೆಳಗಿನ ಮಾತುಗಳು ಮ್ಯಾಕ್ಸ್ ಮುಲ್ಲರನ ಆಧ್ಯಾತ್ಮಿಕ-ಧಾರ್ಮಿಕ ದೃಷ್ಟಿಕೋನವನ್ನು ಬಿಂಬಿಸುತ್ತವೆ. ಜತೆಗೆ ಸಂಪುಟದ ಪ್ರಮುಖ ಉದ್ದೇಶವನ್ನೂ ತೆರೆದಿಡುತ್ತವೆ :

"ಪ್ರಶ್ನೆಯೆಂದರೆ, ಇಲ್ಲಿನ ಪ್ರತಿಯೊಂದು ಪವಿತ್ರ ಗ್ರಂಥದಲ್ಲೂ ಮಾನವ ಹೃದಯವನ್ನು ಮರ್ತ್ಯದಿಂದ ಉನ್ನತ ಲೋಕಕ್ಕೇರಿಸುವಂತಹುದೇನಾದರೂ ಅಡಗಿದೆಯೆ? ಇಲ್ಲವೇ? ಅತೀತ ಶಕ್ತಿಯ ಸರ್ವವ್ಯಾಪಕತೆ ಬಗೆಗೆ ಮಾನವನನ್ನು ಚಿಂತನೆಗೆ ಹೆಚ್ಚುವಂತಹುದೇನಾದರೂ ಅಡಗಿದೆಯೆ? ಇಲ್ಲವೇ? ಸಂತಸದ ಉಜ್ವಲ ಕ್ಷಣಗಳು ಮತ್ತು ಸಂಕಟದ ಭೀಕರ ಅವಧಿ ಗಳಿಂದೊಡಗೂಡಿದ ಜೀವನದ ಅಲ್ಪಕಾಲದ ಯಾತ್ರೆಯಲ್ಲಿ ಆಸರೆಯಾಗುವಂತಹು ದೇನಾದರೂ ಅಡಗಿದೆಯೆ? ಇಲ್ಲವೇ? "

ಇದರಿಂದ ನಾವು ಅಂತಿಮವಾಗಿ ಆತನ ತೌಲನಿಕ ಅಧ್ಯಯನವು ಆತನೇ ಹೆಸರಿಸುವ 'ಮಾನವಶಾಸ್ತ್ರೀಯ ಧರ್ಮ'ದಲ್ಲಿ ಪರ್ಯವಸಾನಗೊಳ್ಳುತ್ತದೆಂಬುದನ್ನು ತಿಳಿದುಕೊಳ್ಳ ಬಹುದು. ೧೮೯೧ರಲ್ಲಿ ಆತ ಗ್ಲಾಸ್ಗೋ ವಿಶ್ವವಿದ್ಯಾಲಯದಲ್ಲಿ ನೀಡಿದ ಗಿಫೋರ್ಡ್ ಉಪನ್ಯಾಸಗಳು ಪ್ರಕಟವಾಗಿದ್ದು, ಅದರ ಮುನ್ನುಡಿಯಲ್ಲಿ ಆತ ಹೇಳುವ ಮಾತುಗಳನ್ನು ಗಮನಿಸಬಹುದು :

"ದೇವರಲ್ಲಿ ನಂಬಿಕೆಯಿರುವುದನ್ನು, ಆತ್ಮದ ಅಮೃತತತ್ವದಲ್ಲಿ ನಂಬಿಕೆಯನ್ನು, ಭವಿಷ್ಯದಲ್ಲಿ ಕರ್ಮಫಲ ಪ್ರಾಪ್ತಿಯಾಗಬಹುದೆಂಬುದನ್ನು ಮತ್ತು ಪ್ರಾಪ್ತಿಯಾಗದೆಂಬು ದನ್ನು, ಆದರೆ ವಿಶೇಷ ದಿವ್ಯದರ್ಶನದ ಸಹಾಯವಿಲ್ಲದೆ ಮನುಷ್ಯ ನಿಮಿತ್ತದ ಸೂಕ್ತ

ಪ್ರಯತ್ನ (ಅಭ್ಯಾಸ) ವೊಂದರಿಂದಲೇ ಅದನ್ನು ಪಡೆಯಬಹುದೆಂಬುದನ್ನು ತೋರಿಸಿಕೊಡಬಹುದಾಗಿದೆ. ಚಾರಿತ್ರಿಕ ಅನ್ವೇಷಣೆಯ ಮೂಲಕ ನಾನಿದನ್ನು ಸಾಧಿಸಿ ತೋರಿಸಲು ಪ್ರಯತ್ನಿಸಿದ್ದೇನೆ. ಸಮೃದ್ಧವಾಗಿರುವ ಫಸಲಿನಿಂದ ಕೆಲವನ್ನು ಆಯ್ದುಕೊಳ್ಳಲು ನಾನು ಪ್ರಯತ್ನಿಸಿದ್ದೇನೆ. ಆದರೆ ಸದ್ಯ ಈ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವವರಿಗಿಂತಲೂ ಹೆಚ್ಚಿನ ಕೆಲಸಗಾರರ ಆವಶ್ಯಕತೆಯಿದೆ. ಈ ಕೆಲಸವನ್ನು ಮಾಡುವಲ್ಲಿ ನಾನು ನಮ್ಮ ಕಾಲದ ಮಹಾನ್ ಧರ್ಮಶಾಸ್ತ್ರಜ್ಞರ ಹೆಜ್ಜೆ ಗುರುತುಗಳನ್ನಷ್ಟೆ ಅನುಸರಿಸುತ್ತಿದ್ದೇನೆಂದು ಭಾವಿಸಿದ್ದೆ. ಪೂರ್ವದ ಪವಿತ್ರ ಗ್ರಂಥಗಳಿಂದ ಆಯ್ದು ಸಮೃದ್ಧವಾದ ಚಾರಿತ್ರಿಕ ಸಾಕ್ಷ್ಯಾಧಾರಗಳನ್ನು ನೀಡಿ ನಿಜವಾದ ಧರ್ಮದ ಧ್ಯೇಯವನ್ನು ಉಣಬಡಿಸುತ್ತಿದ್ದೇನೆಂದು ಭಾವಿಸಿದ್ದೆ. ಸಂತ ಪಾವುಲ್, ಚರ್ಚಿನ ಪಾದ್ರಿಗಳು (ಧರ್ಮಗುರುಗಳು), ಮಧ್ಯಕಾಲೀನ ಧರ್ಮಶಾಸ್ತ್ರಜ್ಞರು, ಆಧುನಿಕ ದೈವಿಕಗಳ ಬಗ್ಗೆ ತಜ್ಞರೆನಿಸಿದ ಕೆಲವರು ಇವರೆಲ್ಲಾ ಮತ್ತೆ ಮತ್ತೆ ಇದನ್ನೇ ಪ್ರತಿಪಾದಿಸಿದರು. ಅವರಿಗೆಲ್ಲಾ ಈ ನಿಟ್ಟಿನಲ್ಲಿ ಪರಿಣಾಮಕಾರಿ ಪುರಾವೆಗಳನ್ನೊದಗಿಸಿದವುಗಳು ಕ್ರೈಸ್ತೇತರ ಧರ್ಮಗಳ ದಾಖಲೆಗಳು. ಆದರೆ ನಮಗೆ ಅವುಗಳು ತಡವಾಗಿ ಪೌರ್ವಾತ್ಯ ವಿದ್ವಾಂಸರ, ಅದರಲ್ಲೂ ಮುಖ್ಯವಾಗಿ ಭಾರತದ ಪ್ರಾಚೀನ ಸಾಹಿತ್ಯದ ವಿದ್ಯಾರ್ಥಿಗಳ ತಾಳ್ಮೆಯ ಸಂಶೋಧನೆಗಳ ಮೂಲಕ ಸುಲಭ ಗಮ್ಯವಾದುವು".

ನಾನೀಗಾಲೇ ಹೇಳಿದಂತೆ, ಮಹಾನ್ ದ್ರಾವಿಡಾಧ್ಯಯನಕಾರರ ಕುರಿತಾದ ಉಪನ್ಯಾಸದಲ್ಲಿ ಇದನ್ನೆಲ್ಲಾ ಪ್ರಸ್ತಾವಿಸುತ್ತಿರುವುದು ಅಪ್ರಸ್ತುತವೆಂದು ತೋರಬಹುದು. ಆದರೆ ೧೮ನೆಯ ಶತಮಾನದಾಂತ್ಯದಲ್ಲಿ ಮತ್ತು ೧೯ನೆಯ ಶತಮಾನದಾದಿಯಲ್ಲಿ ಸಂಸ್ಕೃತಾಧ್ಯಯನದೊಂದಿಗೆ ಪ್ರಾರಂಭವಾದ ಭಾರತಶಾಸ್ತ್ರದ ವ್ಯವಸ್ಥಿತವಾದ ಅಧ್ಯಯನವನ್ನು ತೋರಿಸಲು ಈ ವಿವರಗಳು ಅಗತ್ಯವೆಂದು ನಾನು ಭಾವಿಸುತ್ತೇನೆ. ಆದರೆ, ಇಲ್ಲಿ ಮತ್ತೆಮತ್ತೆ ಅವಜ್ಞೆಗೊಳಗಾದ ಮತ್ತೊಂದು ಕಾರಣವೂ ಇದೆ. ಸಂಸ್ಕೃತಾಧ್ಯಯನಗಳು ಹೆಚ್ಚು ಕಡಿಮೆ ವಿದ್ವತ್ಕಾರಣಗಳಿಗಾಗಿ ಮಾತ್ರ ನಡೆದರೆ, ದ್ರಾವಿಡ ಭಾಷೆ ಮತ್ತು ಸಾಹಿತ್ಯಗಳ ಅಧ್ಯಯನಗಳು ಅವುಗಳ ಪ್ರಾರಂಭದ ದೆಸೆಯಿಂದಲೇ, ಅಂದರೆ ೧೮ನೇ ಶತಮಾನದಾದಿಯಿಂದಲೇ ಕ್ರೈಸ್ತ, ಧಾರ್ಮಿಕ ಸಂಬಂಧವನ್ನು ಬಲವಾಗಿ ಹೊಂದಿದ್ದುವು. ಅನ್ಯಧರ್ಮೀಯರ ನಡುವೆ ಕ್ರೈಸ್ತ ಸುವಾರ್ತೆಗಳನ್ನು ಪ್ರಚಾರಪಡಿಸಿ, ದೇವರಲ್ಲಿ ಕ್ರೈಸ್ತರಿಗಿರುವ ನಂಬಿಕೆಯೊಂದೇ ಸತ್ಯ ಮತ್ತು ಮುಕ್ತಿಯ ಕಡೆಗಿರುವ ಏಕಮಾತ್ರ ಮಾರ್ಗವೆಂಬುದನ್ನು ಮಾತು ಹಾಗೂ ಕೃತಿಯ ಮೂಲಕ ಅವರಿಗೆ ಮನವರಿಕೆ ಮಾಡಿಕೊಡಲು ದ್ರಾವಿಡ ಭಾಷೆ-ಸಾಹಿತ್ಯವನ್ನು ಬಳಸಿಕೊಳ್ಳಲಾಯಿತು.

ನಾನಿದನ್ನು ಅಪಾರ್ಥ ಮಾಡಿಕೊಳ್ಳುವುದಿಲ್ಲ. ಇಂತಹ ಸಂಬಂಧವು ದ್ರಾವಿಡಾಧ್ಯಯನಕಾರರ ವಿದ್ವತ್ಸಾಧನೆಗಳನ್ನು ಮಸುಕುಗೊಳಿಸಿದುವೆಂದು ನಾನು ಹೇಳಲಾರೆ. ಹಿಂದೂವೇತರರು ಕೈಗೊಂಡ ದ್ರಾವಿಡಾಧ್ಯಯನಗಳಲ್ಲಿ ನೈತಿಕ-ಧಾರ್ಮಿಕ ಪ್ರಾಯೋಗಿಕ ಧ್ಯೇಯವು ಸೈದ್ಧಾಂತಿಕ ಸಂಶೋಧನೆಯಿಂದ ಪ್ರತ್ಯೇಕಿಸಲ್ಪಡಲಿಲ್ಲವೆಂಬುದನ್ನು ನಾನು ಹೇಳಬಯಸುತ್ತೇನೆ. ಈ ಅಂತರ್ ಸಂಬಂಧವು ಅದರದ್ದೇ ಆದ ಇತ್ಯಾತ್ಮಕ ಮತ್ತು ನೇತ್ಯಾತ್ಮಕ ಫಲಶ್ರುತಿಗಳನ್ನು

ಹೊಂದಿದೆ. ಮಿಶನರಿ ವಿದ್ವಾಂಸರು ಕೈಗೊಂಡ ಆದರ್ಶ ಪ್ರಾಯವಾದ ಸಾಮಾಜಿಕ ಹಾಗೂ ಶೈಕ್ಷಣಿಕ ಕಾರ್ಯಗಳು, ಗ್ರಾಮೋದ್ಧಾರ ಚಟುವಟಿಕೆಗಳು, ಬಾಲ್ಯವಿವಾಹ, ಸತೀಸಹ ಗಮನಗಳಂತಹ ಅನಿಷ್ಟ ಪದ್ಧತಿಗಳನ್ನು ತೊಲಗಿಸುವಲ್ಲಿ ಅವರು ಸಡೆಸಿದ ಸಾರ್ಥಕ ಸಾಧನೆಗಳು-ಇವೆಲ್ಲಾ ಇತ್ಯಾತ್ಮಕ ಫಲಿತಾಂಶಗಳನ್ನು ಪ್ರಕಟಪಡಿಸುತ್ತವೆ. ಪುರಾಣ, ಪವಾಡ ಹಾಗೂ ದೈವಿಕ ವಿಚಾರಗಳಲ್ಲಿ ಕ್ರೈಸ್ತರಿಗಿರುವ ನಂಬಿಕೆಗಳಿಗೂ, ಸ್ಥಳೀಯರಿಗಿದ್ದ ನಂಬಿಕೆ ಗಳಿಗೂ ನಡುವೆ ನಡೆದ ಸಂಘರ್ಷಗಳೇ ನೇತ್ಯಾತ್ಮಕ ಫಲಶ್ರುತಿಗಳೆನ್ನಬಹುದು. ಆದರೆ, ಒಟ್ಟಾರೆಯಾಗಿ ನಾವೀಗ ಪ್ರಸ್ತಾಪಿಸಲಿರುವ ಜರ್ಮನಿಯ ಮಹಾನ್ ದ್ರಾವಿಡಾಧ್ಯ ಯನಕಾರರ ಸಂದರ್ಭದಲ್ಲಿ ಇತಾತ್ಮಕ ಅಂಶಗಳೇ ಮೇಲುಗೈ ಪಡೆಯುತ್ತವೆ.

ಜರ್ಮನ್ ದ್ರಾವಿಡಾಧ್ಯಯನದ ಕುರಿತು ಮಾತನಾಡುವಾಗ ಯಾವನೇ ಆದರೂ ಭಾರತಕ್ಕೆ ಬಂದ ಮೊದಲ ಪ್ರೊಟೆಸ್ಟೆಂಟ್ ಮಿಷನರಿಯೂ, ಮೊದಲ ದ್ರಾವಿಡಾಧ್ಯಯನಕಾರನೂ ಆದ ಬಾರ್ತೊಲೋಮಿಯಸ್ ಜೀಗನ್‌ಬಾಲ್ಗ (೧೬೮೨-೧೭೧೯)ನನ್ನು ಉಲ್ಲೇಖಿಸದೆ ಮುಂದುವರಿಯುವಂತಿಲ್ಲ. ೧೭೧೯ರ ಫೆಬ್ರವರಿ ೨ ರಂದು ಆತ ನಿಧನ ಹೊಂದಿದಾಗ ಆತನಿಗಿನ್ನೂ ೩೬ರ ಎಳೆಹರೆಯ. ಕೊನೆಯ ೧೩ ವರ್ಷಗಳ ಕಾಲ ಆತ ಡೆನ್ಮಾರ್ಕ್ ಮತ್ತು ನಾರ್ವೆಯ ರಾಜನ ಸೇವೆಯಲ್ಲಿ ಟ್ರಾಂಕ್ಯುಬಾರಿನಲ್ಲಿ ನೆಲೆಸಿದ್ದ. (ಟ್ರಾಂಕ್ಯುಬಾರ್ ಡ್ಯಾನಿಷ್ ಈಸ್ಟ್ ಇಂಡಿಯಾ ಕಂಪನಿಗೆ ತಂಜಾಪೂರಿನ ರಾಜನು ಭೋಗ್ಯಕ್ಕೆ ಕೊಟ್ಟಿದ್ದ ದ್ಯಾನಿಷ್‌ನ ಆಗಿನ ಆರ್ಥಿಕ ಹಾಗೂ ಸೈನಿಕ ನೆಲೆಯಾಗಿತ್ತು).

೧೭೧೬ರಲ್ಲಿ ಈಸ್ಟ್ ಜರ್ಮನಿಯ ಹಾಲ್ಲೆಯಲ್ಲಿ ಪ್ರಕಟವಾದ "ಗ್ರಮುಟಿಕಾ ದಮುಲಿಕಾ" ಕೃತಿಯ ರಚನೆಯು ನಿಜವಾಗಿಯೂ ಟ್ರಾಂಕುಬಾರ್‌ನಲ್ಲಿ ಜೀಗನ್‌ಬಾಲ್ಗನು ಕೈಗೊಂಡ ಮಹತ್ವದ ಕೆಲಸವೆನ್ನಬಹುದು. (ಟ್ರಾಂಕ್ಯುಬಾರ್ ಎಂಬ ಸ್ಥಳನಾಮವು ತಮಿಳಿನ 'ತರಂಗ ಬಡಿ' ಎಂಬುದರ ಅಪಭ್ರಂಶ ರೂಪವಿರಬೇಕು. ಅಲ್ಲಿ ಅದಕ್ಕೆ 'ಅಲೆಗಳ ಸಂಗೀತ ಕೇಳಿಬರುವ ಸ್ಥಳ' ಎಂಬ ಅರ್ಥವಿದೆ.) ಲ್ಯಾಟಿನ್ ಶೀರ್ಷಿಕೆಯುಳ್ಳ ಈ ಕೃತಿಯು "ಯುರೋಪಿನಲ್ಲಿ ಈಗಲೂ ಅಪರಿಚಿತವಾಗಿರುವ, ಈಸ್ಟ್ ಇಂಡಿಯನ್ನರ ನಡುವೆ ಮಾತನಾಡಲ್ಪಡುವ ತಮಿಳು ಅಥವಾ ಮಲಬಾರಿ ಭಾಷೆಯನ್ನು ಕಲಿಯಲಿರುವ ಸುಲಭ ವಿಧಾನವನ್ನು ವಿವಿಧ ಉದಾಹರಣೆ ಗಳು, ನಿಯಮಗಳು ಹಾಗೂ ಅವಶ್ಯ ಶಬ್ದಕೋಶದ ಮೂಲಕ" ಹೇಳುತ್ತದೆ.

ಅಂದಿನ ಕಾಲದಲ್ಲಿ, ಅದೇ ರೀತಿ ಇಪ್ಪತ್ತನೆಯ ಶತಮಾನದ ಮಧ್ಯಭಾಗದ ವರೆಗೂ 'ಮಲಬಾರ್' ಎಂಬುದು ಹೆಚ್ಚುಕಡಿಮೆ ಭಾರತದ ದಕ್ಷಿಣಭಾಗದ ಇಡಿಯ ಮದರಾಸು ಪ್ರಾಂತಕ್ಕೆ ಪರ್ಯಾಯ ಹೆಸರಾಗಿತ್ತೆಂಬುದನ್ನು ನಾವಿಲ್ಲಿ ಅವಶ್ಯವಾಗಿ ನೆನಪಿನಲ್ಲಿಟ್ಟು ಕೊಳ್ಳಬೇಕಾಗಿದೆ. ಆದರೆ, ಇಂದು ಕೇರಳ ಕರಾವಳಿ ಮತ್ತು ತಮಿಳುನಾಡಿನ ಕನ್ಯಾಕುಮಾರಿ ಜಿಲ್ಲೆಯ ಕರಾವಳಿ ಪ್ರದೇಶಕ್ಕಷ್ಟೆ ಈ ಹೆಸರು ಸೀಮಿತಗೊಂಡಿದೆ.

'ನೀದಿ ವುನ್ಪಾ' (ಅಥವಾ 'ನೀದಿ ವೆನ್ಬಾ')ದ ಭಾಷಾಂತರವು ದಕ್ಷಿಣ ಭಾರತದ ಹಿಂದೂ ತತ್ತ್ವಶಾಸ್ತ್ರ ಮತ್ತು ನೀತಿಶಾಸ್ತ್ರದ ಕಡೆಗೆ ಜೀಗನ್‌ಬಾಲ್ಗನಿಗಿದ್ದ ನಿಷ್ಪಕ್ಷಪಾತ (ಪೂರ್ವಗ್ರಹ

ರಹಿತ) ಸಮೀಪನವನ್ನು ತೋರಿಸಿಕೊಡುವ ಇನ್ನೊಂದು ಕೃತಿಯೆನ್ನಬಹುದು. ಇದು ತಮಿಳು ಪಠ್ಯವೊಂದರ ಮೊದಲ ಪದ್ಯ ಮಾಧ್ಯಮದ ಭಾಷಾಂತರವೂ ಹೌದು. ೧೭೦೮ರ ಆಗಸ್ಟ್ ೩೦ರಂದು ನೈತಿಕತೆಯ ಕುರಿತಾದ ಒಂದು ನೂರು ಸಾಲುಗಳ ಈ ಭಾಷಾಂತರಕ್ಕೆ ಮುನ್ನುಡಿ ಬರೆಯುತ್ತಾ ಜೀಗನ್‌ಬಾಲ್ಗನು ಹೀಗೆ ಹೇಳುತ್ತಾನೆ :

"ಮಲಬಾರಿನ ಮಿಥರ್ಮೀಯರು (ಅನ್ಯ ಧರ್ಮೀಯರು) ಪಾಂಡಿತ್ಯ ಅಥವಾ ನೈತಿಕತೆಯ ಬಗೆಗೆ ಏನೇನೂ ಗೊತ್ತಿಲ್ಲದ ಅನಾಗರಿಕರೆಂದು ಯುರೋಪಿನಲ್ಲಿರುವ ಬಹುಪಾಲು ಕ್ರೈಸ್ತರು ಭಾವಿಸಿದ್ದಾರೆ. ಇದೇನಿದ್ದರೂ ಅವರ ಭಾಷೆಯ ಬಗೆಗೆ ಸರಿಯಾದ ತಿಳುವಳಿಕೆಯಿಲ್ಲದೆ, ಕೇವಲ ಹೊರಮೈ ಲಕ್ಷಣಗಳಾಧಾರದಿಂದ ಕೈಗೊಂಡ ಅವಸರದ ತೀರ್ಮಾನವಾಗಿದೆ. ನಾನು ಮೊದಲ ಬಾರಿಗೆ ಇಲ್ಲಿಯ ಅನ್ಯ ಧರ್ಮೀಯರ ನಡುವೆ ಬಂದಾಗ ಅವರ ಭಾಷೆಯು ನಿರ್ದಿಷ್ಟ ನಿಯಮಗಳುಳ್ಳ ಭಾಷೆ, ಅವರ ಜೀವನವು ಸರಿಯಾದ ಜೀವನ ಎಂಬುದನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿರಲಿಲ್ಲ. ಅಷ್ಟರ ಮಟ್ಟಿಗೆ ನಾನು ಅವರಲ್ಲಿ ನಾಗರಿಕರಿಲ್ಲ, ನೈತಿಕ ಕಾನೂನುಗಳಿಲ್ಲ- ಎಂಬುದಾಗಿ ನಂಬಿದ್ದೆ. ಇದನ್ನು ನಾನು ಒಪ್ಪಿಕೊಳ್ಳಲೇಬೇಕು..

... ಆದರೆ ಕೊನೆಗೆ ಅವರ ಗ್ರಂಥಗಳನ್ನೆಲ್ಲಾ ಓದಲು ಸಮರ್ಥನಾದ ಮೇಲೆ ನಾನೀಗ ಸಂಪೂರ್ಣ ಜ್ಞಾನವನ್ನು ಪಡೆದಿದ್ದೇನೆ. ಯುರೋಪಿನ ವಿದ್ವಾಂಸರೊಡನೆ ವಿನಿಮಯ ಮಾಡಿಕೊಳ್ಳಲು ಯೋಗ್ಯವಾದ ಮಹತ್ವದ ತತ್ತ್ವಶಾಸ್ತ್ರೀಯ ಶಿಸ್ತುಗಳು ಅವರಲ್ಲಿವೆ. ಎಲ್ಲಾ ಧರ್ಮಶಾಸ್ತ್ರೀಯ ವಿಷಯಗಳ ಹುಟ್ಟಿಗೂ, ಪ್ರತಿಪಾದನೆಗೂ ಮೂಲವಾಗಿರ ಬಹುದಾದ ಲಿಖಿತ ಕಾನೂನುಗಳು ಅವರಲ್ಲಿವೆ. ಇವೆಲ್ಲಾ ನನ್ನನ್ನು ಬೆರಗುಗೊಳಿಸಿದುವು. ಅವರ ಸ್ವಂತ ಬರೆಹಗಳ ಮೂಲಕವೇ ಅವರ ಧಾರ್ಮಿಕ ನಂಬಿಕೆಗಳ ಬಗೆಗೆ ಸಾಧ್ಯವಾದಷ್ಟು ಕಲಿತುಕೊಳ್ಳಬೇಕೆಂಬ ಹೆಬ್ಬಯಕೆ ನನ್ನಲ್ಲಿ ಮೂಡಿತು. ಅದಾದ ನಂತರ ನಾನು ಒಂದರ ಮೇಲೊಂದರಂತೆ ಪುಸ್ತಕಗಳನ್ನು ಪಡೆದುಕೊಂಡು, ಸಮಯವನ್ನೂ ದುಡ್ಡನ್ನೂ ವ್ಯರ್ಥ ಮಾಡದೆ ನಿರಂತರ ವ್ಯಾಸಂಗಕ್ಕೆ ತೊಡಗಿದೆ. ಈ ಗ್ರಂಥಾಧ್ಯಯನದ ಮೂಲಕವೂ, ಇಲ್ಲಿಯ ಬ್ರಾಹ್ಮಣರು ಅಥವಾ ಪುರೋಹಿತರೊಂದಿಗೆ ನಡೆಸಿದ ಚರ್ಚೆಗಳ ಮೂಲಕವೂ ನಾನೀಗ ಅವರ ಬಗೆಗೆ ಸ್ವಲ್ಪವಾದರೂ ಖಚಿತವಾದ ಸಂಗತಿಗಳನ್ನು ತಿಳಿದುಕೊಂಡಿದ್ದೇನೆ. ಅವುಗಳಿಗೆ ಕಾರಣಗಳನ್ನೂ ನೀಡಬಲ್ಲವನಾಗಿದ್ದೇನೆ".

೧೭೦೮ರಲ್ಲಿ ಜೀಗನ್‌ಬಾಲ್ಗನು ಅನುವಾದಿಸಿದ 'ಕೊಂಡ್ರೆಯ್ ವೇಂಡನ್' (ಮಲಬಾರಿ ನೀತಿಗಳು) ಮತ್ತು 'ಉಲಗ ನೀದಿ (ಲೋಕನೀತಿ) ಕೃತಿಗಳು ಪ್ರಕಟವಾದವು.

ಚರ್ಚಿನ ಅಧಿಕಾರಿಗಳು ಕ್ರೈಸ್ತ ಮಿಷನರಿಗಳಿಂದ ಸಾಮಾನ್ಯವಾಗಿ ಏನನ್ನು ನಿರೀಕ್ಷಿಸು ತ್ತಾರೋ, ಅದಕ್ಕೆ ಪೂರಕವಾಗಿ ಜೀಗನ್‌ಬಾಲ್ಗನೂ ಇಲ್ಲಿನ ಕ್ರೈಸ್ತೇತರರಿಗಾಗಿ ಏಸುವಿನ ಸುವಾರ್ತೆಗಳನ್ನು ಪ್ರಚಾರಪಡಿಸುವ ಕಾರ್ಯವನ್ನು ಕೈಗೊಂಡನು. ಅದಕ್ಕಾಗಿ ಆತನು ಲೂಥರನ 'ಲಿಟಲ್ ಕ್ಯಾಟೆಚ್‌ಸಮ್'ನ್ನು ತಮಿಳಿಗೆ ಭಾಷಾಂತರಿಸಿದನು. ಬೈಬಲಿನ ಕೆಲ ಭಾಗಗಳನ್ನೂ, ಅಸಂಖ್ಯ ಕ್ರೈಸ್ತ ಸ್ತೋತ್ರ ಗೀತೆಗಳನ್ನೂ ಲಿಪೀಕರಿಸಿದನು. ಆದರೆ ಅವುಗಳಿ

ಗಿಂತಲೂ ಹೆಚ್ಚಾಗಿ ಸ್ಥಳೀಯರ ಧಾರ್ಮಿಕ, ನೈತಿಕ ಹಾಗೂ ಸಾಂಸ್ಕೃತಿಕ ತತ್ತ್ವಗಳನ್ನೂ, ಆಚಾರ-ವಿಚಾರಗಳನ್ನೂ ಅರ್ಥಮಾಡಿಕೊಳ್ಳುವ ಕಾರ್ಯದಲ್ಲಿ ಆತನು ನಿರತನಾಗಿದ್ದನು. ತನ್ನ ಮೇಲಧಿಕಾರಿಗಳು ಸಂಶಯ ಪಡುವಷ್ಟರಮಟ್ಟಿಗೆ ಆತನು ಈ ಕಾರ್ಯದಲ್ಲಿ ತೊಡಗಿ ಕೊಂಡಿದ್ದನು. ಆತನು ಭಾರತದಲ್ಲಿ ಕ್ರೈಸ್ತ ಧರ್ಮವನ್ನು ಪ್ರಚಾರ ಪಡಿಸಲು ಬಂದವನೇ ಹೊರತು, ಪಶ್ಚಿಮದಲ್ಲಿ ಹಿಂದೂ ಧರ್ಮವನ್ನು ಪ್ರಚಾರ ಪಡಿಸಲು ಬಂದವನಲ್ಲವೆಂಬುದು ಅವರ ಅಭಿಪ್ರಾಯವಾಗಿತ್ತು. ಈ ಕಾರಣಕ್ಕಾಗಿಯೇ ಜೀಗನ್‌ಬಾಲ್ಗನ ಹೆಚ್ಚಿನ ಕೃತಿಗಳೂ ಆತನ ಮರಣಾನಂತರ ಪ್ರಕಟವಾದುವು. ಕೆಲವಂತೂ ಆತನ ಅಕಾಲಿಕ ಮರಣದ ೧೫೫ ವರ್ಷಗಳ ಬಳಿಕ ಬೆಳಕು ಕಂಡುವು. ಉದಾಹರಣೆಗೆ ೧೭೧೩ರಲ್ಲಿ ಪೂರ್ಣಗೊಂಡ ಆತನ "ಜೀನಿಯಾಲಜಿ ಆಫ್ ಮಲಬಾರ್ ಗಾಡ್ಸ್" (ಮಲಬಾರಿನ ದೇವರುಗಳ ವಂಶಾವಳಿ) ಕೃತಿಯು ಮದರಾಸಿನಲ್ಲಿ ೧೮೬೭ರಲ್ಲಿ ಸಂಪಾದಿತವಾಯಿತು.

೧೯ನೆಯ ಶತಮಾನದ ಜರ್ಮನಿಯ ಪ್ರಮುಖ ತಮಿಳು ವಿದ್ವಾಂಸನೆಂದರೆ ಕಾರ್ಲ್ (ಫ್ರೆಡರಿಕ್ ಲಿಬರೆಕ್ಟ್) ಗ್ರಾವುಲ್ (೧೮೧೪-೬೪) ಎಂದು ನಿಸ್ಸಂದೇಹವಾಗಿ ಹೇಳಬಹುದು. ಸಮುದ್ರದೀಚೆಯಲ್ಲಿ-ಪ್ಯಾಲೆಸ್ತೀನ್, ಈಜಿಪ್ಟ್, ಶ್ರೀಲಂಕಾ ಮತ್ತು ಭಾರತಗಳಲ್ಲಿ ಆತ ಕೇವಲ ನಾಲ್ಕು ವರ್ಷಗಳ ಕಾಲವಷ್ಟೇ ವ್ಯಯಿಸಿದ್ದರೂ ಆತ ಮಾಡಿದ ವ್ಯವಸಾಯ ಮಾತ್ರ ಅಪಾರ. ಗ್ರಾವುಲನ "ಔಟ್‌ಲೈನ್ ಆಫ್ ತಮಿಳ್ ಗ್ರಾಮರ್" (೧೮೫೫) ಕೃತಿಯು ಮುಂದಿನ ಆತನ "ಬೈಬ್ಲಿಯೋಥಿಕಾ ತಮುಲಿಕಾ ಸೀವ್ ಓಪೆರಾ ಪ್ರಾಸಿಪುವಾ ತಮಿಲೀನ್ಸಿಯಮ್" (ತಮಿಳು ಗ್ರಂಥಭಂಡಾರ ಅಥವಾ ತಮಿಳಿನ ಪ್ರಮುಖ ಸಾಹಿತ್ಯ ಕೃತಿಗಳು) ಗ್ರಂಥಕ್ಕೆ ಪೂರ್ವ ಪೀಠಿಕೆಯಂತಿದೆ. ಆತ ತನ್ನ ೫೦ನೇ ವಯಸ್ಸಿನಲ್ಲೇ ತೀರಿಕೊಂಡುದರಿಂದ ಈ ಗ್ರಂಥದ ಕೇವಲ ನಾಲ್ಕು ಸಂಪುಟಗಳಷ್ಟೆ ಪೂರ್ಣಗೊಳ್ಳಲು ಸಾಧ್ಯವಾಗಿದೆ.

"ತಮುಲಿಕ್ ಸ್ಕ್ರಿಪ್ಚರ್ಸ್ ಕಮೆಂಟಿಂಗ್ ಆನ್ ದಿ ವೇದಾಂತ ಆರ್ ದಿ ಅರ್ಥಡಾಕ್ಸ್ ಫಿಲಾಸಪಿ ಆಫ್ ದ ಹಿಂದೂಸ್" ಎಂಬ ಪ್ರಬಂಧವನ್ನೊಳಗೊಂಡ ಮೊದಲ ಸಂಪುಟದಲ್ಲಿ (೧೮೫೪) ದ್ರಾವಿಡದ ಸಾಹಿತ್ಯಿಕ ಮತ್ತು ತತ್ತ್ವಶಾಸ್ತ್ರೀಯ ಆಕರಗಳನ್ನು ಸಾದರಪಡಿಸುವುದರ ಸಾಧ್ಯತೆ ಹಾಗೂ ಪ್ರಾಮುಖ್ಯವನ್ನು ಗ್ರಾವುಲನು ಹೀಗೆ ಗುರುತಿಸುತ್ತಾನೆ:

"ತಾತ್ತ್ವಿಕ ನೆಲೆಯಲ್ಲಿ ಸಂಸ್ಕೃತ ಮತ್ತು ತಮಿಳು ಸಾಹಿತ್ಯ ನಿಕಟವಾಗಿಯೂ, ಗಮನಾರ್ಹ ವಾಗಿಯೂ ಪರಸ್ಪರ ಪೂರಕವಾಗಿರುವುದರಿಂದ ನಾನು ತಮಿಳು ಗ್ರಂಥಭಂಡಾರದ ಈ ಮೊದಲ ಸಂಪುಟವನ್ನು 'ಸಾಂಪ್ರದಾಯಿಕ ವೇದಾಂತ ಪಂಥ'ವೆಂಬ ಬರವಣಿಗೆಗಳಿಂದ ತುಂಬಲು ಬಯಸಿದ್ದೇನೆ. ಇವುಗಳಲ್ಲಿ ಮೊದಲನೆಯದು ಕೆಲವು ವರ್ಷಗಳ ಹಿಂದೆ ಸ್ಥಳೀಯರಿಂದ ಮದರಾಸಿನಲ್ಲಿ ಮುದ್ರಿತವಾಯಿತು. ಶ್ರೇಷ್ಠ ತಮಿಳು ಪದ್ಯದಲ್ಲಿರುವ ಈ ಪಠ್ಯವು ತಾಂಡವಮೂರ್ತಿ ಸ್ವಾಮಿಗಳಿಂದ ರಚಿತವಾದುದು. ಅದರ ಇತ್ತೀಚಿನ ವ್ಯಾಖ್ಯಾನವು ಪುರೈಜರುವಿನ ಅರುಣಾಚಲ ಸ್ವಾಮಿಗಳದ್ದು.

ಸಾಮಾನ್ಯ ತಮಿಳು ಗದ್ಯದಲ್ಲಿರುವ ಎರಡನೆಯ ಹಸ್ತಪ್ರತಿಯ ಕರ್ತೃ ವಿಟ್ಟಿಜರ

ನಿಜಸ್ವಾಮಿಗಳೆಂಬುವರು. ಇದು ಓರ್ವ ವೇದಾಂತಿ ಮತ್ತು ತರ್ಕಶಾಸ್ತ್ರಜ್ಞ(ನೈಯಾಯಿಕ) ರೊಳಗಿನ ಸಂವಾದವನ್ನು ಪರಿಚಯಿಸುತ್ತಿದ್ದು, ವೇದಾಂತಿಗೆ ಅನುಕೂಲಕರವಾಗಿದೆ. ಇದು ಕೂಡಾ ಕೆಲವು ವರ್ಷಗಳ ಹಿಂದೆ ಡಿಂಡಿಗಲ್ ಮುದ್ರಣಾಲಯದಲ್ಲಿ ಮುದ್ರಿತವಾಗಿ ಸ್ಥಳೀಯರಿಂದಲೇ ಪ್ರಕಾಶಿತವಾಗಿದೆ. ಈ ಪಠ್ಯದ ಅನುವಾದವನ್ನು ಮುಖ್ಯವಾಗಿ ಮೊದಲನೆಯ ಹಸ್ತಪ್ರತಿಗೆ ಇನ್ನಷ್ಟು ಸ್ಪಷ್ಟತೆಯನ್ನು ಕೊಡುವ ದೃಷ್ಟಿಯಿಂದ ಮಾಡಲಾಗಿದೆ. ಹಾಗಿದ್ದರೂ ಅಲ್ಲಲ್ಲಿ ಒಂದೆರಡು ಕಳೆಯುವಿಕೆ, ಸೇರಿಸುವಿಕೆಗಳು ನಡೆದಿರಬಹುದೆಂದು ನಾನು ಭಾವಿಸಿದ್ದೇನೆ.

ಈ ಸಂಪುಟದಲ್ಲಿಯ ಮೂರನೆಯ ಚಿಕ್ಕ ಹಸ್ತಪ್ರತಿಯನ್ನು ಸೇರ್ಪಡೆಗೊಳಿಸುವ ಸಂದರ್ಭದಲ್ಲಿ ವೇದಾಂತ ತತ್ತ್ವಶಾಸ್ತ್ರಕ್ಕೆ ಸಂಬಂಧಿಸಿದ ಸಂಕ್ಷಿಪ್ತ ಹಿನ್ನೆಲೆಯೊಂದನ್ನು ನೀಡಿ ಮೇಲಿನ ಅಂಶಗಳನ್ನು ಇನ್ನಷ್ಟು ಸ್ಪಷ್ಟಗೊಳಿಸಬೇಕೆಂಬ ಕೆಲವರ ಅಭಿಪ್ರಾಯಗಳನ್ನು ನಾನು ಅಷ್ಟಾಗಿ ಪರಿಗಣಿಸಲಿಲ್ಲ. ಯುರೋಪಿನಲ್ಲಿ ಸಂಸ್ಕೃತ ಪಠ್ಯ ದುರ್ಲಭವಾಗಿರುವುದರಿಂದ ನಾನು ನನಗೆ ದೊರೆತ ತೆಲುಗು ಲಿಪಿಯ ಪಠ್ಯವನ್ನು ರೋಮನ್ ಲಿಪಿಗಳಿಸಿ, ಹಾಗೆಯೇ ಅದನ್ನು ಮುದ್ರಿಸಿದೆ".

ಎರಡನೆಯ ಸಂಪುಟವು "ಕೈವಲ್ಯ ನವನೀತ"ದ ತಮಿಳು ಮತ್ತು ಇಂಗ್ಲಿಷ್ ಅವತರಣಿಕೆಯಾಗಿದೆ. ಜತೆಗೆ ಪದಕೋಶ, ವ್ಯಾಕರಣಾತ್ಮಕ ಟಿಪ್ಪಣಿಗಳು ಹಾಗೂ ನೂರರಷ್ಟು ವಾಕ್ಸರಣಿ ಮತ್ತು ಪರಿಕಲ್ಪನೆಗಳಿಗೆ ವಿವರಣೆ-ವ್ಯಾಖ್ಯಾನಗಳನ್ನೂ ಇಲ್ಲಿ ನೀಡಲಾಗಿದೆ. "ದ ಕುರಲ್ ಆಫ್ ತಿರುವಳ್ಳುವರ್ ಆ್ಯಂಡ್ ಎ ಸೆಂಟೆನ್ಶಿಯಸ್ ಪಾಯಮ್ ಆನ್ ದಿ ತ್ರೀ ಗೋಲ್ಸ್ ಆಫ್ ಮ್ಯಾನ್" (೧೮೫೬) ಎಂಬ ಶೀರ್ಷಿಕೆಯ 'ಬೈಬ್ಲಿಯೋಥಿಕಾ ತಮುಲಿಕಾ'ದ ಮೂರು ಮತ್ತು ನಾಲ್ಕನೆಯ ಸಂಪುಟಗಳು ದ್ರಾವಿಡಾಧ್ಯಯನಕಾರನಾಗಿ ಗ್ರಾವುಲನಿಗಿರುವ ಮಹತ್ವವನ್ನು ಪ್ರತಿಬಿಂಬಿಸುತ್ತವೆ. ೩ನೆಯ ಸಂಪುಟದಲ್ಲಿ ಗ್ರಾವುಲನು ನಮಗೆ 'ಕುರಳ್'ನ ಜರ್ಮನ್ ಭಾಷಾಂತರವನ್ನು ಅದರ ತಮಿಳು ಮೂಲ, ಸಾಮಾನ್ಯ ತಮಿಳು ಆವೃತ್ತಿ, ವ್ಯಾಕರಣಾತ್ಮಕ ಟಿಪ್ಪಣಿ ಹಾಗೂ ಪದಕೋಶಗಳೊಂದಿಗೆ ಒದಗಿಸಿಕೊಡುತ್ತಾನೆ. ಕೊನೆಯ, ನಾಲ್ಕನೆಯ ಸಂಪುಟದಲ್ಲಿ ಅವರ ಲ್ಯಾಟಿನ್ ಭಾಷಾಂತರವನ್ನೂ ಕೊಡುತ್ತಾನೆ.

ಮಹತ್ವದ ಈ ವಿದ್ವತ್ಕೃತಿಯ ಸಿದ್ಧತೆ ಮತ್ತು ಸಂಪಾದನಾ ಕಾರ್ಯಕ್ಕೆ ಗ್ರಾವುಲನಿಗೆ ೧೨ ವರ್ಷಗಳಿಗೂ ಹೆಚ್ಚಿನ ಕಾಲಾವಧಿ ತಗುಲಿರಬೇಕು. ಜತೆಗೆ ಈ ಅಧಿಕೃತ ಪಠ್ಯವನ್ನು ಪೂರ್ಣವಾಗಿ ಅನುವಾದಿಸಿದ ಮೊದಲ ಯುರೋಪಿಯನ್ ವಿದ್ವಾಂಸನೆಂಬ ಕೀರ್ತಿಯೂ ಆತನಿಗೆ ಸಲ್ಲುತ್ತದೆ. ಗ್ರಾವುಲನ ಮಾತಲ್ಲೇ ಹೇಳುವುದಾದರೆ ಈ ಕೃತಿಯು "ಅತೀ ಪ್ರಾಚೀನ ಹಾಗೂ ಶ್ರೀಮಂತವಾದ ತಮಿಳು ಸಾಹಿತ್ಯದ ಮುತ್ತು".

ಇಲ್ಲಿ 'ಕುರಳ್'ನ್ನು ಉಪನಿಷತ್ತು ಮತ್ತು ಭಗವದ್ಗೀತೆಗಳಂತಹ ಪ್ರಾಚೀನ ಸಾಂಪ್ರದಾಯಿಕ ಹಿಂದೂ ಪಠ್ಯಗಳೊಂದಿಗೆ ಹೋಲಿಸಿ, ಮೌಲ್ಯಮಾಪನ ಮಾಡುತ್ತಾ ವ್ಯಕ್ತಪಡಿಸಿದ ಪ್ರತಿಕ್ರಿಯೆಯೊಂದು ಅತ್ಯಂತ ಕುತೂಹಲಕರವಾಗಿದೆ. ಮಧ್ಯ ಆಫ್ರಿಕಾದ

ವೈದ್ಯನೂ, ಪ್ರಸಿದ್ಧ ಧರ್ಮ ಶಾಸ್ತ್ರಜ್ಞನೂ, ತತ್ತ್ವಶಾಸ್ತ್ರಜ್ಞನೂ, ಮಾನವ ಕುಲೋಪಕಾರಿಯೂ ಆದ ಅಲ್ಬರ್ಟ್ ಶ್ವ್ಯಾವಿಟ್ಸರ್‌ನು ತನ್ನ "ಇಂಡಿಯನ್ ಥಾಟ್ ಆ್ಯಂಡ್ ಇಟ್ಸ್ ಡೆವೆಲಪ್‌ಮೆಂಟ್" (೧೯೩೬) ಎಂಬ ಗ್ರಂಥದಲ್ಲಿ ಜಗತ್ತನ್ನು (ಇಹವನ್ನು) ಸ್ವೀಕರಿಸುವ ಕುರಳಿನ ಕ್ರಮವನ್ನೂ, ಅದನ್ನು ನಿರಾಕರಿಸುವ ಬ್ರಾಹ್ಮಣೀಯ ಹಿಂದೂ ಧರ್ಮದ ಕ್ರಮವನ್ನೂ ತೌಲನಿಕವಾಗಿ ನೋಡುತ್ತಾ, ಕುರಳನ್ನು ಹೀಗೆ ಪ್ರಶಂಸಿಸುತ್ತಾನೆ :

"ಪ್ರಾಚೀನ ಭಾರತದ ಜನಪ್ರಿಯ ನೀತಿಕಾವ್ಯಗಳಲ್ಲೂ ಹಲವು ಕಥೆಗಳಲ್ಲೂ ಕ್ರಿಯಾಶೀಲ ಪ್ರೀತಿಯ ಆಲೋಚನೆಗಳು ಒಡಮೂಡುತ್ತವೆ. ಸುಮಾರು ಕ್ರಿ.ಶ.೨ನೆಯ ಶತಮಾನದ ಕೃತಿಯಾದ 'ಕುರಳ್'ನಲ್ಲಿ ಕಂಡುಬರುವ ನೀತಿಸೂತ್ರಗಳಲ್ಲಿ ಈ ಅಂಶಗಳು ವಿಶೇಷವಾಗಿ ಒಡಮೂಡಿವೆ". 'ಕುರಳ್'ನ ಕುರಿತಾದ ಅವರ ಉತ್ಸಾಹ-ಸಂಭ್ರಮಗಳು ಕೆಳಗಿನ ಮಾತುಗಳಲ್ಲಿ ಒಟ್ಟುಗೂಡಿವೆ:

"ಕುರಳ್ ಕಾವ್ಯವು ಖಚಿತ ಪ್ರತಿಪಾದನೆಗಳೊಂದಿಗೆ ಸರಳವಾದ ನೈತಿಕ ಮಾನವತಾವಾದದ ಭಾವನೆಗಳನ್ನು ಚಿತ್ರಿಸುತ್ತದೆ. ಅದು ಮಾನವನ ಸ್ವಂತದ ಮತ್ತು ಪ್ರಪಂಚದೆಡೆಗಿನ ನಡತೆಗೆ ಸಂಬಂಧಿಸಿದ ವೈವಿಧ್ಯಮಯವಾದ ಪ್ರಶ್ನೆಗಳ ಕುರಿತು ಸಂವೇದನಾ ಶೀಲವಾಗಿಯೂ, ಇಂದ್ರಿಯ ಗ್ರಾಹ್ಯವಾಗುವಂತೆಯೂ ಮಾತನಾಡುತ್ತದೆ. ವಿಶ್ವಸಾಹಿತ್ಯದ ಬೇರಾವುದೇ ಸೂಕ್ತಿ ಸಂಗ್ರಹಗಳಲ್ಲೂ ಇಂತಹ ಉನ್ನತವಾದ ಜ್ಞಾನವು ದುರ್ಲಭವೆನ್ನಬಹುದು".

ನಾನೀಗ ಹರ್ಮನ್ ಗುಂಡರ್ಟ್‌ನ (೧೮೧೪-೯೩) ಕಡೆಗೆ ಮುಂದುವರಿಯುತ್ತೇನೆ ಆತನ ನೂರನೆಯ ಪುಣ್ಯತಿಥಿಯ ಅಂಗವಾಗಿ ಈ ವರ್ಷ (೧೯೯೩) ಮೇ ೧೯ರಿಂದ ೨೨ರ ವರೆಗೆ ಪಶ್ಚಿಮ ಜರ್ಮನಿಯ ಸ್ಟುಟ್‌ಗಾರ್ಟ್‌ನಲ್ಲಿ ಅಂತಾರಾಷ್ಟ್ರೀಯ ಗುಂಡರ್ಟ್ ಸಂಮೇಳನವು ನಡೆಯಿತು. ೨೦ ವರ್ಷಗಳಿಗೂ ಹೆಚ್ಚು ಕಾಲ ಆತ ಬಾಳಿ ಬದುಕಿದ ಭಾರತದ ದಕ್ಷಿಣ ಭಾಗದಲ್ಲಿ ತತ್ಸಂಬಂಧವಾದ ಆಚರಣೆಗಳು ಈಗಲೂ (ಆಗಸ್ಟ್ ೨೧, ೧೯೯೩) ಮುಂದುವರಿದಿವೆ. ಸ್ಟುಟ್ ಗಾರ್ಟ್‌ನಲ್ಲಿ ಗುಂಡರ್ಟ್ ಸಮ್ಮೇಳನವನ್ನು ನಡೆಸಲು ಕಾರಣ ವೇನು? ಮೊದಲ ಸ್ಪಷ್ಟ ಕಾರಣವೆಂದರೆ ಆತ ಅಲ್ಲಿ ಹುಟ್ಟಿದನೆಂಬುದು. ಸಾಮಾನ್ಯವಾಗಿ ತಿಳಿದಿರದ ಇನ್ನೊಂದು ಕಾರಣವೆಂದರೆ, ದಕ್ಷಿಣ-ಪಶ್ಚಿಮ ಜರ್ಮನಿಯ ಈ ನಗರವು ದಶಕಗಳಿಂದಲೂ 'ವಿದೇಶೀ ಸಂಬಂಧಗಳ ಸಂಸ್ಥೆ' (ಇನ್‌ಸ್ಟಿಟ್ಯೂಟ್ ಫಾರ್ ಆಸ್‌ಲ್ಯಾಂಡ್ ಬೆಜಹಂಜೆನ್)ಗೆ ಆತಿಥ್ಯ ಕಲ್ಪಿಸಿದೆ ಎಂಬುದು. ಹೊರದೇಶಗಳ ಸಂಸ್ಕೃತಿಗಳನ್ನು ಜರ್ಮನಿಯಲ್ಲಿ ಪ್ರಸ್ತುತ ಪಡಿಸುವುದು ಈ ಸಂಸ್ಥೆಯ ಗುರಿಯಾಗಿದೆ. (ಭಾರತದಲ್ಲಿ ತನ್ನ ಶಾಖೆಗಳನ್ನು ಹೊಂದಿರುವ, ಮ್ಯಾಕ್ಸ್ ಮುಲ್ಲರ್ ನಾಮಾಂಕಿತ ಗೋಯೆಥ್ ಸಂಸ್ಥೆಯು ಇದೇ ರೀತಿ ಜರ್ಮನಿಯ ಇತಿಹಾಸ-ಸಂಸ್ಕೃತಿಗಳನ್ನು ಪ್ರತಿನಿಧಿಸುವ ಸಲುವಾಗಿ ಕಾರ್ಯ ಪ್ರವೃತ್ತವಾಗಿದೆ.) ಪ್ರಸ್ತುತ ಉಪನ್ಯಾಸದ ಮೂಲಕ ನಾನು ಹರ್ಮನ್ ಗುಂಡರ್ಟ್ ಹಾಗೂ ದ್ರಾವಿಡಾಧ್ಯಯನ ಕ್ಷೇತ್ರದ ಆತನ ಕೆಲವು ಸಹೋದ್ಯೋಗಿಗಳ ಸ್ಮರಣಾರ್ಥವಾಗಿ ನನ್ನ ಪಾಲಿನ ಕೊಡುಗೆ ನೀಡುತ್ತಿರುವುದಕ್ಕೆ ನನಗೆ ಬಹಳ ಸಂತೋಷ ವಾಗುತ್ತಿದೆ.

೧೮೩೬ರ ಜುಲಾಯಿ ಆರಂದು ೨೨ ವರ್ಷ ಪ್ರಾಯದ ಪ್ರೊಟೆಸ್ಟೆಂಟ್ ಮಿಶನರಿಯಾದ

ಹರ್ಮನ್ ಗುಂಡರ್ಟ್‌ನು ಮದರಾಸನ್ನು ತಲುಪಿದ. ಪ್ರಾಚೀನ ಗ್ರೀಕ್ ಮತ್ತು ಹೀಬ್ರೂ ಭಾಷೆಗಳಲ್ಲಿ ಪರಿಣತನಾಗಿದ್ದ ಆತನನ್ನು ಬ್ರಿಟೀಷ್ ಮಿಶನರಿಯ ಒಡನಾಡಿಯಾಗಿದ್ದ ಆ್ಯಂಟನ್ ನಾರ‍್ರಿಸ್ ಗ್ರೋವ್ಸ್ ಎಂಬವನು ತನ್ನ ಮಕ್ಕಳಿಗೆ ಆ ಭಾಷೆಗಳನ್ನು ಕಲಿಸುವ ಸಲುವಾಗಿ ಇಲ್ಲಿಗೆ ಕರೆಯಿಸಿಕೊಂಡನು. ಈ ಅಮಂತ್ರಣವು ಭಾರತದಲ್ಲಿ ಓರ್ವ ಮಿಶನರಿಯಾಗಿ ಕೆಲಸ ಮಾಡಬೇಕೆಂಬ, ೧೮೩೩ರಷ್ಟು ಪೂರ್ವದ ಗುಂಡರ್ಟ್‌ನ ಸ್ವಂತ ಯೋಜನೆಗಳನ್ನು ಪೂರೈಸಿಕೊಳ್ಳಲು ಸಹಕಾರಿಯಾಯಿತು. ಯುರೋಪಿನಲ್ಲಿರುವಾಗಲೇ ಅಲ್ಪಸ್ವಲ್ಪ ಬೆಂಗಾಲಿ ಮತ್ತು ಹಿಂದಿ ಭಾಷೆಗಳನ್ನು ಕಲಿತಿದ್ದ ಗುಂಡರ್ಟ್‌ನು ಭಾರತದ ದಕ್ಷಿಣ ಭಾಗಕ್ಕೆ ಬಂದ ಮೇಲೆ ತೆಲುಗು ಹಾಗೂ ತಮಿಳು ಪಾಠಗಳನ್ನು ಕಲಿಯತೊಡಗಿದ. ಗ್ರೋವ್ಸನ ವಿನಂತಿಯ ಮೇರೆಗೆ ಆಗಸ್ಟ್ ೧೮೩೬ರಲ್ಲಿ ತಿರುನಲ್ವೇಲಿಗೆ ತರಳಿದ ಗುಂಡರ್ಟ್‌ನಿಗೆ ಅಲ್ಲಿ ಜರ್ಮನ್ ಮಿಷನ್ನಿನ ಮುಖ್ಯಸ್ಥನಾಗಿದ್ದ ಕಾರ್ಲ್ ರೀನಿಯಸ್‌ನ ನಿರ್ಣಾಯಕ ಪ್ರಭಾವ ಉಂಟಾಯಿತು. ರೀನಿಯಸನು ೧೮೧೪ರಲ್ಲಿ ಭಾರತಕ್ಕೆ ಬಂದಿದ್ದ. ತನ್ನ ಮಿಶನರಿ ಕೆಲಸ ಮತ್ತು ಬೈಬಲಿನ ಭಾಗಶಃ ಅನುವಾದ ಕಾರ್ಯಗಳ ಜತೆಗೆ ರೀನಿಯಸನು ತಮಿಳು-ಇಂಗ್ಲಿಷ್ ನಿಘಂಟು ಹಾಗೂ ಇಂಗ್ಲಿಷಿನಲ್ಲಿ ತಮಿಳು ವ್ಯಾಕರಣ ಗ್ರಂಥಗಳನ್ನು ರಚಿಸಿಯೂ ಹೆಸರು ಮಾಡಿದ್ದ.

೧೮೩೭ರ ಮಾರ್ಚ್ ೩೧ರಂದು ಗುಂಡರ್ಟ್‌ನು ಮದರಾಸಿಗೆ ವಾಪಸಾದ ನಂತರ ಗ್ರೋವ್ಸನಿಂದ ಚಿತ್ತೂರಿನಲ್ಲಿ ನಿಯುಕ್ತನಾದ ಆತನು ಅದೇ ವರ್ಷದ ಮೇ ೧ರಂದು ಅಲ್ಲಿಗೆ ಹೋದನು. ಒಂದು ವರ್ಷ ಕಾಲ ಅಲ್ಲಿ ಆತನು ಓರ್ವ ಧರ್ಮ ಬೋಧಕನಾಗಿಯೂ, ಶಿಕ್ಷಕನಾಗಿಯೂ ಕೆಲಸ ಮಾಡಿದ. ಜತೆಗೆ ತನ್ನ ತಮಿಳು ಅಧ್ಯಯನವನ್ನೂ ಮುಂದುವರಿಸಿದ. ೧೮೩೮ರಲ್ಲಿ ರೀನಿಯಸನು ನಿಧನ ಹೊಂದಿದಾಗ ಗುಂಡರ್ಟ್‌ನು ತಿರುನಲ್ವೇಲಿಯಲ್ಲಿ ಆತನ ಸ್ಥಾನವನ್ನು ಸ್ವೀಕರಿಸಿದ. ಅಲ್ಲಿಯ ಬಹುತೇಕ ಮಿಷನರಿಗಳು 'ಮಿಶನರಿ ಸೊಸಾಯಿಟಿ ಆಫ್ ಆಂಗ್ಲಿಕನ್ ಚರ್ಚ್'ನ್ನು ಸೇರಿದರು. ಅದರ ಮೇಲುಸ್ತುವಾರಿಯಲ್ಲಿ ಕೆಲಸ ನಿರ್ವಹಿಸಲು ಗುಂಡರ್ಟ್‌ನಿಗೆ ಅಷ್ಟು ಇಷ್ಟವಿರಲಿಲ್ಲ. ಹಾಗಾಗಿ ೧೮೩೯ರ ಮೇ ೨೯ರಂದು ಆತ ಮಂಗಳೂರಿನ ಬಾಸೆಲ್ ಮಿಶನರಿ ಸೊಸಾಯಿಟಿಯನ್ನು ಸೇರಿದನು. ಕಲ್ಲಿಕೋಟೆಯ (ಕೋಝಿಕ್ಕೋಡ್) ಕೆಳಭಾಗದ ಈ ಪ್ರದೇಶದಲ್ಲಿ ಗುಂಡರ್ಟ್‌ನು ಪ್ರಸ್ತುತ ಸೊಸಾಯಿಟಿಯನ್ನು ಸ್ಥಾಪಿಸಿ, ಅಭಿವೃದ್ಧಿ ಪಡಿಸಿದನು. ಮುಖ್ಯವಾಗಿ ಅಂಚನಕ್ಕಂಡಿ, ತಲಚ್ಚೇರಿ, ಚಿರಕ್ಕಲ್ ಮತ್ತು ಕಲ್ಲಿಕೋಟೆ (ಕೋಝಿಕ್ಕೋಡ್)ಗಳಲ್ಲಿ ಈ ಸೊಸಾಯಿಟಿಯಡಿ ಆತ ಕೆಲಸ ನಿರ್ವಹಿಸಿದನು. ಇದೇ ಅವಧಿಯಲ್ಲಿ ಗುಂಡರ್ಟ್‌ನು ಮತ್ತೊಂದು ದ್ರಾವಿಡ ಭಾಷೆಯಾದ ಮಲಯಾಳಂ ಕಡೆಗೆ ಆಸಕ್ತಿವಹಿಸಿದ. ಕೆಲ ಕಾಲದಲ್ಲೇ ಅದು ಆತನ ಅಚ್ಚುಮೆಚ್ಚಿನ ಭಾಷೆಯಾಯಿತು.

೧೮೪೯ರಲ್ಲಿ ತೀವ್ರತರವಾದ ಗಂಟಲು ಸೋಕಿನಿಂದಾಗಿ ಕಾಯಿಲೆ ಬಿದ್ದುದರಿಂದ ಕೆಲ ವರ್ಷಗಳ ಕಾಲ ಆತನನಿಗೆ ಬೋಧನೆ, ಅಧ್ಯಾಪನಗಳು ಸಾಧ್ಯವಾಗಲಿಲ್ಲ. ಹಾಗಾಗಿ ಆತ

ಉತ್ಕಟೇಚ್ಛೆಯಿಂದ ಪೂರ್ಣಪ್ರಮಾಣದಲ್ಲಿ ಸ್ವತಃ ಭಾಷಾಶಾಸ್ತ್ರೀಯ ಅನ್ವೇಷಣೆಗಳಲ್ಲಿ ತೊಡಗಿಕೊಂಡ.ಆ ವರ್ಷಗಳಲ್ಲಿ ಗುಂಡರ್ಟ್‌ನು "ಗ್ರಾಮ್ಮರ್ ಆಫ್ ದ ಮಲಯಾಳಂ ಲಾಂಗ್ಯುವೇಜ್" (ಮಲಯಾಳಂ ಭಾಷೆಯ ವ್ಯಾಕರಣ) ಗ್ರಂಥವನ್ನು ರಚಿಸಿದನು. (ಮಂಗಳೂರು, ೧೮೫೧), 'ಹೊಸ ಒಡಂಬಡಿಕೆ'ಯನ್ನು ಮಲಯಾಳಂಗೆ ಭಾಷಾಂತರಿಸಿದನು. ಮಲಯಾಳಂ ಪದ್ಯ ಮತ್ತು ಗದ್ಯಗಳನ್ನೊಳಗೊಂಡ ಸಾಹಿತ್ಯ ಸಂಪುಟವೊಂದನ್ನು ಪ್ರಕಟಿಸಿದುದಲ್ಲದೆ, ತನ್ನ ಮಲಯಾಳಂ-ಇಂಗ್ಲಿಷ್ ನಿಘಂಟುವಿನ ಕೆಲಸವನ್ನೂ ಪ್ರಾರಂಭಿಸಿದನು. ಈ ಕೃತಿಯು ಮುಂದೆ ಆತ ಜರ್ಮನಿಗೆ ಹಿಂತಿರುಗಿದ ಮೇಲೆ ಪೂರ್ಣಗೊಂಡು ೧೮೭೨ರಲ್ಲಿ ಪ್ರಕಟವಾಯಿತು. ಮಂಗಳೂರಿನಲ್ಲಿ ಕೆಲಕಾಲವಿದ್ದ ಗುಂಡರ್ಟ್‌ನನ್ನು ೧೮೫೭ರಲ್ಲಿ ಬ್ರಿಟಿಷ್ ವಸಾಹತುಶಾಹಿ ಆಡಳಿತವು ಕೆನರಾ ಮತ್ತು ಮಲಬಾರ್ ಪ್ರಾಂತಗಳ ಶಾಲೆಗಳಿಗೆ ಪರಿವೀಕ್ಷಕನನ್ನಾಗಿ ನೇಮಿಸಿತು. ಎರಡು ವರ್ಷಗಳ ನಂತರ, ಅಂದರೆ ಎಪ್ರಿಲ್, ೧೮೫೯ರಲ್ಲಿ ತನ್ನ ಆರೋಗ್ಯ ತಪ್ಪಿದುದರಿಂದ ಗುಂಡರ್ಟ್‌ನು ಭಾರತವನ್ನು ತೊರೆಯಬೇಕಾಗಿ ಬಂತು. ಮತ್ತೆ ಎಂದಿಗೂ ಆತ ಇಲ್ಲಿಗೆ ವಾಪಸಾಗಲಿಲ್ಲ.

ಜರ್ಮನಿಯಲ್ಲಿ ಕಾಲ್ವರ್ ವರ್ಲಗ್ಸ್ ವೆರೇನ್ ಎಂಬ ಪ್ರಕಾಶನ ಸಂಸ್ಥೆಯ (ಆಗ ಬೆಳೆಯುತ್ತಿದ್ದ ವಿಚಾರವಾದ ಮತ್ತು ನಾಸ್ತಿಕ ವಾದಗಳಿಗೆ ಪ್ರತಿಯಾಗಿ ಕ್ರೈಸ್ತ ನಂಬಿಕೆಗಳನ್ನು ರಕ್ಷಿಸಲು ಹಾಗೂ ಪ್ರೋತ್ಸಾಹಿಸಲು ಸ್ಥಾಪಿತವಾಗಿದ್ದ ಪ್ರತಿಷ್ಠಿತ ಪ್ರಕಾಶನ ಸಂಸ್ಥೆ) ಕಾರ್ಯಭಾರ ನಿರ್ವಹಿಸುತ್ತಿದ್ದ ಗುಂಡರ್ಟ್‌ನು ಅಲ್ಲಿಯ ಕೆಲಸ ಕಾರ್ಯಗಳ ಒತ್ತಡದ ನಡುವೆ ತನ್ನ ಮಲಯಾಳಂ ಅಧ್ಯಯನಕ್ಕೆ ಕಾಲಾವಕಾಶ ಸಿಗುತ್ತಿಲ್ಲವೆಂಬುದಾಗಿ ಅನೇಕ ಬಾರಿ ತನ್ನ ಅಸಮಾಧಾನವನ್ನು ತೋಡಿಕೊಂಡಿದ್ದಾನೆ. ೧೮೬೩ರಲ್ಲಿ ಆತ ಹೀಗೆ ಬರೆಯುತ್ತಾನೆ : "ಇಲ್ಲಿ ನನ್ನ ಸ್ಥಾನವನ್ನು ತುಂಬ ಬಲ್ಲವರು ಅನೇಕರಿದ್ದಾರೆ. ಆದರೆ ಮಲಬಾರಿಗಾಗಿ ನಾನು ಕೈಗೆತ್ತಿಕೊಂಡಿರುವ ಇಂತಹ ನಿಘಂಟನ್ನು ಬರೆಯಬಲ್ಲವರು ಯಾರೂ ಇಲ್ಲ".

ಈ ನಿಘಂಟುವಿನಿಂದಾಗಿ ಓರ್ವ ಭಾರತಾಧ್ಯಯನಕಾರನಾಗಿ ಗುಂಡರ್ಟ್‌ನ ಮಹತ್ವವೇನೆಂಬುದು ನಿಸ್ಸಂದೇಹವಾಗಿಯೂ ಬೆಳಕಿಗೆ ಬಂತು. ಇದು ಈ ಮಾದರಿಯ ಮೊತ್ತಮೊದಲ ನಿಘಂಟೇನಲ್ಲ. ಉದಾಹರಣೆಗೆ ಮಲಯಾಳಂನಲ್ಲಿ ಕವಿತೆಗಳನ್ನು ಬರೆಯುವುದರ ಜತೆಗೆ ಮಲಯಾಳಂ ನಿಘಂಟನ್ನೂ ರಚಿಸಿದ ಕೆಥೋಲಿಕ್ ಮಿಶನರಿಯಾದ ಹ್ಯಾಂಕ್ಸ್ಲಬೆನ್ (೧೬೮೯- ೧೭೩೨)ನನ್ನು ಕೇರಳೀಯರು ಖಂಡಿತವಾಗಿ ನೆನಪಿಸಿಕೊಳ್ಳುತ್ತಾರೆ. ಆತನನ್ನು ಈಗಾಲೂ ಕೆಲವರು ಪ್ರೀತಿಯಿಂದ "ಅರ್ನೋಸ್ ಪಾದ್ರಿ" ಎಂದೇ ಕರೆಯುತ್ತಾರೆ. ಆದರೆ ಗುಂಡರ್ಟ್‌ನದು ಅತ್ಯಂತ ವ್ಯವಸ್ಥಿತವಾಗಿ ಸಂಕಲಿಸಿದ, ಶಾಸ್ತ್ರೀಯವಾಗಿ ವಿನ್ಯಾಸಗೊಳಿಸಿ, ಪೂರ್ಣಗೊಳಿಸಿದ ಮೊದಲ ಮಲಯಾಳಂ-ಇಂಗ್ಲಿಷ್ ನಿಘಂಟಾಗಿದೆ. ಇಂದಿಗೂ ಮಲಯಾಳಂನ ಯಾವುದೇ ವಿದ್ಯಾರ್ಥಿಗಾಗಲಿ, ಅಧ್ಯಾಪಕರಿಗಾಗಲಿ ಇದು ಒಂದು ಪ್ರಮಾಣೀಭೂತವಾದ ಕೃತಿಯಾಗಿ ಪರಿಣಮಿಸಿದೆ. (ನಿಮಗೀಗಾಗಲೇ ತಿಳಿಸಿರುವಂತೆ ಇದರ ಪ್ರಕಟಣೆಯ ಶತಾಬ್ದಿಯ ಸಂಕೇತವಾಗಿ ೧೯೭೩ರಲ್ಲಿ ಕೊಟ್ಟಾಯಂನಲ್ಲಿ ಪ್ರಸ್ತುತ ಕೃತಿಯ ಎರಡನೆಯ ಆವೃತ್ತಿಯೂ ಬೆಳಕು ಕಂಡಿದೆ.)

ನಿಘಂಟುವಿನ ಪ್ರಸ್ತಾವನೆಯಲ್ಲಿ ಗುಂಡರ್ಟ್‌ನು ತಾನು ಸಾಮಗ್ರಿ ಸಂಗ್ರಹಿಸಿದ ಬಗೆಯನ್ನು ಈ ರೀತಿ ವಿವರಿಸುತ್ತಾನೆ :

"ಇಪ್ಪತ್ತೈದು ವರ್ಷಗಳಿಗೂ ಮೇಲ್ಪಟ್ಟು, ನಾನು ಭಾಷಾಧ್ಯಯನದಲ್ಲಿ ನಿರತನಾಗಿದ್ದ ಕಾಲಾವಧಿಯಲ್ಲಿ ಈ ಕೃತಿಗಾಗಿ ಸಾಮಗ್ರಿ ಸಂಗ್ರಹ ಕಾರ್ಯವನ್ನೂ ಮಾಡಿದೆ. ಲಭ್ಯ ಆಕರಗಳಿಂದ, ಎಲ್ಲಾ ಜಾತಿ, ವೃತ್ತಿಗಳ ಜನರ ಬಾಯಿಗಳಿಂದ, ವಿವಿಧ ಜಿಲ್ಲೆಗಳಲ್ಲಿಯ ಹಲವು ಪತ್ರ ಹಾಗೂ ದಾಖಲೆಗಳಿಂದ, ಅದೇ ರೀತಿ ಎಲ್ಲಾ ವಯೋಮಾನದ ಗದ್ಯ-ಪದ್ಯ ಬರಹಗಾರರಿಂದ ಪದಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ".

ಕುತೂಹಲದ ಸಂಗತಿಯೆಂದರೆ, ಗ್ರಿಮ್ ಸಹೋದರರು (ಜೇಕಬ್ ಮತ್ತು ವಿಲ್‌ಹೆಲ್ಮ್) ಕೂಡಾ ರಮ್ಯ ಚಳುವಳಿಯು ಎಚ್ಚೆತ್ತುಕೊಂಡ ಸಂದರ್ಭದಲ್ಲಿ ತಮ್ಮ "ಡ್ಯೂಶ್ಚೆಸ್ ವಾರ್ಟರ್ ಬುಚ್" (ಜರ್ಮನ್ ನಿಘಂಟು) ಕೃತಿಯ ರಚನೆಗಾಗಿ ಇದೇ ಮಾದರಿಯಲ್ಲಿ ಸಾಮಗ್ರಿಗಳನ್ನು ಸಂಗ್ರಹಿಸಿರುವುದು. ೧೮೫೪ರಲ್ಲಿ ಪ್ರಕಟವಾದ ಅದರ ಮೊದಲ ಸಂಪುಟಕ್ಕಾಗಿ ಅವರು ಜನಪದ-ಅತಿಮಾನುಷ (ರಮ್ಯ) ಕಥೆಗಳಿಂದ, ಸಾಹಿತ್ಯದಿಂದ, ಉಪಭಾಷೆ-ಗ್ರಾಮ್ಯಭಾಷೆ ಗಳಿಂದ, ಕಛೇರಿ ದಾಖಲೆಗಳಿಂದ, ದಿನಚರಿ ಇತ್ಯಾದಿಗಳಿಂದ ಸಾಮಗ್ರಿಗಳನ್ನು ಸಂಗ್ರಹಿಸಿ ದ್ದಾರೆ.

ದ್ರಾವಿಡ ಭಾಷೆಗಳೊಳಗೆ, ಅದರಲ್ಲೂ ಮುಖ್ಯವಾಗಿ ಮಲಯಾಳಂ ಮತ್ತು ತಮಿಳು ಗಳೊಳಗೆ ಆತ್ಮೀಯ ಅಂತರ್ಸಂಬಂಧಗಳಿರುವುದನ್ನು ಗುಂಡರ್ಟ್‌ನು ಒತ್ತಿ ಹೇಳುತ್ತಾನೆ. ಅವುಗಳನ್ನು ಗೆರೆ ಕೊರೆದು ಪ್ರತ್ಯೇಕಿಸುವುದೂ ಕಷ್ಟಸಾಧ್ಯವೆನ್ನುತ್ತಾನೆ. ಈ ಬಗ್ಗೆ ಅವನದೇ ಮಾತುಗಳನ್ನು ಗಮನಿಸೋಣ :

"ಆ ಎರಡು ಹಳೆಯ ಭಾಷೆಗಳು ದ್ರಾವಿಡ ಕುಟುಂಬಕ್ಕೆ ಸೇರಿದ ಒಂದೇ ಸದಸ್ಯ ಭಾಷೆಯ ಎರಡು ಉಪಭಾಷೆಗಳೆಂಬ ನೆಲೆಯಲ್ಲಷ್ಟೆ ಅವುಗಳೊಳಗೆ ಭಿನ್ನತೆ ಗೋಚರ ವಾಗುತ್ತದೆ."

ಇದೇ ದೃಷ್ಟಿಕೋನವನ್ನು ದ್ರಾವಿಡ ಭಾಷಾತಜ್ಞರಾಗಿದ್ದ ಗ್ರಾವುಲ್ ಮತ್ತು ಇತರರೂ ಹೊಂದಿದ್ದರೆಂಬುದನ್ನು ನಾವು ನೆನಪಿಸಿಕೊಳ್ಳಬಹುದಾಗಿದೆ. ಉದಾಹರಣೆಗೆ ಪ್ರಾಚೀನ ತಮಿಳು ಪಠ್ಯಗಳಲ್ಲೂ, ಶೈವ ಸಿದ್ಧಾಂತದಲ್ಲೂ ಪರಿಣತನಾಗಿದ್ದ ಹಿಲ್ಕೋ ಡಬ್ಲ್ಯು ಶ್ಕೋಮರಸ್ (೧೮೭೯ -೧೯೪೫) ಹೇಳುವ ಮಾತುಗಳನ್ನು ಇಲ್ಲಿ ಗಮನಿಸಬಹುದು :

"ಮಲಯಾಳಂ ಭಾಷೆಯು ಪ್ರಾಯಶಃ ತಮಿಳಿನ ಒಂದು ಉಪಭಾಷಾ ರೂಪವಾಗಿ ಹುಟ್ಟಿಕೊಂಡಿರಬೇಕು. ಹಾಗಿದ್ದರೂ ಕಾಲಕ್ರಮೇಣ ಅದು ಸಂಸ್ಕೃತ ಪದಗಳನ್ನು ವ್ಯಾಪಕ ಪ್ರಮಾಣದಲ್ಲಿ ಸ್ವೀಕರಿಸಿಕೊಂಡು, ಒಂದು ಪ್ರತ್ಯೇಕ (ಸ್ವತಂತ್ರ) ಭಾಷೆಯಾಗಿ ಬೆಳೆದು ನಿಂತಿತು."

ಈ ನಿಘಂಟನ್ನು ಸಿದ್ಧಪಡಿಸುವಲ್ಲಿ ಗುಂಡರ್ಟ್‌ನು ಪದೋತ್ಪತ್ತಿಶಾಸ್ತ್ರ ವಿಧಾನವನ್ನು ಅನುಸರಿಸಿದ್ದಾನೆ. ಪ್ರತಿಯೊಂದು ಪದದ ಮೂಲವನ್ನು ಹುಡುಕುವಲ್ಲಿ, ಸಂಸ್ಕೃತ ಹಾಗೂ

ಇತರ ಭಾಷೆಗಳಿಂದ ಬಂದಿರಬಹುದಾದ ಪದಗಳನ್ನು ಗುರುತಿಸುವಲ್ಲಿ, ಅಂಥ ಪದಗಳು ಕಾಲ ಕ್ರಮೇಣ ವ್ಯಾವಹಾರಿಕ ಮತ್ತು ಗ್ರಾಮ್ಯ ಮಲಯಾಳಂನ ಭಾಗವಾಗಿ ಪರಿಣಮಿಸಿದುದನ್ನು ಪತ್ತೆ ಹಚ್ಚುವಲ್ಲಿ ಈ ವಿಧಾನವನ್ನು ನಾವು ಗಮನಿಸಬಹುದು. ಪ್ರಾಂತಭೇದ (ಪ್ರಾಂತೀಯತೆ), ಅಸಭ್ಯರೂಪಾಂತರಗಳನ್ನು ಆತ ಉಲ್ಲೇಖಿಸುತ್ತಾನೆ. ಸಾವಿರದ ನೂರಕ್ಕೂ ಹೆಚ್ಚು ಪುಟಗಳುಳ್ಳ ಪ್ರಸ್ತುತ ಕೃತಿಯಲ್ಲಿ ತಮಿಳು, ಕನ್ನಡಗಳಂತಹ ಇತರ ದ್ರಾವಿಡ ಭಾಷೆಗಳೊಂದಿಗೆ ಮಲಯಾಳಂ ಪದಗಳಿಗಿರುವ ಸಂಪರ್ಕ-ಸಂಬಂಧಗಳೂ ಉಲ್ಲೇಖಗೊಂಡಿವೆ.

ಭಾರತ ಹಾಗೂ ಭಾರತೀಯರ ಕುರಿತು ಗುಂಡರ್ಟ್‌ನ ಸಮೀಪನ (ಅಧ್ಯಯನ ವಿಧಾನ)ವು ಹೆಚ್ಚು ಕಡಿಮೆ ಜೀಗನ್‌ಬಾಲ್ಗನದನ್ನೇ ಹೋಲುತ್ತದೆ. ಆತ ಕೂಡಾ ಕ್ರೈಸ್ತೇತರರ ನಡುವೆ ಸುವಾರ್ತೆಯನ್ನು ಪ್ರಚಾರಪಡಿಸುವುದಷ್ಟೇ ತನ್ನ ಕೆಲಸವಲ್ಲವೆಂದು ಭಾವಿಸಿದ್ದನು. ಎರಡು ಭಾಷೆ ಮತ್ತು ಸಾಹಿತ್ಯಗಳನ್ನು ಪರಸ್ಪರ ಯಾವುದೇ ಪೂರ್ವಾಗ್ರಹವಿಲ್ಲದೆ ಅರ್ಥೈಸಿಕೊಳ್ಳಲು, ಪರಸ್ಪರರ ಜೀವನ ದೃಷ್ಟಿ ಹಾಗೂ ಲೋಕದೃಷ್ಟಿಗಳನ್ನು ಅರಿತುಕೊಳ್ಳಲು ಎರಡು ಮಹಾನ್ ಸಂಸ್ಕೃತಿ ಮತ್ತು ಅವುಗಳ ಧರ್ಮಗಳೊಳಗೆ ಪರಸ್ಪರ ಮುಕ್ತ ಮುಖಾಮುಖಿಯಾಗಬೇಕೆಂಬುದು ಆತನ ಉದ್ದೇಶವಾಗಿತ್ತು. ತನ್ನ ನಿಘಂಟುವಿನ ಪ್ರಸ್ತಾವನೆಯನ್ನು ಗುಂಡರ್ಟ್‌ನು ಈ ಕೆಳಗಿನ ಕಳಕಳಿಯ ಮಾತುಗಳೊಂದಿಗೆ ಕೊನೆಗೊಳಿಸುತ್ತಾನೆ :

"ಈ ಮಹತ್ವದ ಕೆಲಸವೊಂದನ್ನು ಕೈಗೆತ್ತಿಕೊಂಡ ಮಾತ್ರಕ್ಕೆ ಪರಿಪೂರ್ಣತೆ ಹಾಗೂ ಶುದ್ಧತೆಯ ದೃಷ್ಟಿಯಿಂದ ಸಮಗ್ರತೆಯನ್ನು ಸಾಧಿಸಿದಂತಾಯಿತೆಂದು ಹೇಳಿಕೊಳ್ಳುವಂತಿಲ್ಲ. ಆದರೂ ಇಂತಹ ಒಂದು ಪ್ರಕಟಣೆಯ ಆವಶ್ಯಕತೆ ಮಲಬಾರಿನಲ್ಲಿತ್ತು; ಅದನ್ನು ಪೂರೈಸಿದುದರಿಂದ ಆ ಪ್ರಾಂತದ ಶಿಕ್ಷಣಕ್ಕೆ ಉಪಯೋಗವಾಯಿತು ಎಂಬ ಗ್ರಹಿಕೆ ಈ ಕೃತಿಕಾರನದು".

ಶಿಕ್ಷಣ ಸಂಬಂಧಿ ವಿಷಯಗಳನ್ನು ಗುಂಡರ್ಟ್‌ನು ಒಂದು ಪಂಥಾಹ್ವಾನವಾಗಿ ಸ್ವೀಕರಿಸಿದಂತಿದೆ. ಅದಕ್ಕಾಗಿಯೇ ಆತ ಮಲಯಾಳಂ ಗಾದೆಗಳ ಸಂಗ್ರಹವೊಂದನ್ನು ಸಂಕಲಿಸಿದ. ಅದೇ ರೀತಿ ಪ್ರಾಥಮಿಕ ಹಾಗೂ ಪ್ರೌಢ (ಉನ್ನತ) ಶಿಕ್ಷಣಕ್ಕಾಗಿ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಿದ.

ಗುಂಡರ್ಟ್‌ನ ಬಹುಪಾಲು ಹಸ್ತಪ್ರತಿಗಳನ್ನು (ಕಾಗದ, ಅದೇ ರೀತಿ ತಾಡವೋಲೆ ಪ್ರತಿಗಳು) ಟ್ಯೂಬಿಂಗನ್ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿಡಲಾಗಿದೆ. (ಭಾರತಕ್ಕೆ ಬರುವ ಮುನ್ನ ಆತ ದಕ್ಷಿಣ-ಪಶ್ಚಿಮ ಜರ್ಮನಿಯ ಈ ಪ್ರತಿಷ್ಠಿತ ವಿಶ್ವವಿದ್ಯಾಲಯದಲ್ಲಿ ಧರ್ಮಶಾಸ್ತ್ರ ಮತ್ತು ತತ್ತ್ವಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದ.) ಕೆಲವೇ ಕೆಲವು ಹಸ್ತಪ್ರತಿಗಳು ಸ್ವಿಟ್ಸರ್‌ಲೆಂಡಿನ ಬಾಸೆಲ್ ಮಿಶನ್ ಪತ್ರಾಗಾರದಲ್ಲಿವೆ.

೧೮೫೬ರಲ್ಲಿ, ಟ್ಯೂಬಿಂಗನ್‌ನಲ್ಲಿ ಸಂಸ್ಕೃತ ಪೀಠವೊಂದು ಸ್ಥಾಪನೆಯಾದಂದಿನಿಂದ, ವೈದಿಕ ಸಾಹಿತ್ಯಕ್ಕೆ ಸಂಬಂಧಪಟ್ಟ ತನ್ನ ಗ್ರಂಥದ ಮೂಲಕ ಜರ್ಮನಿಯಲ್ಲಿ ವಿಮರ್ಶಾತ್ಮಕ

ವೈದಿಕ ಸಾಹಿತ್ಯ ಸಂಶೋಧನೆಗೆ ನಾಂದಿ ಹಾಡಿದ ರುಡೋಲ್ಫ್ ವೊನ್ ರೊಥ್‌ನು (೧೮೨೨-೯೬) ಅದರ ಕಾರ್ಯಭಾರವನ್ನು ವಹಿಸಿಕೊಂಡಂದಿನಿಂದ ಆ ಸ್ಥಳವು (ಟ್ಯೂಬಿಂಗನ್) ಜರ್ಮನ್ ಭಾರತಾಧ್ಯಯನದ ಒಂದು ಪ್ರಮುಖ ಕೇಂದ್ರವಾಯಿತು. ೧೮೯೫ರಲ್ಲಿ ರೋಥನ್ನನ ಉತ್ತರಾಧಿಕಾರಿಯಾಗಿ ಬಂದ ರಿಚಾರ್ಡ್ ವೊನ್ ಗಾರ್ಬೆಯು ತತ್ತ್ವಶಾಸ್ತ್ರದ ಸಾಂಖ್ಯ ಮತ್ತು ಯೋಗಶಾಖೆಗಳಲ್ಲಿ ಪರಿಣತನಾಗಿದ್ದನು. ಜತೆಗೆ ಭಗವದ್ಗೀತೆಯ ಮೂಲ ಪಠ್ಯವನ್ನು ಪುನಾರಚಿಸುವ ಕಾರ್ಯದಲ್ಲೂ ಪ್ರಸಿದ್ಧನಾಗಿದ್ದನು. ಹೆಲ್ಮುಥ್ ವೊನ್ ಗ್ಲಾಸೆನಾಪ್‌ನು (೧೮೯೧-೧೯೬೩) ಜೈನ, ಬೌದ್ಧ ಧರ್ಮಗಳಲ್ಲಿ ತಜ್ಞನಾಗಿದ್ದುದಲ್ಲದೆ, ದಕ್ಷಿಣದ ಮಹಾನ್ ಸಂಪ್ರದಾಯಗಳಾದ ವೈಷ್ಣವ ಮತ್ತು ಶೈವ ಸಿದ್ಧಾಂತಗಳಲ್ಲೂ ಪಾರಂಗತನಾಗಿದ್ದನು. ನಮ್ಮ ಕಾಲಕ್ಕೆ ಬಂದೆವೆಂದಾದರೆ ಫಾಹುಲ್ ಥೀಮೆಯು (ಜನನ: ೧೯೦೫) ಪಾಣಿನಿಯ ಕುರಿತು ವ್ಯಾಪಕವಾದ ಸಂಶೋಧನೆ ನಡೆಸಿ ಪ್ರಸಿದ್ಧನಾದನು. ಇವರೆಲ್ಲಾ ಈ ಸಣ್ಣ ರಮ್ಯ ಟ್ಯೂಬಿಂಗನ್ ನಗರದಲ್ಲಿನ ಭಾರತಶಾಸ್ತ್ರ ಸಂಶೋಧನೆಯ ಮಾದರಿ ಪ್ರತಿನಿಧಿಗಳು.

ಹರ್ಮನ್ ಗುಂಡರ್ಟ್‌ನು ಮಲಯಾಳಂ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಏನು ಕೆಲಸ ಮಾಡಿದನೋ, ಅಂತಹುದೇ ಕೆಲಸವನ್ನು ಆತನ ಸಮಕಾಲೀನನೂ, ಬಾಸೆಲ್ ಮಿಶನ್‌ನಲ್ಲಿ ಆತನ ಸಹೋದ್ಯೋಗಿಯೂ ಆಗಿದ್ದ ಫರ್ಡಿನೆಂಡ್ ಕಿಟ್ಟೆಲನು (೧೮೩೨-೧೯೦೩) ಕನ್ನಡದ ವ್ಯವಸ್ಥಿತವಾದ ಅಧ್ಯಯನದ ಮೂಲಕ ಕೈಗೊಂಡನು.

೧೮೫೩ರಲ್ಲಿ ಭಾರತಕ್ಕೆ ಬಂದ ಕಿಟ್ಟೆಲನು ಮುಖ್ಯವಾಗಿ ಧಾರವಾಡ, ಮಂಗಳೂರುಗಳಲ್ಲೂ, ಆನಂತರ ಮಡಿಕೇರಿಯಲ್ಲೂ ಕಾರ್ಯನಿರ್ವಹಿಸಿದನು. ಮಂಗಳೂರಿನಲ್ಲಿದ್ದಾಗ ಮಿಶನ್ಸ್ ಪ್ರೌಢಶಾಲೆಯನ್ನು ನಡೆಸುವ ಜವಾಬ್ದಾರಿ ಆತನದಾಗಿತ್ತು. ಹಾಗಾಗಿ ಹಲವಾರು ಪಠ್ಯಪುಸ್ತಕಗಳನ್ನು ಸಂಪಾದಿಸುವ ಕಾರ್ಯದಲ್ಲಿ ಆತ ವಿಶೇಷ ಆಸಕ್ತಿವಹಿಸಿದನು. ಅವುಗಳಲ್ಲಿ "ದ ಸ್ಕೂಲ್ ಆಫ್ ಪಂಚತಂತ್ರ ಆ್ಯಂಡ್ ಎ ಕೆನರೀಸ್ ಪೊಯೆಟಿಕಲ್ ಆ್ಯಂಥೋಲಜಿ" ಎಂಬ ಪುಸ್ತಕವು ಇಂದಿಗೂ ಶಾಲಾ ಪರೀಕ್ಷೆಗಳಿಗೆ ಬಳಕೆಯಾಗುತ್ತದೆ. ೧೮೬೫ರಲ್ಲಿ ಪ್ರಕಟವಾದ ಕಿಟ್ಟೆಲ್‌ನ 'ವ್ಯಾಕರಣ ಸೂತ್ರಗಳು' ಎಂಬ ಸಂಕ್ಷಿಪ್ತ ಕನ್ನಡ ವ್ಯಾಕರಣ ಗ್ರಂಥವು ಇಂದಿಗೂ ಜನಪ್ರಿಯವಾಗಿದೆ. ನಾಗವರ್ಮನ ಛಂದೋಂಬುಧಿಯ ಪಠ್ಯಗಳನ್ನು ಅವನು ವಿಸ್ತೃತ ಪ್ರಸ್ತಾವನೆಯೊಂದಿಗೆ ಅತ್ಯಂತ ಶ್ರದ್ಧೆಯಿಂದ, ವಿಶ್ವಾಸಾರ್ಹವೆನಿಸುವ ರೀತಿಯಲ್ಲಿ ಸಂಪಾದಿಸಿಕೊಟ್ಟಿದ್ದಾನೆ. ೧೮೭೫ರಲ್ಲಿ ಕನ್ನಡ ಸಾಹಿತ್ಯ ಕುರಿತು ಪ್ರಬಂಧವೊಂದನ್ನು ಬರೆದನು. ಅದೇ ವರ್ಷದಿಂದ ಅವನ ಬಹುಮುಖ್ಯ ಪ್ರಕಟಣೆಯಾದ 'ಕನ್ನಡ-ಇಂಗ್ಲಿಷ್ ನಿಘಂಟು'ವಿಗಾಗಿ ಸಾಮಗ್ರಿ ಸಂಗ್ರಹ ಕಾರ್ಯವನ್ನೂ ಆತ ಪ್ರಾರಂಭಿಸಿದನು.

ಗುಂಡರ್ಟ್‌ನಂತೆ ಕಿಟ್ಟೆಲ್ ಕೂಡಾ ಸುಮಾರು ೧೨ ಶತಮಾನಗಳ ಕಾಲಾವಧಿಯ ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಕನ್ನಡ (ಸಾಹಿತ್ಯ)ದಿಂದ ಸಾಮಗ್ರಿಗಳನ್ನು ಸಂಗ್ರಹಿಸಿದನು. ಅದರ ಮೊದಲ ಕರಡನ್ನು ಸಿದ್ಧಪಡಿಸುವ ಸಲುವಾಗಿ ಅವನು ೧೮೭೭ರಲ್ಲಿ ಜರ್ಮನಿಗೆ ಹೋದನು. ೧೮೮೩ರಲ್ಲಿ ಭಾರತಕ್ಕೆ ವಾಪಸಾದ ಮೇಲೆ ಹಲವು ಮಂದಿ

ಭಾರತೀಯ ಪರಿಣತರನ್ನು ಸಂದರ್ಶಿಸಿ, ಅಗತ್ಯ ಕಂಡಲ್ಲಿ ಅವರ ಸಲಹೆಗಳನ್ನು ಅಳವಡಿಸಿಕೊಂಡು, ತನ್ನ ಕೃತಿಯನ್ನು ಪರಿಷ್ಕರಿಸಿದನು. ಈ ಕಾರ್ಯಕ್ಕೆ ಆತನಿಗೆ ಹೆಚ್ಚುವರಿಯಾಗಿ ಒಂಬತ್ತು ವರ್ಷಗಳು ತಗುಲಿದವು. ೧೮೯೨ರಲ್ಲಿ ಮತ್ತೆ ಜರ್ಮನಿಗೆ ತೆರಳಿದ ಕಿಟ್ಟೆಲನು ಭಾರತಾಧ್ಯಯನದ ಕೇಂದ್ರವಾದ ಟ್ಯೂಬಿಂಗನ್‌ನಲ್ಲಿ ನೆಲಸಿ, ಬಾಸೆಲ್ ಮತ್ತು ಲೇಪ್ಸಿಗ್‌ನಲ್ಲಿ ನಡೆಯುತ್ತಿದ್ದ ನಿಘಂಟುವಿನ ಮುದ್ರಣಕಾರ್ಯದ ಮೇಲುಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದ. ಕೊನೆಗೆ ೧೮೯೪ರಲ್ಲಿ ೧೭೫೨ ಪುಟಗಳ ಈ ಮಾದರಿ ಕೃತಿಯು ಮಂಗಳೂರಿನ ಪುಸ್ತಕದಂಗಡಿಗಳಲ್ಲಿ ಲಭಿಸುವಂತಾಯಿತು.

ಸಂಸ್ಕೃತ ಹಾಗೂ ದ್ರಾವಿಡ ಭಾಷಾಬಾಂಧವ್ಯಕ್ಕೆ ಸಂಬಂಧಿಸಿದ ವಿವಾದಾತ್ಮಕ ಪ್ರಶ್ನೆಯ ಕುರಿತು ಕಿಟ್ಟೆಲನು ತನ್ನ ಪ್ರಸ್ತಾವನೆಯಲ್ಲಿ ೫೦ ಪುಟಗಳ ಟಿಪ್ಪಣಿಯನ್ನು ಬರೆಯುತ್ತಾನೆ :

"ಕನ್ನಡವು ಸಂಸ್ಕೃತದಿಂದ ಯಥಾರೂಪದಲ್ಲಿ ಅಥವಾ ತದ್ಭವ ರೂಪದಲ್ಲಿ ಅಸಂಖ್ಯ ಪದಗಳನ್ನು ಸ್ವೀಕರಿಸಿರುವುದು ಜನಜನಿತ ಸತ್ಯ. ಅದೇ ರೀತಿ ಸಂಸ್ಕೃತ ನಿಘಂಟುಗಳೂ ಅಸಂಖ್ಯ ದ್ರಾವಿಡ ಶಬ್ದಗಳನ್ನು ಒಳಗೊಂಡಿವೆಯೆಂಬುದನ್ನು "ದ ಜರ್ನಲ್ ಆಫ್ ದ ಜರ್ಮನ್ ಓರಿಯೆಂಟಲ್ ಸೊಸಾಯಿಟಿ" (ಸಂ.೨೩, ೧೮೬೯)ಯಲ್ಲಿ ಡಾ.ಎಚ್.ಗುಂಡರ್ಟ್ ಅವರು, 'ಕಂಪೇರೇಟಿವ್ ಗ್ರಾಮರ್ ಆಫ್ ದಿ ಡ್ರಾವೀಡಿಯನ್ ಲ್ಯಾಂಗುವೇಜಸ್‌ನಲ್ಲಿ (೨ನೆಯ ಆವೃತ್ತಿ; ೧೮೭೫) ಡಾ. ಆರ್.ಕಾಲ್ಡ್‌ವೆಲ್ ಅವರು ಮತ್ತು 'ದ ಬಾಂಬೆ ಇಂಡಿಯನ್ ಆ್ಯಂಟಿಕ್ವೆರಿ'ಯಲ್ಲಿ (ಆಗಸ್ಟ್ ೧೮೭೨) ಇದೇ ನಿಘಂಟು ಕರ್ತೃ ಕೆಲಮಟ್ಟಿಗೆ ತೋರಿಸಿಕೊಟ್ಟಿದ್ದಾರೆ."

ಗುಂಡರ್ಟ್‌ನ 'ಮಲಯಾಳಂ-ಇಂಗ್ಲಿಷ್ ನಿಘಂಟು'ವಿನಂತೆ ಕಿಟ್ಟೆಲನ 'ಕನ್ನಡ-ಇಂಗ್ಲಿಷ್ ನಿಘಂಟು' ಕೂಡಾ ಇಂದಿಗೂ ಅಪ್ರತಿಮ ಕೃತಿಯಾಗಿ ನೆಲೆನಿಂತಿದೆ.

ಕೊನೆಯದಾಗಿ, 'ಭಾರತದಲ್ಲಿ ಲಿಂಗಾರಾಧನೆಯ ಮೂಲ' (ದ ಒರಿಜಿನ್ ಆಫ್ ದ ಲಿಂಗ ಕಲ್ಟ್ ಇನ್ ಇಂಡಿಯಾ)ದ ಕುರಿತು ಕಿಟ್ಟೆಲನು ನಡೆಸಿದ ವಿದ್ವತ್‌ಪೂರ್ಣವಾದ ಅಧ್ಯಯನವನ್ನು ನಾನಿಲ್ಲಿ ಪ್ರಸ್ತಾಪಿಸಬಯಸುತ್ತೇನೆ. ೧೮೭೬ರಲ್ಲಿ ಮಂಗಳೂರಿನ ಬಾಸೆಲ್ ಮಿಶನ್‌ನಿಂದ ಪ್ರಕಟವಾದ ಈ ಅಧ್ಯಯಯನ ಪ್ರಬಂಧವು ಪ್ರಾಚೀನ ಹಿಂದೂ ಧಾರ್ಮಿಕ ಮತ್ತು ಆಧ್ಯಾತ್ಮಿಕ ಸಂಗತಿಗಳ ಅತ್ಯಮೂಲ್ಯ ಮಾಹಿತಿಗಳನ್ನು ಒಳಗೊಂಡಿದೆ.

ದ್ರಾವಿಡಾಧ್ಯಯನ ಕ್ಷೇತ್ರದಲ್ಲಿನ ಇನ್ನೂ ಹಲವು ಜರ್ಮನ್ ವಿದ್ವಾಂಸರ ಬಗೆಗೆ ಪ್ರಸ್ತಾಪಿಸಬೇಕಷ್ಟೆ. ಅಂಥವರಲ್ಲಿ ಟ್ರಾಂಕ್ವುಬಾರ್‌ನಲ್ಲಿ ಜೀಗನ್ ಬಾಲ್ಗನ ಉತ್ತರಾಧಿಕಾರಿಗಳಲ್ಲೊಬ್ಬನಾಗಿದ್ದ ಜಾಹೆನ್ನೆಸ್ ಫ್. ಫ್ಯಾಬ್ರಿಸಿಯಸ್‌ನು ಬ್ರೆಯಿಥಾಪ್ಟ್ ಎಂಬವನ ಜತೆಸೇರಿ "ಮಲಬಾರ್ ಆ್ಯಂಡ್ ಇಂಗ್ಲಿಷ್ ಡಿಕ್ಷನರಿ" (೧೭೭೯)ಯನ್ನು ರಚಿಸಿದನು. ಇದೇ ನಿಘಂಟನ್ನಾಧರಿಸಿ ಜೋಹನ್ ಪಿ.ರಾಟ್ಲರ್‌ನು 'ತಮಿಳ್-ಇಂಗ್ಲಿಷ್ ಡಿಕ್ಷನರಿ'ಯನ್ನು ರಚಿಸಿದನು. (೧೮೩೪) ತೀರಾ ಇತ್ತೀಚೆಗೆ (೧೯೪೩) ಹರ್ಮನ್ ಬೇಯ್ಥನ್ ಎಂಬವನು ಆಧುನಿಕ ವ್ಯಾವಹಾರಿಕ ತಮಿಳಿನ ವ್ಯಾಕರಣವನ್ನು ರಚಿಸಿದನು.

೧೮೮೬ ರಿಂದ ೧೯೦೩ರ ವರೆಗೆ ಮದರಾಸು ಸರಕಾರದ ಶಾಸನಶಾಸ್ತ್ರಜ್ಞನಾಗಿದ್ದ, ಅದೇ ರೀತಿ ಮದರಾಸು ವಿಶ್ವವಿದ್ಯಾಲಯದ ಸಂಸ್ಕೃತ ಪರೀಕ್ಷಕ ಮತ್ತು ಫಲೋ ಆಗಿದ್ದ ಯೂಜೆನ್ ಹಲ್ಟ್ಷ (೧೮೫೭-೧೯೨೭)ನ ಹೆಸರನ್ನು ಇಲ್ಲಿ ವಿಸ್ತೃತವಾಗಿ ಉಲ್ಲೇಖಿಸಲೇ ಬೇಕು. ಮುಖ್ಯವಾಗಿ ಮೂರು ಸಂಪುಟಗಳ 'ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್' (ಮದರಾಸು, ೧೮೯೦-೧೯೦೩)ನ ಸಂಪಾದಕನಾಗಿ ಆತನ ಹೆಸರು ಉಲ್ಲೇಖನೀಯ. ಇಲ್ಲಿಯ ಬಹುಪಾಲು ಶಾಸನಗಳನ್ನು ತಂಜಾವೂರು ಮತ್ತು ಉತ್ತರ ಆರ್ಕಾಟ್ ಜಿಲ್ಲೆಗಳ ಮಹಾಬಲಿ ಪುರಂ,ಕಾಂಚೀಪುರಂ ಪ್ರದೇಶಗಳಿಂದ ಸಂಗ್ರಹಿಸಲಾಗಿದೆ. ಮೂರು ಸಂಪುಟಗಳ "ರಿಪೋರ್ಟ್ಸ್ ಆನ್ ಸಂಸ್ಕೃತ್ ಮ್ಯಾನುಸ್ಕ್ರಿಪ್ಟ್ಸ್ ಇನ್ ಸೌತ್ ಇಂಡಿಯಾ" (ಮದರಾಸು, ೧೮೯೫-೧೯೦೫) ಎಂಬ ಆತನ ಕೃತಿಯೂ ಇಲ್ಲಿ ಉಲ್ಲೇಖನೀಯ.

ತಮಿಳು, ಮಲಯಾಳಂ, ಕನ್ನಡ ಮತ್ತು ತೆಲುಗು ಎಂಬೀ ನಾಲ್ಕು ದ್ರಾವಿಡ ಭಾಷೆಗಳಲ್ಲಿ ಪರಿಣತನಾಗಿದ್ದ ಓಟ್ಟೋ ಶ್ರೇಡರ್(೧೮೭೬-೧೯೬೧) ಕೂಡಾ ಹಲ್ಟ್ಷನಂತೆ ವಿಶೇಷವಾಗಿ ನಮ್ಮ ಗಮನವನ್ನು ಸೆಳೆಯುತ್ತಾನೆ. ೧೯೦೫ರಿಂದ ೧೯೧೪ರ ವರೆಗೆ (ಲೋಕ ಮಹಾಯುದ್ಧ ಪ್ರಾರಂಭವಾದ ಕಾಲಘಟ್ಟ) ಈತನ ನಿರ್ದೇಶಕತ್ವದಲ್ಲಿ ಅಡ್ಯಾರ್‌ನ (ಮದರಾಸು) ಥಿಯೋ ಸಾಫಿಕಲ್ ಸೊಸಾಯಿಟಿ ಗ್ರಂಥಾಲಯವು ಪ್ರಥಮ ದರ್ಜೆಯ ವಿದ್ವತ್ ಸಂಸ್ಥೆಯೆಂಬ ಮನ್ನಣೆಯನ್ನು ಪಡೆಯಿತು. ಆದರೆ ಹಲ್ಟ್ಷ ಮತ್ತು ಶ್ರೇಡರ್‌ರ ಕುರಿತು ವಿವರಿಸಲು ಪ್ರಾಯಶಃ ಪ್ರತ್ಯೇಕ ಉಪನ್ಯಾಸವೊಂದರ ಆವಶ್ಯಕತೆ ಇದೆಯೆನಿಸುತ್ತದೆ. ಮುಂದೆ ಅದು ಸಾಧ್ಯವಾಗಬಹುದೇನೊ!

ಸದ್ಯ (ವರ್ತಮಾನದಲ್ಲಿ) ನಾವು ಈ ಕೆಳಗಿನ ಜರ್ಮನ್ ವಿಶ್ವವಿದ್ಯಾಲಯಗಳಲ್ಲಿ ಭಾರತಾಧ್ಯಯನಕ್ಕೆ ಸಂಬಂಧಿಸಿದ ಸಂಸ್ಥೆಗಳನ್ನು ಹೊಂದಿದ್ದೇವೆ :

ಪಶ್ಚಿಮ ಜರ್ಮನಿಯ ಬರ್ಲಿನ್ (ಫ್ರೀ ಯುನಿವರ್ಸಿಟಿ), ಬೋಚಮ್, ಬಾನ್ನ್, ಇರ್ಲಾಂಜೆನ್, ಫ್ರಾಂಕ್‌ಫರ್ಟ್, ಫ್ರೇಯ್‌ಬರ್ಗ್, ಜೀಸ್ಸೆನ್, ಗಾಟ್ಟಿಂಜೆನ್, ಹ್ಯಾಂಬರ್ಗ್, ಹೀಡೆಲ್ ಬರ್ಗ್, ಕೀಲ್, ಕಾಲ್ನ್, ಮೆಯಿನ್ಸ್, ಮಾರ್‌ಬರ್ಗ್, ಮುಂಚೆನ್, ಮುನ್‌ಸ್ಟರ್, ರೀಜೆನ್ಸ್‌ಬರ್ಗ್, ಸಾರ್‌ಬ್ರುಕೆನ್, ಟ್ಯುಬಿಂಗನ್ ಮತ್ತು ವ್ಯೂರ್ಸ್‌ಬರ್ಗ್. ಪೂರ್ವ ಜರ್ಮನಿಯ ಬರ್ಲಿನ್ (ಹಂಬೋಲ್ಟ್ ವಿಶ್ವವಿದ್ಯಾಲಯ), ಹಾಲ್ಲೆ, ಜೀನಾ, ಲೆಯ್‌ಪ್ಜಿಂಗ್ ಹಾಗೂ ರಾಸ್ಟೋಕ್ ವಿಶ್ವವಿದ್ಯಾಲಯಗಳಲ್ಲೂ ಇಂತಹ ಕೇಂದ್ರಗಳಿವೆ. ಮೇಲೆ ಹೆಸರಿಸಿದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಒಟ್ಟಾರೆಯಾಗಿ ಸುಮಾರು ೨೫ರಷ್ಟು ಭಾರತಾಧ್ಯಯನ ಸಂಸ್ಥೆಗಳು ಕಾರ್ಯಪ್ರವೃತ್ತವಾಗಿವೆ. ಅವುಗಳಲ್ಲಿ ಬರ್ಲಿನ್ (ಫ್ರೀ ಯುನಿವರ್ಸಿಟಿ), ಬಾನ್ನ್, ಹೆಯಿಡೆಲ್ ಬರ್ಗ್, ಮೆಯ್‌ನ್ಸ್ ಮತ್ತು ಮುಂಚೆನ್ ವಿಶ್ವವಿದ್ಯಾಲಯಗಳಲ್ಲಿ ಇಂತಹ ಎರಡು ಅಥವಾ ಮೂರು ವಿಭಾಗಗಳಿವೆ.

೧೯೫೩-೫೪ರಲ್ಲಿ ಮದರಾಸು ವಿಶ್ವವಿದ್ಯಾಲಯದ ಪ್ರಸಿದ್ಧ ಸಂಸ್ಕೃತ ತಜ್ಞರಾಗಿದ್ದ ಪ್ರೊ.ವಿ.ರಾಘವನ್ ಅವರು ಅಜ್ಞಾತ ಅಥವಾ ಅವರ್ಗೀಕೃತ ಸಂಸ್ಕೃತ ಪಠ್ಯಗಳನ್ನು ಹುಡುಕುವ

ಸಲುವಾಗಿ ಯುರೋಪಿನ ಭಾರತಾಧ್ಯಯನ ಕೇಂದ್ರಗಳಿಗೆ ಪ್ರವಾಸ ಕೈಗೊಂಡಿದ್ದರು. ಆ ಸಂದರ್ಭದಲ್ಲಿ ತಾವು ಕಂಡುಕೊಂಡ ಫಲಿತಗಳನ್ನೂ, ಅನುಭವಗಳನ್ನೂ ಅವರು ತಮ್ಮ "ಸಂಸ್ಕೃತ್ ಆ್ಯಂಡ್ ಅಲ್ಲೀಡ್ ಇಂಡೋಲಾಜಿಕಲ್ ಸ್ಟಡೀಸ್ ಇನ್ ಯುರೋಪ್" (ಮದ್ರಾಸ್, ೧೯೫೬) ಎಂಬ ವಿಸ್ತೃತ ವರದಿಯಲ್ಲಿ ಬರೆದಿದ್ದಾರೆ. ಅದರಲ್ಲಿ ಜರ್ಮನಿಗೆ ಸಂಬಂಧಪಟ್ಟ ಅಧ್ಯಾಯದ ಪ್ರಾಸ್ತಾವಿಕ ಟಿಪ್ಪಣಿ ಈ ಕೆಳಗಿನಂತಿದೆ:

"ಪಶ್ಚಿಮಕ್ಕಾಗಿ ಸಂಸ್ಕೃತವನ್ನು ಅನ್ವೇಷಿಸಿದ ಕೀರ್ತಿ ಇಂಗ್ಲೆಂಡಿಗೆ ಸಂದರೂ, ಬಾಪ್ಪ್, ಶ್ಲೇಗಲ್‌ರಂತಹ ಆರಂಭಿಕ ಜರ್ಮನ್ ಸಂಸ್ಕೃತ ತಜ್ಞರು ಫ್ರೆಂಚ್ ಆದ್ಯರ ಪದತಲದಲ್ಲಿ ಕುಳಿತಿದ್ದರೂ ಭಾರತದ ಹೊರಗಡೆ ವಿಶೇಷ ಆಸಕ್ತಿ-ಉತ್ಸಾಹಗಳಿಂದಲೂ, ನಿಸ್ವಾರ್ಥ ಪ್ರೀತಿಯಿಂದಲೂ ಸಂಸ್ಕೃತಾಧ್ಯಯನವನ್ನು ಕೈಗೊಂಡ ದೇಶವೆಂದರೆ ಜರ್ಮನಿಯೊಂದೇ. ಈ ದೇಶವು ಸಂಸ್ಕೃತದ "ಎರಡನೆಯ ಮನೆ"ಯೆಂದು ಯಾರಾದರೂ ಹೇಳಿದರೆ ಅದು ಅತಿಶಯೋಕ್ತಿಯೆನಿಸಲಾರದು. ಸಂಸ್ಕೃತಕ್ಕೆ ಜರ್ಮನಿಯ ಕೊಡುಗೆಯೇನೆಂಬುದನ್ನು ದಾಖಲಿಸಲು ಆಧುನಿಕ ಸಂದರ್ಭದಲ್ಲಿ ನಡೆದ ಸಂಸ್ಕೃತಾಧ್ಯಯನದ ಚರಿತ್ರೆಯನ್ನು ಬರೆಯಬೇಕಾಗುತ್ತದೆ".

ದ್ರಾವಿಡಾಧ್ಯಯನಕ್ಕೆ ಸಂಬಂಧಿಸಿದತೆಯೂ ಇದೇ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರೆ ಅತಿಶಯೋಕ್ತಿಯಾಗಲಾರದೆಂದು ನಾನು ಭಾವಿಸಿದ್ದೇನೆ. ಇದನ್ನು ನನ್ನ ಈ ಉಪನ್ಯಾಸದಲ್ಲಿ ಸಾಧಿಸಿ ತೋರಿಸಲು ಸಾಧ್ಯವಾಗದಿದ್ದರೂ, ಕಡೇ ಪಕ್ಷ ಗುರುತಿಸುವುದಕ್ಕಾದರೂ ಸಾಧ್ಯವಾಗಿದೆಯೆಂದುಕೊಂಡಿದ್ದೇನೆ.*

* ಮಣಿಪಾಲದ 'ಇಂಡೋ-ಜರ್ಮನ್ ಸೊಸಾಯಿಟಿ'ಯ ಆಶ್ರಯದಲ್ಲಿ ೧೯೯೩ರ ಆಗಸ್ಟ್ ೨೧ರಂದು ಎಚ್.ಗುಂಡರ್ಟನ ನೂರನೇ ಪುಣ್ಯತಿಥಿಯ ಸ್ಮರಣಾರ್ಥವಾಗಿ ಡಾ.ಹರ್ಬರ್ಟ್ ಹರ್ರಿಂಗ್ ನೀಡಿದ 'Great German Dravidologists' ಎಂಬ ಉಪನ್ಯಾಸದ ಕನ್ನಡಾನುವಾದವಿದು. ಉಪನ್ಯಾಸದ ಶೀರ್ಷಿಕೆಯೇ ಹೇಳುವಂತೆ ಇಲ್ಲಿ ದ್ರಾವಿಡಾಧ್ಯಯನ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆಯಿತ್ತ ಜರ್ಮನ್ ವಿದ್ವಾಂಸರ ಸಾಧನೆಗಳನ್ನು ವಿವರಿಸಲಾಗಿದೆ. ಅದಕ್ಕೆ ಪೂರಕವಾಗಿ ಭಾರತಾಧ್ಯಯನ ಹಾಗೂ ಸಂಸ್ಕೃತಾಧ್ಯಯನ ಕ್ಷೇತ್ರಗಳಿಗೆ ಸಂಬಂಧಿಸಿದಂತೆಯೂ ಪ್ರಾಸಂಗಿಕ ಉಲ್ಲೇಖಗಳಿವೆ. ತಮಿಳು, ಕನ್ನಡ, ತೆಲುಗು, ಮಲಯಾಳಂ ಮುಂತಾದ ದ್ರಾವಿಡ ಭಾಷೆಗಳ ವ್ಯಾಕರಣಾಧ್ಯಯನ, ಸಾಹಿತ್ಯಾಧ್ಯಯನ ಹಾಗೂ ನಿಘಂಟು ರಚನಾಕಾರ್ಯಗಳನ್ನು 'ದ್ರಾವಿಡಾಧ್ಯಯನ' ಅಥವಾ 'ದ್ರಾವಿಡಶಾಸ್ತ್ರ' (Dravidology) ಎಂಬ ಪರಿಕಲ್ಪನೆ-ಪರಿಭಾಷೆ ಯಿಂದ ಗುರುತಿಸಿ, ಆ ಕಾರ್ಯಗಳಲ್ಲಿ ತೊಡಗಿಕೊಂಡ ವಿದ್ವಾಂಸರನ್ನು 'ದ್ರಾವಿಡಾಧ್ಯಯನ ಕಾರರು' ಅಥವಾ 'ದ್ರಾವಿಡಶಾಸ್ತ್ರಜ್ಞರು' (Dravidologists) ಎಂದು ಕರೆದಿರುವ ಇಲ್ಲಿನ ಉಪಕ್ರಮವು ಪರಿಕಲ್ಪನಾತ್ಮಕವಾಗಿ ಮಹತ್ವವನ್ನು ಪಡೆದುಕೊಳ್ಳುತ್ತದೆ. ಮಾಹಿತಿ ದೃಷ್ಟಿಯಿಂದ ನೋಡಿದರೆ, ಈ ಉಪನ್ಯಾಸವು ತನ್ನದೇ ಆದ ಮಿತಿಗಳನ್ನೂ ಹೊಂದಿದೆ. ಉದಾಹರಣೆಗೆ ಕಿಟ್ಟೆಲನ ಕುರಿತು ವಿವರಿಸುವ ಸಂದರ್ಭದಲ್ಲಿ ಆತ 'ಶಬ್ದಮಣಿ ದರ್ಪಣ'ವನ್ನು ಸಂಪಾದಿಸಿರುವ ಬಗೆಗಾಗಲಿ, 'A Grammar of Kannada Language' ಎಂಬ ಕೃತಿಯನ್ನು ಬರೆದಿರುವ ಬಗೆಗಾಗಲಿ ಇಲ್ಲಿ ಪ್ರಸ್ತಾಪಿಸಿಲ್ಲ. ಇಂತಹ ಕೆಲವು ಮಿತಿ-ಕೊರತೆಗಳ ನಡುವೆಯೂ ಉಪನ್ಯಾಸದ ಪ್ರಸ್ತುತತೆ ಯನ್ನು ನಾವು ಅಲ್ಲಗಳೆಯುವಂತಿಲ್ಲ ಹಾಗಾಗಿಯೇ ಮಾಹಿತಿಪೂರ್ಣವಾದ ಈ ಉಪನ್ಯಾಸವನ್ನು ಇಲ್ಲಿ ಅನುವಾದಿಸಿ ಕೊಡಲಾಗಿದೆ.

ಅನುವಾದಕ

೯

# ದಕ್ಷಿಣ ಭಾರತದಲ್ಲಿ ಸಾಮಾಜಿಕ ಭಾಷಾವಿಜ್ಞಾನದ ಸಂಶೋಧನೆ: ಸಾಧನೆಗಳು ಮತ್ತು ಸಾಧ್ಯತೆಗಳು

*ಇಂಗ್ಲಿಷ್ ಮೂಲ : ಫ್ರಾಂಕ್ಲಿನ್ ಸಿ ಸೌತ್‌ವರ್ತ್*

ಅನುವಾದ : ಡಾ. ಎ. ಸುಬ್ಬಣ್ಣ ರೈ

ಭಾಷಾವಿಜ್ಞಾನದ ಆಧುನಿಕ ಕ್ಷೇತ್ರವು ತನ್ನ ಪ್ರಾರಂಭಿಕ ದೆಸೆಯಿಂದಲೇ ಭಾಷೆಯ ಅಮೂರ್ತ ಸ್ವರೂಪದ ಆವಿಷ್ಕಾರದತ್ತ ಗಮನಹರಿಸಿತ್ತು. ಭಾಷಿಕ ವ್ಯವಸ್ಥೆಯನ್ನು ಭಾಷೆಯೊಂದರ ಎಲ್ಲಾ ಭಾಷಿಕರೂ ಹಂಚಿಕೊಳ್ಳುತ್ತಾರೆಂಬ ಭಾವನೆಯೇ ಇಲ್ಲಿಯ ಅಮೂರ್ತ ಸ್ವರೂಪದ ಕಲ್ಪನೆಯಾಗಿದೆ. ಶುದ್ಧ ಭಾಷಾವಿಜ್ಞಾನವೆಂಬುದು ನಿರ್ದಿಷ್ಟ ಭಾಷೆಗಳಲ್ಲಿ ಕಾರ್ಯಪ್ರವೃತ್ತವಾಗಿರುವ ನಿರ್ದಿಷ್ಟ ನಿಯಮಗಳು, ನಿಯಮ ಪಾಲನೆಯನ್ನು ನಿಯಂತ್ರಿಸುವ ಸಾಮಾನ್ಯ ತತ್ವಗಳು, ಮತ್ತು ಇಂತಹ ನಿಯಮಗಳಲ್ಲಾದ ಬದಲಾವಣೆಗಳ ಪ್ರಕ್ರಿಯೆಗಳನ್ನು ಒಳಗೊಂಡಿರುತ್ತದೆ. ತಾರ್ಕಿಕ, ಮನಃಶಾಸ್ತ್ರೀಯ, ಹಾಗೂ ಗಣಿತಶಾಸ್ತ್ರೀಯದಂತಹ ಹಲವು ಮಾನವಿಕ ವ್ಯವಹಾರಗಳನ್ನು ಜತೆಗೂಡಿಸಿ ಭಾಷಾಶಾಸ್ತ್ರಜ್ಞರು ಇತ್ತೀಚಿನ ವರ್ಷಗಳಲ್ಲಿ ಒಂದು ಬೌದ್ಧಿಕ ಚಟುವಟಿಕೆಯಾಗಿ ಭಾಷೆಯ ಕಡೆಗೆ ಹೆಚ್ಚಿನ ಗಮನ ಕೊಡುತ್ತಿದ್ದಾರೆ. ಉಚ್ಚಾರಗಳನ್ನು ಹೊರಡಿಸುವ ಭಾಷಿಕರು ಅಸ್ತಿತ್ವದಲ್ಲಿರುವರೋ ಎಂಬ ವಾಸ್ತವಾಂಶದ ಕಡೆಗೆ ಗಮನಕೊಡದೆ ಭಾಷೆಯ ಅಂತಸ್ಥ ಉಚ್ಚಾರಣೆಗಳನ್ನು ಇವರು ತಮ್ಮ ಅಧ್ಯಯನ ಕ್ಷೇತ್ರವಾಗಿ ಪರಿಗಣಿಸಿದ್ದಾರೆ. ಭಾಷೆಯು ಬಳಕೆಯಾಗುವ ಸಾಮಾಜಿಕ ಸಂದರ್ಭವನ್ನು ಗಣನೆಗೆ ತೆಗೆದುಕೊಳ್ಳದೆ, ಲಭ್ಯವಿರುವ ಭಾಷೆಯು ಶುದ್ಧವಾಗಿದೆಯೋ? ವ್ಯಾಕರಣ ಬದ್ಧವಾಗಿದೆಯೋ? ಇಲ್ಲವೋ? ಎಂಬಿತ್ಯಾದಿ ಅಂಶಗಳ ಕಡೆಗೆ ಗಮನ ಹರಿಸಿದ ಭಾಷೆಯ ಬಗೆಗಿನ ಗ್ರಹಿಕೆಗಳು ತತ್ಸಂಬಂಧವಾದ ಚರ್ಚೆಗಳು ಪ್ರಾರಂಭವಾದಂದಿನಿಂದಲೇ ನಮ್ಮಲ್ಲಿವೆ. ಭಾವನಾತ್ಮಕ ಇಲ್ಲವೇ ಸಾಮಾಜಿಕ ಅಂಶಗಳಿಂದ ಬಾಧಿತವಾಗದೆ, ಯಾವುದೇ ಉಚ್ಚಾರವನ್ನು ಹೊರಡಿಸಬಲ್ಲ, ವ್ಯಾಖ್ಯಾನಿಸಬಲ್ಲ ಮತ್ತು ಶುದ್ಧತೆಯನ್ನು ನಿರ್ಣಯಿಸಬಲ್ಲ 'ಆದರ್ಶ ಭಾಷಿಕ ಕೇಳುಗ' ನೊಬ್ಬನ ಅಸ್ತಿತ್ವವನ್ನು ಭಾಷಾವಿಜ್ಞಾನಿಗಳು ಸೃಷ್ಟಿಸಿಕೊಂಡಂತಿದೆ.

ಭಾಷಾವಿಜ್ಞಾನ ಕ್ಷೇತ್ರದ ತೀರಾ ಇತ್ತೀಚಿನ ಅಧ್ಯಯನಗಳು ಕೂಡಾ ಇತರ ಭಾಷಾಶಾಸ್ತ್ರಜ್ಞರು ಈಗಾಗಲೇ ಒದಗಿಸಿಕೊಟ್ಟಿರುವ ಭಾಷಿಕ ಸಾಮಗ್ರಿಗಳನ್ನು ಬಳಸಿಕೊಂಡು, ಸಾಮಾಜಿಕ ಸಂದರ್ಭದ ಅರಿವು ಅನ್ವಯವಿಲ್ಲದೆ ನಡೆಸಿದ ಅಧ್ಯಯನಗಳಾಗಿವೆ. ಸಾಮಾನ್ಯ ಮಾತಿ(ಭಾಷೆ )ನಲ್ಲಿ ಸಂಭವಿಸಬಹುದಾದ ಮಧ್ಯಪ್ರವೇಶಿಸುವಿಕೆ, ತಪ್ಪಾಗಿ ಕೇಳಿಸುವಿಕೆ, ತಪ್ಪು ಪ್ರಾರಂಭ ಹಾಗೂ ಇನ್ನಿತರ ಬಾಹ್ಯ ಅಂಶಗಳ ಪ್ರಭಾವ (ಪರಿಣಾಮ)ವನ್ನು ತಗ್ಗಿಸಲು ಈ ಸಾಮಾನ್ಯ ಸಾಮಾಜಿಕ ಸಂದರ್ಭವು ಮಾತಿನ ಸನ್ನಿವೇಶಗಳನ್ನು ಜತೆಗೂಡಿಸಿಕೊಂಡಿರುತ್ತದೆ. ಇಂತಹ ಸೀಮಿತ ಮಾಹಿತಿ ಅಂಕಿ-ಅಂಶಗಳು ನಿರ್ದಿಷ್ಟ ಔಪಚಾರಿಕ ಸ್ವರೂಪಗಳನ್ನು (ಘಟಕಗಳನ್ನು) ಪ್ರತ್ಯೇಕಿಸುವ ನಿಟ್ಟಿನಲ್ಲಿ ಪ್ರಯೋಜನಕಾರಿಯೆನಿಸಿದರೂ ಸಹಜ ಭಾಷೆಯಲ್ಲಿ ವಾಸ್ತವವಾಗಿ ಗಮನಿಸಬಹುದಾದುದಕ್ಕಿಂತಲೂ ಮಿಗಿಲಾದ ಏಕರೂಪತೆಯನ್ನು ಸೃಷ್ಟಿಸಿಕೊಳ್ಳುವತ್ತ ಭಾಷಾ ಶಾಸ್ತ್ರಜ್ಞನನ್ನು ಕೊಂಡೊಯ್ಯುತ್ತದೆ.

'ಸಾಮಾಜಿಕ ಭಾಷಾವಿಜ್ಞಾನ'ವೆಂಬ ಪರಿಭಾಷೆಯು ಭಾಷಾ ಪ್ರವೃತ್ತಿ (ನಡವಳಿಕೆಯ) ಅಧ್ಯಯನಕ್ಕೆ ಸಂಬಂಧಿಸಿದ ವಿವಿಧ ಬಗೆಯ ಸಮೀಪನಗಳನ್ನು ಉಲ್ಲೇಖಿಸುತ್ತದೆ. ಇದು ಭಾಷಾವಿಜ್ಞಾನ ದ ವ್ಯವಹಾರಗಳನ್ನು (ಭಾಷಾವ್ಯವಸ್ಥೆಯ ಗುರುತಿಸುವಿಕೆಯನ್ನು) ಸಮಾಜ ವಿಜ್ಞಾನದ ಇತರ ವ್ಯವಹಾರಗಳ ಜತೆಗೆ ಒಂದುಗೂಡಿಸುವ ನಿಟ್ಟಿನಲ್ಲಿ ಪ್ರಯತ್ನಿಸುತ್ತದೆ. ತೀರಾ ಸೀಮಿತ ಅರ್ಥದಲ್ಲಿ ಹೇಳುವುದಾದರೆ, (ಉದಾಹರಣೆಗೆ ವಿಲಿಯಂ ಲೇಬೋ ಬಳಸಿದ ಹಾಗೆ) ಈ ಪ್ರಬಂಧದ ಮೊದಲಲ್ಲಿ ಹೇಳಿದಂತೆ ಸಾಮಾಜಿಕ ಭಾಷಾ ವಿಜ್ಞಾನವು ಶುದ್ಧ ಭಾಷಾವಿಜ್ಞಾನದ ಗುರಿಗಳನ್ನು ಹಂಚಿಕೊಳ್ಳುವ ಭಾಷಾವಿಜ್ಞಾನದ ಒಂದು ಪ್ರಭೇದವಾಗಿದೆ. ಆದರೆ, ಇದು ಭಾಷಿಕ ವ್ಯವಸ್ಥೆಯ ಸ್ವಭಾವದ ಕುರಿತು ಬೇರೆಯದೇ ಆದ ಗ್ರಹಿಕೆಯನ್ನು ಹೊಂದಿದೆ. ಅದೇ ರೀತಿ ಮಾಹಿತಿ ಸಂಗ್ರಹ ಮತ್ತು ವಿಶ್ಲೇಷಣೆಗೆ ಸಂಬಂಧಿಸಿದಂತೆಯೂ ವಿಭಿನ್ನ ವೈಧಾನಿಕತೆಯನ್ನು ಬಳಸುತ್ತದೆ. ಸಾಮಾಜಿಕ ಭಾಷಾಶಾಸ್ತ್ರಜ್ಞರ ಪ್ರಕಾರ ಇಂತಹ ವ್ಯತ್ಯಾಸಗಳು ಭಾಷಾ ಪ್ರವೃತ್ತಿಯ ಆಂತರಿಕ ಅಂಶಗಳೇ ಹೊರತು ಬಾಹ್ಯ ಸಂಗತಿಗಳಲ್ಲ. ಭಾಷಿಕ ವ್ಯವಸ್ಥೆಯ ಒಂದು ಭಾಗವಾಗಿಯೇ ಇವುಗಳನ್ನು ಚರ್ಚಿಸ ಬೇಕಾಗುತ್ತದೆ. ಉದಾಹರಣೆಗೆ ಉತ್ತರ ತಮಿಳುನಾಡಿನ ಮಾಂಸಾಹಾರಿ ಸಮುದಾಯದ ತಮಿಳನೊಬ್ಬನಲ್ಲಿ 'ಮಾಂಸ'ಕ್ಕೆ ಸಂವಾದಿಯಾಗಿ ಹಲವು ಪದಗಳಿರುತ್ತವೆ. ಅವನು ತನ್ನದೇ ಸಮುದಾಯದವರೊಂದಿಗೆ ವ್ಯವಹರಿಸುವಾಗ ಸಾಮಾನ್ಯ ಗ್ರಾಮ್ಯ ರೂಪವಾದ 'ಕರಿ' ಪದವನ್ನು ಬಳಸುತ್ತಾನೆ. ಬ್ರಾಹ್ಮಣರೊಂದಿಗೋ ಇತರ ಶಾಖಾಹಾರಿ ಸಮುದಾಯದವ ರೊಂದಿಗೋ ಔಪಚಾರಿಕ ಸಂದರ್ಭದಲ್ಲಿ ವ್ಯವಹಾರಿಸುವಾಗ ಅವನು "ಮಾಮಿಸಮ್" ಪದವನ್ನು ಉಪಯೋಗಿಸುತ್ತಾನೆ. ಆತ ವಿದ್ಯಾವಂತನಾಗಿದ್ದರೆ ಕೆಲವು ಸಂದರ್ಭಗಳಲ್ಲಿ "ಎರಚ್ಚಿ" (ದಕ್ಷಿಣ ತಮಿಳುನಾಡಿನಲ್ಲಿ ಮಾಂಸಕ್ಕಿರುವ ಸಾಮಾನ್ಯ ಗ್ರಾಮ್ಯರೂಪ) ಅಥವಾ "ಪುಲ್ಲಾಲ್" (ಬರವಣಿಗೆ ಅಥವಾ ಔಪಚಾರಿಕ ತಮಿಳಿಗಷ್ಟೇ ಸೀಮಿತವಾದ ರೂಪ) ಪದಗಳನ್ನು ಬಳಸುತ್ತಾನೆ. ಎ.ಕೆ.ರಾಮನುಜನ್ ಅವರು ಹೇಳುವ ಪ್ರಕಾರ "ಇರ್‌ಕ್ಕ್"

ಇದೆ) ಮತ್ತು "ಪೋರದ್" (ಅದು ಹೋಗುತ್ತದೆ) ರೂಪಗಳು ವಿದ್ಯಾವಂತ ಅಯ್ಯಂಗಾರ್ ಸಮುದಾಯದವರಿಗೆ ಮಾಮೂಲಿ ಗ್ರಾಮ್ಯ ಪದಗಳಿದ್ದ ಹಾಗೆ ಇದಕ್ಕೆ ತದ್ವಿರುದ್ಧವಾಗಿ ಮುದಲಿಯಾರರು "ಇರ್‌ಕ್ಕ್‌ದ್" ಮತ್ತು "ಪೋವುದ್" ಪದಗಳನ್ನು ಬಳಸುತ್ತಾರೆ. ಆದರೆ, ಇವೆಲ್ಲಾ ನಿರ್ದಿಷ್ಟ ಭೌಗೋಳಿಕ ಪ್ರದೇಶಗಳಿಗಷ್ಟೇ ಸೀಮಿತವಾಗಿವೆ. ಔಪಚಾರಿಕ ಮಾತು ಮತ್ತು ಬರವಣಿಗೆಯಲ್ಲಿ ಎಲ್ಲಾ ತಮಿಳರೂ ಪ್ರಮಾಣ ಭಾಷಾರೂಪಗಳಾದ "ಇರುಕ್ಕಿರದ್" ಮತ್ತು "ಪೋಗಿರದ್" ಪದಗಳನ್ನೇ ಬಳಸುತ್ತಾರೆ.

ಸಾಮಾಜಿಕ ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ಇತ್ತೀಚಿನ ಸಮೀಪನಗಳು ಚಾಲ್ತಿಗೆ ಬರುವ ಮುನ್ನ ಭಾಷಾಶಾಸ್ತ್ರಜ್ಞರಲ್ಲಿ ಇಂತಹ ವ್ಯತ್ಯಾಸಗಳ ಜತೆ ಎರಡು ವಿಧಾನಗಳಲ್ಲೂ ವ್ಯವಹರಿಸುತ್ತಿದ್ದರು. ಅವುಗಳನ್ನು ಮುಕ್ತ ವ್ಯತ್ಯಾಸ ಎಂದು ಪರಿಗಣಿಸಬಹುದಾಗಿದೆ. ಯಾಕೆಂದರೆ ಅವುಗಳು ನಿರ್ದಿಷ್ಟ ವ್ಯವಸ್ಥೆಗೊಳಪಟ್ಟು ವರ್ಗೀಕರಣಗೊಂಡ ವ್ಯತ್ಯಾಸಗಳಲ್ಲ; ಭಾಷೆಯ ವ್ಯವಸ್ಥಿತ ರಚನೆಯ ಭಾಗವೂ ಅಲ್ಲ. ಪರ್ಯಾಯವಾಗಿ ಅವುಗಳನ್ನು ಪ್ರತ್ಯೇಕ ವ್ಯವಸ್ಥೆಯಡಿಯಲ್ಲಿ ಚರ್ಚಿಸಬೇಕಾದ, ಪ್ರತ್ಯೇಕ 'ಉಪಭಾಷೆ'ಗಳೆಂದು ಪರಿಗಣಿಸಬಹುದಾಗಿದೆ. ಭಾಷಿಕರು ಧ್ವನಿ, ವ್ಯಾಕರಣ ಮತ್ತು ಶಬ್ದಕೋಶಕ್ಕೆ ಸಂಬಂಧಿಸಿದ ಭಿನ್ನರೂಪಗಳನ್ನು ಆಯ್ಕೆ ಮಾಡಿಕೊಳ್ಳುವಲ್ಲಿ ಸಾಂದರ್ಭಿಕ ಪ್ರಭೇದಗಳಿಗೆ ನಿರೀಕ್ಷಿತವಾಗಿ ಪ್ರತಿಕ್ರಿಯಿಸುತ್ತಾರೆಂಬ ವಾಸ್ತವಾಂಶದ ಜತೆಗೆ ವ್ಯವಹರಿಸಲು ಮೇಲಿನ ಎರಡೂ ವಿಧಾನಗಳು ಸೋತುವೆಂದು ಹೇಳಬೇಕಾಗುತ್ತದೆ. ಹಾಗಾಗಿ ಸಾಮಾಜಿಕ ಭಾಷಾಶಾಸ್ತ್ರಜ್ಞನು ಯಾವ್ಯಾವ ರೂಪಗಳು ಹುಟ್ಟಿಕೊಳ್ಳುತ್ತವೆಂಬುದನ್ನು ವಿವರಿಸುವುದರ ಜತೆಗೆ ಯಾವ್ಯಾವ ವಿಭಿನ್ನ ಸಾಮಾಜಿಕ ಸಂದರ್ಭಗಳು ಅವುಗಳ ಹುಟ್ಟಿಗೆ ಕಾರಣವಾಗುತ್ತವೆಂಬುದನ್ನು ವಿಶ್ಲೇಷಿಸುವುದೂ ತನ್ನ ಕರ್ತವ್ಯವೆಂದು ಭಾವಿಸಿರುತ್ತಾನೆ.

ಸಂಕುಚಿತಾರ್ಥದಲ್ಲಿ ಸಾಮಾಜಿಕ ಭಾಷಾವಿಜ್ಞಾನವನ್ನು ನಿರ್ವಚಿಸುವುದಾದರೆ ಅದು ಭಾಷಾವ್ಯವಸ್ಥೆಯ ಸ್ವರೂಪದಲ್ಲಾಗುವ ಬದಲಾವಣೆಗಳ ಕುರುಹುಗಳ ಕಡೆಗೂ, ಭಾಷಿಕ ವ್ಯತ್ಯಾಸಗಳ ಪ್ರಕ್ರಿಯೆಗಳ ಕಡೆಗೂ ವಿಶೇಷ ಗಮನ ಹರಿಸುತ್ತದೆ. ವಿಶಾಲಾರ್ಥದಲ್ಲಿ ಸಾಮಾಜಿಕ ಭಾಷಾವಿಜ್ಞಾನವನ್ನು ನಿರ್ವಚಿಸುವುದಾದಲ್ಲಿ, ಅದು ಸಾಮಾಜಿಕ ಅಥವಾ ಸಾಂಸ್ಕೃತಿಕ ಭಿತ್ತಿಯೊಳಗಡೆ ನಡೆಸುವ ಭಾಷೆಯ ಕುರಿತ ಅಧ್ಯಯನವಾಗುತ್ತದೆ. ಪ್ರಶ್ನೆಯೊಂದನ್ನು ಕೇಳಿಕೊಳ್ಳುವ ಮೂಲಕ ಈ ವ್ಯಾಪಕಾರ್ಥದ ಅಧ್ಯಯನಕ್ಕೆ ಒಂದು ರೀತಿಯಲ್ಲಿ ಪ್ರವೇಶಿಸಬಹುದೆಂದು ತೋರುತ್ತದೆ: ಭಾಷಿಕನೊಬ್ಬ ನಿರ್ದಿಷ್ಟ ಭಿನ್ನತೆಗಳನ್ನು ಬಳಸುವ ಸಂದರ್ಭದಲ್ಲಿ ತನ್ನ ಬಗ್ಗೆ ಏನನ್ನು ಹೇಳುತ್ತಾನೆ? (ತನ್ನ ಸಾಮಾಜಿಕ ಗುರುತಿಸುವಿಕೆ ಮತ್ತು ಅಲ್ಲಿರುವ ಇತರರೊಂದಿಗಿನ ತನ್ನ ಸಂಬಂಧದ ಬಗ್ಗೆ) ಈ ಅರ್ಥದಲ್ಲಿ ಸಾಮಾಜಿಕ ಭಾಷಾವಿಜ್ಞಾನವು ಭಾಷೆಯ ಸಮಾಜಶಾಸ್ತ್ರ (ಒಂದು ಜನಸಮುದಾಯದಲ್ಲಿ ಇತರ ಸಾಮಾಜಿಕ ಭಿನ್ನತೆಗಳೊಂದಿಗೆ ನಡೆಸುವ ಭಾಷಾ ಬಳಕೆಯ ಅಧ್ಯಯನಗಳು) ಮತ್ತು ದೆಲ್ ಹಿಮ್ಸ್ ಹೇಳುವಂತೆ ಸಂವಹನದ ಮಾನವಕುಲಶಾಸ್ತ್ರ (ಭಾಷೆಯನ್ನು ಒಂದು

ಸಾಂಸ್ಕೃತಿಕ ವ್ಯವಸ್ಥೆಯ ಭಾಗವಾಗಿ ಅಧ್ಯಯನ ನಡೆಸುವುದು )ಹೀಗೆ ಎರಡು ಬಗೆಯ ಅಧ್ಯಯನಗಳನ್ನು ಇದು ಒಳಗೊಂಡಿರುತ್ತದೆ. ಇದರಂತೆ ದಕ್ಷಿಣ ಭಾರತದಲ್ಲಿ ಸಾಮಾಜಿಕ ಭಾಷಾವಿಜ್ಞಾನಕ್ಕೆ ಸಂಬಂಧಿಸಿದಂತೆ ಸಂಕುಚಿತ ಹಾಗೂ ವ್ಯಾಪಕ- ಎರಡೂ ಅರ್ಥಗಳಲ್ಲಿ ನಡೆದ ಅಧ್ಯಯನಗಳನ್ನು ಕೆಳಗಿನ ಚರ್ಚೆಯಲ್ಲಿ ಸಮೀಕ್ಷಿಸಲು ಪ್ರಯತ್ನಿಸಲಾಗಿದೆ.

## ದಕ್ಷಿಣ ಏಷಿಯಾದ ಭಾಷೆಗಳು ಮತ್ತು ಸಾಮಾಜಿಕ ಭಾಷಾವಿಜ್ಞಾನ

ದಕ್ಷಿಣ ಏಷಿಯಾವು ಭಾಷಾವ್ಯತ್ಯಾಸಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಹತ್ವದ ಮಾಹಿತಿಯನ್ನು ಬದಗಿಸಿಕೊಟ್ಟಿದೆ. ಅದೇ ರೀತಿ ಸಾಮಾಜಿಕ ಭಾಷಾವಿಜ್ಞಾನ ಕ್ಷೇತ್ರಕ್ಕೂ ದಕ್ಷಿಣ ಏಷಿಯಾದ ಭಾಷಾ ಅಧ್ಯಯನಗಳಿಂದಲೇ ಪ್ರಾರಂಭಿಕ ಪ್ರೇರಣೆ ದೊರೆಯಿತೆನ್ನ ಬಹುದು. 'ಲಿಂಗ್ವಿಸ್ಟಿಕ್ ಡೈವರ್ಸಿಟಿ ಇನ್ ಸೌತ್ ಏಷಿಯಾ' ಎಂಬ ಸಂಪುಟವು ದ್ರಾವಿಡ ಭಾಷೆಗಳಾದ ತಮಿಳು ಮತ್ತು ಕನ್ನಡವೂ ಸೇರಿದಂತೆ ವಿವಿಧ ದಕ್ಷಿಣ ಏಷಿಯಾ ಭಾಷೆಗಳ ಸಮಾಜೋ ಭಾಷಿಕ ವ್ಯತ್ಯಾಸಗಳಿಗೆ ಸಂಬಂಧಿಸಿದ ಪ್ರಾರಂಭಿಕ ಘಟ್ಟದ ಅಸಂಖ್ಯ ಅಧ್ಯಯನ ಗಳನ್ನು ಒಳಗೊಂಡಿದೆ. ಆನಂತರದಲ್ಲಿ ಈ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಗಮನಾರ್ಹ ಕೆಲಸಗಳು ನಡೆದಿದ್ದರೂ ಪ್ರಸ್ತುತ ಸಂಪುಟದ ಪ್ರಬಂಧಗಳು ಮಾತ್ರ ಎಂದೆಂದಿಗೂ ಮೌಲಿಕವಾಗುಳಿಯುತ್ತವೆ. ಭಾಷಾ ಶಾಸ್ತ್ರಜ್ಞರನ್ನೂ, ಇತರರನ್ನೂ, ಉದ್ದೇಶಿಸಿ ಬರೆಯಲಾದ ಸಂಪುಟದ ಪ್ರವೇಶಿಕೆಯು ದಕ್ಷಿಣ ಏಷಿಯಾ ಹಾಗೂ ಸರ್ವತ್ರ ಕಾಣಸಿಗುವ ಭಾಷಿಕ ವ್ಯತ್ಯಾಸಗಳ ಪ್ರಮುಖ ಬಗೆಗಳನ್ನು ಸಮರ್ಥವಾಗಿ ವಿವರಿಸುತ್ತದೆ.

ಇಲ್ಲಿ ಮೂರು ಬಗೆಯ ಪ್ರಮುಖ ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ ಭೌಗೋಳಿಕ, ಸಾಮಾಜಿಕ ಮತ್ತು ಕ್ರಿಯಾತ್ಮಕ (ಅಥವಾ ಶೈಲಿ ಸಂಬಂಧಿ ). ಇವುಗಳಲ್ಲಿ ಭೌಗೋಳಿಕ ವ್ಯತ್ಯಾಸವು ತುಂಬಾ ಪ್ರಚುರವಾಗಿದ್ದು, ಪಶ್ಚಿಮದಲ್ಲಿ ಒಂದು ಶತಮಾನಕ್ಕೂ ಮೇಲ್ಪಟ್ಟು 'ಉಪಭಾಷಾ ಭೂಗೋಳಶಾಸ್ತ್ರ' ಅಥವಾ 'ಉಪಭಾಷಾಶಾಸ್ತ್ರ' ಎಂಬ ಹೆಸರಿನಿಂದ ಪ್ರಚಲಿತವಾಗಿತ್ತು. ಭಾರತದಲ್ಲಿ ಸರ್ ಜಾರ್ಜ್ ಗ್ರಿಯರ್ಸನ್ ಸ್ಮರಣೀಯ ಕೃತಿಯಾದ 'ಲಿಂಗ್ವಿಸ್ಟಿಕ್ ಸರ್ವೇ ಆಫ್ ಇಂಡಿಯಾ'ದ ಮೂಲಕ ಉಪಭಾಷಾ ಅಧ್ಯಯನವು ಪ್ರಾರಂಭವಾಯಿತೆನ್ನಬಹುದು. ಆತನು ಭಾರತದ ಹಲವು ಪ್ರಮುಖ ಭಾಷೆ ಗಳಲ್ಲಿಯ ಉಪಭಾಷೆಗಳ ಮಾದರಿಗಳನ್ನೂ, ವ್ಯಾಕರಣಾತ್ಮಕ ನಕ್ಷೆಗಳನ್ನೂ ನೀಡಿದ್ದಾನೆ. ಆದರೆ ದುರದೃಷ್ಟವಶಾತ್ ದ್ರಾವಿಡ ಪ್ರದೇಶದ ಪ್ರಮುಖ ಭಾಗವಾದ ಮದರಾಸು ಸಂಸ್ಥಾನವನ್ನೇ ತನ್ನ ಸರ್ವೇಕ್ಷಣೆಯಿಂದ ಕೈಬಿಟ್ಟಿದ್ದಾನೆ. ಆದರೂ ಗ್ರಿಯರ್ಸನ್ ತಮಿಳು, ಮಲಯಾಳಂ, ಕನ್ನಡ, ತೆಲುಗು,ಕುರುಖ್,ಮಾಲ್ತೊ,ಕುಯೀ, ಬ್ರಾಹುಈ, ಕೊಲಾಮಿ, ಹಾಗೂ ಅರೆದ್ರಾವಿಡ ಭಾಷೆ ಗಳಾದ ಲಧಾಡಿ ಮತ್ತು ಭರಿಯಾಗಳ ಮಾದರಿಗಳನ್ನು ತನ್ನ ಗ್ರಂಥದಲ್ಲಿ ಒದಗಿಸಿದ್ದಾನೆ. ಗ್ರಂಥದ ಪ್ರಸ್ತಾವನ ಸಂಪುಟ ಮತ್ತು ನಾಲ್ಕನೇ ಸಂಪುಟಗಳು ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದವುಗಳಾಗಿವೆ.

ಗುಂಪರ್ಜ್ ಮತ್ತು ಫರ್ಗೂಸನ್‌ರು ಹೇಳುವಂತೆ ಗ್ರಿಯರ್ಸನನು ಭಾಷಿಕ ಲಕ್ಷಣಗಳಿಗೆ

ಸಂಬಂಧಿಸಿದ ವಿವರವಾದ ಭೂಪಟವನ್ನು ಒದಗಿಸಲು ಪ್ರಯತ್ನಿಸಿಲ್ಲ; ತಾನು ಗಮನಿಸಿದಂತೆ ಪ್ರಮುಖ ಉಪಭಾಷಾ ಪ್ರದೇಶಗಳ ಗಡಿಗಳೇನಿದ್ದುವೆಂಬುದನ್ನು ಮಾತ್ರ ಗುರುತಿಸಿದ್ದಾನೆ. ಅಲ್ಲಿಂದೀಚೆಗೆ ಉಪಭಾಷಾ ಅಧ್ಯಯನಗಳು ಮುಖ್ಯವಾಗಿ ಬೇರೆ ಬೇರೆ ಉಪಭಾಷೆಗಳ ವಿವರಣೆಗಳನ್ನು ನೀಡತೊಡಗಿದುವು. ಹಾಗಿದ್ದೂ ಕೆಳಗೆ ಗಮನಿಸಿದಂತೆ ವಿಶಾಲ ಪ್ರದೇಶ ಗಳನ್ನು ಸರ್ವೇಕ್ಷಣೆ ಮಾಡುವ ಕೆಲವು ಪ್ರಯತ್ನಗಳೂ ನಡೆದಿವೆ.

'ಸಾಮಾಜಿಕ ಉಪಭಾಷೆ' ಎಂಬ ಪರಿಭಾಷೆಯು ಒಂದೇ ಪ್ರದೇಶದಲ್ಲಿ ಇತರ ಪ್ರಭೇದ ಗಳೊಂದಿಗೆ, ಜತೆಜತೆಯಾಗಿ ಅಸ್ತಿತ್ವದಲ್ಲಿರುವ ಭಾಷಾ ಪ್ರಭೇದಗಳಿಗೆ ಸಂಬಂಧಿಸಿದು ದಾಗಿರುತ್ತದೆ. ಆದರೆ, ಸಾಮಾಜಿಕ ಅಂಶಗಳ ಆಧಾರದಿಂದ ಇವು ಪ್ರತ್ಯೇಕಿಸಲ್ಪಡುತ್ತವೆ. ಮೇಲೆ ನೋಡಿದ ಐಯ್ಯಂಗಾರ್ ತಮಿಳಿಗೂ, ಮುದಲಿಯಾರ್ ತಮಿಳಿಗೂ ಇರುವಂತಹುದೇ ವ್ಯತ್ಯಾಸಗಳು ಭಾರತದೆಲ್ಲೆಡೆ ಕಂಡುಬರುತ್ತವೆ. ಇವು "ಜಾತೀಯ ಉಪಭಾಷೆ" ಎಂಬ ಪರಿಭಾಷೆಯ ಹುಟ್ಟಿಗೂ ಕಾರಣವಾದುವು. ಜಾತಿಸಂಬಂಧಿ ಭಾಷಾ ವ್ಯತ್ಯಾಸಗಳ ಬಗೆಗೆ ಸಾಕಷ್ಟು ಮಾಹಿತಿಗಳು ಸಿಗುತ್ತವೆ. ಕೆಲವು ಪುರಾವೆಗಳ ಪ್ರಕಾರ ಈ ಪರಸ್ಪರ ಸಂಬಂಧವು ಭೌಗೋಳಿಕ ಭಿನ್ನತೆಗಳಿಂದ ಸ್ವತಂತ್ರವಾದುದು. ಜಾತಿಯು ಭಾಷಾ ವ್ಯತ್ಯಾಸವನ್ನು ಪ್ರಭಾವಿಸುವ ಏಕೈಕ ಸಾಮಾಜಿಕ ವ್ಯತ್ಯಾಸಕಾರಕವಾಗಿದೆ. ಧರ್ಮ, ಔದ್ಯೋಗಿಕ ಸ್ಥಾನಮಾನ, ವಯಸ್ಸು, ಲಿಂಗ ಹಾಗೂ ವಸತಿ ಸ್ಥಳ (ನಗರ ಪ್ರದೇಶ ಗ್ರಾಮೀಣ ಪ್ರದೇಶ )ಗಳಂತಹ ಇತರ ಅಂಶಗಳೊಂದಿಗೂ ಭಾಷಾ ವ್ಯತ್ಯಾಸಗಳಿಗೆ ಪರಸ್ಪರ ಸಂಬಂಧವಿರುತ್ತದೆ. ಇವುಗಳೊ ಳಗಿನ ಸಂಬಂಧಗಳ ಕುರಿತು ಇದುವರೆಗೆ ನಮಗೆ ಹೆಚ್ಚೇನೂ ತಿಳಿದಿಲ್ಲ. ನಿರ್ದಿಷ್ಟವಾಗಿ ಹೇಳುವುದಾದರೆ, ಸಮಕಾಲೀನ ಸಂದರ್ಭದಲ್ಲಿ ಜಾತಿ, ಸಾಮಾಜಿಕ ವರ್ಗ, ಶಿಕ್ಷಣ ಮತ್ತು ನಗರೀಕರಣಗಳಂತಹ ಪ್ರಮುಖ ಅಂಶಗಳ ಪರಸ್ಪರ ಸಂಬಂಧಾತ್ಮಕ ಪ್ರಾಮುಖ್ಯತೆಯೇ ನೆಂಬುದು ನಮಗೆ ತಿಳಿದಿಲ್ಲ.

ಕ್ರಿಯಾತ್ಮಕ ವ್ಯತ್ಯಾಸವು ವಿವಿಧ ಸನ್ನಿವೇಶ ಅಥವಾ ಪಾತ್ರಗಳಿಗೆ ಸಂಬಂಧಿಸಿದಂತೆ ಒಬ್ಬನೇ ವ್ಯಕ್ತಿಯ ಅಥವಾ ಒಂದೇ ಗುಂಪಿನ ಮಾತಿನ ಶೈಲಿಯಲ್ಲಾಗುವ ಬದಲಾವಣೆಗಳನ್ನು ಒಳಗೊಂಡಿರುತ್ತದೆ. ಭೌಗೋಳಿಕ ಮತ್ತು ಸಾಮಾಜಿಕ ಉಪಭಾಷೆಗಳ ಸಂದರ್ಭದಲ್ಲಿ ವ್ಯಕ್ತಿಯೊಬ್ಬನು ಒಂದು ಅಥವಾ ಇನ್ನೊಂದು ಉಪಭಾಷೆಯನ್ನು ಮಾತನಾಡುತ್ತಾನೆಂದು ಸಾಮಾನ್ಯವಾಗಿ ನಿರೀಕ್ಷಿಸಲಾಗುತ್ತದಾದರೂ, ಅದೇ ವ್ಯಕ್ತಿಯ ಭಾಷೆಯಲ್ಲಿ ಕ್ರಿಯಾತ್ಮಕ ವ್ಯತ್ಯಾಸಗಳೂ ಜತೆಯಾಗಿರುತ್ತವೆ. ಇದರಂತೆ ಅಯ್ಯಂಗಾರ್ ತಮಿಳಿನ 'ಇರ್‌ಕ್ಕ್' ಮತ್ತು ಮುದಲಿಯಾರ್ ತಮಿಳಿನ "ಇರ್‌ಕ್ಕದ್" (ಇದೆ) ಎಂಬ ರೂಪಗಳೊಳಗಿನ ವ್ಯತ್ಯಾಸವು ಸಾಮಾಜಿಕವಾದುದಾದರೂ ಈ ಎರಡೂ ಪಂಗಡಗಳಲ್ಲೂ ಔಪಚಾರಿಕ (ಕ್ರಿಯಾತ್ಮಕ) ಭಿನ್ನರೂಪವಾದ "ಇರುಕ್ಕಿರದ್" ಕೂಡಾ ಅಸ್ತಿತ್ವದಲ್ಲಿರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಉನ್ನತೀಕರಿಸಿದ ವ್ಯತ್ಯಾಸವೆಂದೂ ಕರೆಯಲಾಗುತ್ತದೆ. ಅಂದರೆ ಇಲ್ಲಿ ಭಾಷೆಯೊಂದರ ಕೆಳಸ್ತರದ ಅಥವಾ ಅನೌಪಚಾರಿಕ ಭಿನ್ನರೂಪಕ್ಕಿಂತ ಹೆಚ್ಚು ಮೌಲಿಕವೆನಿಸಿದ ಅಥವಾ ಔಪಚಾರಿಕವೆನಿಸಿದ ಭಿನ್ನರೂಪವು ಮೇಲ್ಮೈ ಸಾಧಿಸಿರುತ್ತದೆ.

ಇಂತಹ ವ್ಯತ್ಯಾಸವು ಎಲ್ಲಾ ಶ್ರೇಣೀಕೃತ ಸಮಾಜಗಳಲ್ಲೂ ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಹೇಳುವುದಾದರೆ, ಉಚ್ಚಾರಣೆಗೆ ಸಂಬಂಧಿಸಿದಂತೆ ಮೇಲ್‌ಸ್ತರದ ಪ್ರಭೇದವು ಕೆಳಸ್ತರದ ಪ್ರಭೇದಕ್ಕಿಂತ ಹೆಚ್ಚಿನದಾದ ಗಮನವನ್ನು ಅಪೇಕ್ಷಿಸುತ್ತದೆ. ಅದೇ ರೀತಿ ವ್ಯಾಕರಣ ನಿಯಮಗಳಿಗೆ ಸಂಬಂಧಿಸಿದಂತೆಯೂ ಮೇಲ್ ಸ್ತರದ ಪ್ರಭೇದದಲ್ಲಿ ಹೆಚ್ಚಿನ ಕಟ್ಟುನಿಟ್ಟನ್ನು ಪಾಲಿಸಲಾಗುತ್ತದೆ. ತಮಿಳು ಮತ್ತು ಬೆಂಗಾಲಿ ಭಾಷೆಗಳು ಅವುಗಳಲ್ಲಿನ ತೀವ್ರತರವಾದ ಮೇಲ್‌ಸ್ತರದ ಪ್ರಭೇದಗಳಿಗಾಗಿ ಹೆಸರುವಾಸಿಯಾಗಿವೆ. ತಮಿಳಿನಲ್ಲಿ "ಸೆಂದಮಿಳ್" (ಶುದ್ಧ ತಮಿಳು) ಎಂದೂ ಬೆಂಗಾಲಿ ಯಲ್ಲಿ ಸಧು ಭಾಷಾ, ಸಭ್ಯ ಭಾಷಾ ಎಂದೂ ಇವುಗಳನ್ನು ಕರೆಯಲಾಗುತ್ತದೆ. ಇವುಗಳಿಗೆ ಹೋಲಿಸಿದರೆ ಇತರ ದಕ್ಷಿಣ ಏಷಿಯಾ ಭಾಷೆಗಳಲ್ಲಿ ಇಂತಹ ವ್ಯತ್ಯಾಸಗಳು ಅಷ್ಟೊಂದು ತೀವ್ರತರವಾಗಿ ಇಲ್ಲವಾದರೂ ಬಹುತೇಕ ಯುರೋಪಿಯನ್ ಭಾಷೆಗಳಿಗಿಂತ ಇಲ್ಲಿ ಹೆಚ್ಚಿನ ಪ್ರಮಾಣ ದಲ್ಲಿವೆ. ಆದರೂ ಆಧುನಿಕ ಗ್ರೀಕ್ ಭಾಷೆಯಲ್ಲಿ ಇಂತಹುದೇ ಸ್ಪಷ್ಟ ವ್ಯತ್ಯಾಸಗಳಿವೆ. ಕ್ರಿಯಾತ್ಮಕ ವ್ಯತ್ಯಾಸವು ಭಾಷೆಯೊಂದರ ಪೂರಕ ಪ್ರಭೇದಗಳನ್ನು ಒಳಗೊಳ್ಳಬಹುದಾಗಿದೆ. ಯಾಕೆಂದರೆ, ತನ್ನೆಲ್ಲಾ ನಿರೀಕ್ಷಿತ ಸಾಮಾಜಿಕ ಪಾತ್ರಗಳನ್ನು ಸಮರ್ಥವಾಗಿ ನಿಭಾಯಿಸ ಬೇಕಾದರೆ ವ್ಯಕ್ತಿಯೊಬ್ಬನಿಗೆ ಒಂದಕ್ಕಿಂತ ಹೆಚ್ಚು ಭಾಷಾ ಪ್ರಭೇದಗಳಲ್ಲಿ ಹಿಡಿತವಿರಬೇಕಾಗುತ್ತದೆ. ಈ ಸಿದ್ಧಾಂತದ ಒಂದು ಅನ್ವಯವನ್ನು ಹೀಗೆ ಹೇಳಬಹುದು: ಇಂತಹ ಭಿನ್ನತೆಗಳ ಲಕ್ಷಣಗಳಿರುವ ಸಮಾಜಗಳಲ್ಲಿ ವ್ಯಕ್ತಿಗಳಿಗೆ ಕೇವಲ ಒಂದೇ ಪ್ರಭೇದದ ಮೇಲಷ್ಟೆ ಹಿಡಿತವಿದ್ದರೆ, ಅವರು ನಿಭಾಯಿಸಬಹುದಾದ ಪಾತ್ರಗಳು ತೀರಾ ಸೀಮಿತವಾಗಿರುತ್ತವೆ.

ಕ್ರಿಯಾತ್ಮಕ ಪ್ರಭೇದಗಳು ತಮಿಳು ಮತ್ತು ಬಾಂಗ್ಲಾ ಭಾಷೆಗಳಲ್ಲಿಯಂತೆ ತೀವ್ರತರವಾಗಿ ಪ್ರತ್ಯೇಕಿಸಲ್ಪಟ್ಟಾಗ, ಅಂತಹ ಸಂದರ್ಭವನ್ನು 'ದ್ವಿಸ್ತರತೆ'ಯನ್ನೊಳಗೊಂಡ ಸ್ಥಿತಿಯೆಂದು ವಿವರಿಸಲಾಗುತ್ತದೆ. ಈ ಪರಿಭಾಷೆಯು ತಮಿಳು, ಬಾಂಗ್ಲಾ ಮತ್ತು ಆಧುನಿಕ ಗ್ರೀಕ್ ಭಾಷೆಗಳ ಸ್ಥಿತಿಗಳಿಗಷ್ಟೇ ಅನ್ವಯವಾಗುವುದಿಲ್ಲ. ವಿವಿಧ ಭಾಷೆಗಳು ಕ್ರಿಯಾತ್ಮಕವಾಗಿ ಪ್ರತ್ಯೇಕಿಸಲ್ಪಡುವ ಬಹುಭಾಷಾ ಸಮಾಜ ಅಥವಾ ಗುಂಪುಗಳಿಗೂ ಇದು ಅನ್ವಯವಾಗುತ್ತದೆ. ಇದರಂತೆ ಭಾರತದಲ್ಲಿ ಹಲವು ವಲಸೆಗಾರ ಗುಂಪುಗಳು ದ್ವಿಭಾಷಾ ದ್ವಿಸ್ತರತೆಯನ್ನು ಹೊಂದಿರುತ್ತವೆ. ಉದಾಹರಣೆಗೆ ಕೇರಳದ ಅಯ್ಯರ್ ಸಮುದಾಯದವರು ತಮ್ಮದೇ ಜನರೊಂದಿಗೆ ವ್ಯವಹರಿಸುವಾಗ ತಮಿಳಿನ ಪ್ರಭೇದವೊಂದನ್ನು ಬಳಸಿದರೆ, ಬಾಹ್ಯ ಸಮಾಜ ದೊಂದಿಗೆ ವ್ಯವಹರಿಸುವಾಗ ಅದೇ ರೀತಿ ತಮ್ಮದೇ ಜನರೊಂದಿಗೆ ಕೆಲವು ನಿರ್ದಿಷ್ಟ ವಿಷಯಗಳನ್ನು ಚರ್ಚಿಸುವಾಗ ಮಲಯಾಳಂ ಭಾಷೆಯನ್ನು ಬಳಸುತ್ತಾರೆ. ಬಹುಪಾಲು ವಿದ್ಯಾವಂತ ಭಾರತೀಯರು ಇಂಗ್ಲಿಷ್ ಮತ್ತು ತಮ್ಮ ಮನೆ ಭಾಷೆಯ ಬಗೆಗೆ ಇಂತಹುದೇ ಧೋರಣೆಯುಳ್ಳವರಾಗಿದ್ದಾರೆ.ದ್ವಿಭಾಷಿಕತೆ ಮತ್ತು ಭಾಷಾ ಸಂಪರ್ಕಕ್ಕೆ ಸಂಬಂಧಿಸಿದ ಅಧ್ಯಯನಗಳು ಸಾಮಾಜಿಕ ಭಾಷಾವಿಜ್ಞಾನದ ಒಂದು ಪ್ರಮುಖ ಭಾಗವಾಗಿದೆ.

## ದಕ್ಷಿಣ ಭಾರತದಲ್ಲಿ ಸಮಾಜೋ ಭಾಷಿಕ ಅಧ್ಯಯನಗಳು :

ಕೆಳಗೆ ಟಿಪ್ಪಣಿಸಿರುವಂತೆ ದಕ್ಷಿಣ ಭಾರತವು ದಕ್ಷಿಣ ಏಷಿಯಾದ ಇತರೆಡೆಗಳಲ್ಲಿ ಕಂಡುಬರುವಂಥ ಗುಣಲಕ್ಷಣಗಳನ್ನು ಹೊಂದಿದೆಯಾದರೂ ಭಾಷಿಕವಾಗಿಯೂ, ಸಾಂಸ್ಕೃತಿಕವಾಗಿಯೂ ಅದರದ್ದೇ ಆದ ಕೆಲವು ವಿಶಿಷ್ಟ ಲಕ್ಷಣಗಳೂ ಈ ಪ್ರದೇಶಕ್ಕಿದೆ. ಕೆಳಗಿನ ವಿಭಾಗಗಳಲ್ಲಿ ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದಂತೆ ನಡೆದ ಸಮಾಜೋ ಭಾಷಿಕ ಅಧ್ಯಯನಗಳ ಸಾಧನೆ ಮತ್ತು ಸಾಧ್ಯತೆಗಳ ಕುರಿತು ಚರ್ಚಿಸಲಾಗಿದೆ. ಹಾಗೆಂದು ಇದು ಕಟ್ಟುನಿಟ್ಟಾಗಿ ದ್ರಾವಿಡ ಭಾಷೆಗಳಗಷ್ಟೇ ಸೀಮಿತವಾದ ಚರ್ಚೆಯೆಂದು ಹೇಳಲಾಗದು. ಗುಂಪರ್ಜ್ ಚರ್ಚಿಸಿದ ಮೈಸೂರು (ಕರ್ನಾಟಕ)- ಮಹಾರಾಷ್ಟ್ರ ಗಡಿಪ್ರದೇಶದ ಭಾಷಾ ಸಂಪರ್ಕಕ್ಕೆ ಸಂಬಂಧಿಸಿದ ವಿವರಗಳೂ, ಪಂಡಿತ್ ಅವರು ಚರ್ಚಿಸಿರುವ ತಮಿಳು ನಾಡಿನ ಸೌರಾಷ್ಟ್ರಿ ಭಾಷಿಕರ ವಿವರಗಳೂ ಸಮಾಜೋ ಭಾಷಿಕ ಅಧ್ಯಯನಕ್ಕೆ ಕುತೂಹಲಕಾರಿ ಮಾಹಿತಿಗಳನ್ನೊದಗಿಸುವುದರಿಂದ ಅವುಗಳ ಕುರಿತೂ ಸಾಂದರ್ಭಿಕವಾಗಿ ಇಲ್ಲಿ ಪ್ರಸ್ತಾಪಿಸಲಾಗಿದೆ.

### ಪ್ರಾದೇಶಿಕ ಉಪಭಾಷೆಗಳ ಅಧ್ಯಯನಗಳು

'ಇಂಟರ್‌ನ್ಯಾಷನಲ್ ಜರ್ನಲ್ ಆಫ್ ಡ್ರವೀಡಿಯನ್ ಲಿಂಗ್ವಿಸ್ಟಿಕ್ಸ್'ಗಾಗಿ ಸಿದ್ಧಪಡಿಸಿದ ದಕ್ಷಿಣ ಭಾರತದ ಉಪಭಾಷಾ ಅಧ್ಯಯನಕ್ಕೆ ಸಂಬಂಧಪಟ್ಟ ಈ ಕೆಳಗಿನ ಟಿಪ್ಪಣಿ ರೂಪದ ಮಾಹಿತಿಯನ್ನು ನನಗೆ ಒದಗಿಸಿಕೊಟ್ಟವರು ಕೇರಳ ವಿಶ್ವವಿದ್ಯಾಲಯದ ಭಾಷಾ ವಿಜ್ಞಾನ ವಿಭಾಗದ ಡಾ. ಎಸ್.ಶಿವರಾಮ ಮೂರ್ತಿಯವರು.

ಪುಣೆಯ ಡೆಕ್ಕನ್ ಕಾಲೇಜಿನ ಭಾಷಾ ಸರ್ವೇಕ್ಷಣಾ ಯೋಜನೆಯಡಿಯಲ್ಲಿ ಕನ್ನಡ, ತೆಲುಗು ಮತ್ತು ಮರಾಠಿ (ದ್ರಾವಿಡ ಪ್ರದೇಶಗಳಲ್ಲಿ ಮಾತನಾಡುವ ಮರಾಠಿಯ ಉಪಭಾಷೆಯೂ ಸೇರಿದಂತೆ) ಉಪಭಾಷೆಗಳ ಸರ್ವೇಕ್ಷಣೆಯನ್ನು ನಡೆಸಲಾಗಿದೆ. ಡಾ.ಡಿ.ಎನ್. ಶಂಕರಭಟ್ಟರ ಮಾರ್ಗದರ್ಶನದಲ್ಲಿ ಎ.ಎಸ್.ಆಚಾರ್ಯ, ಆರ್.ಮಹಾ ದೇವನ್ ಮತ್ತು ಯು.ಪಿ.ಉಪಾಧ್ಯಾಯ ಅವರುಗಳು ನಡೆಸಿದ ಸರ್ವೇಕ್ಷಣೆಗಳ ವರದಿಗಳಲ್ಲಿ ಕನ್ನಡದ ಉಪಭಾಷೆಗಳ ವಿವರಣಾತ್ಮಕ ವ್ಯಾಕರಣಗಳನ್ನು ಒದಗಿಸಲಾಗಿದೆ. ಡಾ.ಎ.ಎಂ.ಘಾಟಗೆಯವರ ಮಾರ್ಗದರ್ಶನದಲ್ಲಿ ಕೈಗೊಳ್ಳಲಾದ ಮರಾಠಿ ಉಪಭಾಷೆಗಳ ಸರ್ವೇಕ್ಷಣೆಯು ದಕ್ಷಿಣ ಕನ್ನಡದಲ್ಲಿ ಪ್ರಚಲಿತವಿರುವ ಕೊಂಕಣಿ ಮತ್ತು ಕಾಸರಗೋಡಿನಲ್ಲಿ ಮಾತನಾಡುವ ಮರಾಠಿ ಉಪಭಾಷೆಗಳ ವಿವರಣೆಗಳನ್ನು ನೀಡುತ್ತದೆ. ಕನ್ನಡ ಮತ್ತು ಮರಾಠಿ ಉಪಭಾಷೆಗಳಿಗೆ ಸಂಬಂಧಿಸಿದ ಇತರ ವಿವರಗಳು ಮುಂದೆ ಕಾಲಕಾಲಕ್ಕೆ ಪುಣೆಯ "ಲಿಂಗ್ವಿಸ್ಟಿಕ್ ಸರ್ವೇ ಬುಲೆಟಿನ್ ಆಫ್ ದ ಡೆಕ್ಕನ್ ಕಾಲೇಜ್" ಸಂಪುಟದಲ್ಲಿ ಪ್ರಕಟವಾಗಿವೆ.

ಅಣ್ಣಾಮಲೈ ವಿಶ್ವವಿದ್ಯಾಲಯದ ಭಾಷಾವಿಜ್ಞಾನ ವಿಭಾಗವು ನಡೆಸಿದ ತಮಿಳು ಉಪಭಾಷಾ ಸರ್ವೇಕ್ಷಣೆಯ ಮೂಲಕ ಅನೇಕ ಯೋಜನಾ ವರದಿಗಳು ಸಿದ್ಧಗೊಂಡಿವೆ. ಇದಲ್ಲದೆ ಕಮಿಲ್ ಜ್ವೆಲೆಬಿಲ್ ಅವರೂ ತಮಿಳು ಉಪಭಾಷೆಗಳ ಕುರಿತು ಹಲವು ಅಧ್ಯಯನಗಳನ್ನು ನಡೆಸಿದ್ದಾರೆ.

ಆಂಧ್ರಪ್ರದೇಶ ಸಾಹಿತ್ಯ ಅಕಾಡೆಮಿಯು ವೃತ್ತಿಪದಗಳ ಅಧ್ಯಯನ ಮಾಲಿಕೆಯಡಿಯಲ್ಲಿ ಅನೇಕ ವೃತ್ತಿಪದಕೋಶಗಳನ್ನು ಪ್ರಕಟಿಸಿದೆ. ಭದ್ರಿರಾಜು ಕೃಷ್ಣಮೂರ್ತಿಯವರ ಕೃಷಿಪದ ಕೋಶ (ಮಾಂಡಲಿಕ ವೃತ್ತಿಪದಕೋಶಂ)ವು ಇವುಗಳಲ್ಲಿ ಮೊದಲನೆಯದು. ಪ್ರಸ್ತುತ ಸಂಪುಟದಲ್ಲಿರುವ ಆಂಗ್ಲಭಾಷಾ ಪ್ರಸ್ತಾವನೆಯು ಯೋಜನೆಯ ವ್ಯಾಪ್ತಿ ಮತ್ತು ವಿಧಾನ ಗಳನ್ನು ವಿವರಿಸುತ್ತದೆ.

ಡಾ.ವಿ.ಐ.ಸುಬ್ರಹ್ಮಣ್ಯಂ ಅವರ ಮೇಲ್ವಿಚಾರಣೆಯಲ್ಲಿ ಕೇರಳ ವಿಶ್ವವಿದ್ಯಾಲಯದ ಭಾಷಾವಿಜ್ಞಾನ ವಿಭಾಗವು ಕೈಗೊಂಡ ಸಣ್ಣಪ್ರಮಾಣದ ಉಪಭಾಷಾ ಸರ್ವೇಕ್ಷಣಾ ಯೋಜನೆಯು ಮುಖ್ಯವಾಗಿ ಉಪಭಾಷಾ ಭೂಪಟಗಳನ್ನು ಮತ್ತು ಪ್ರತಿಯೊಂದು ಉಪಭಾಷೆಗಳ ವಿವರಣಾತ್ಮಕ ವ್ಯಾಕರಣಗಳನ್ನು ಸಿದ್ಧಪಡಿಸುವತ್ತ ಗಮನ ಹರಿಸಿವೆ. ಭಾರತದಲ್ಲಿ ಇದುವರೆಗೆ ನಡೆದ ಉಪಭಾಷಾ ಸರ್ವೇಕ್ಷಣೆಗಳ ಪೈಕಿ ವೈಧಾನಿಕತೆಯ ದೃಷ್ಟಿಯಿಂದ ಇದು ತುಂಬ ವ್ಯವಸ್ಥಿತವಾಗಿ ನಡೆದ ಸರ್ವೇಕ್ಷಣೆಯೆನ್ನಬಹುದು. ಯೋಜನಾ ವರದಿಯನ್ನು ಸಿದ್ಧಪಡಿಸುವುದಕ್ಕೆ ಮುನ್ನ ಸರ್ವೇಕ್ಷಣಾ ತಂಡವು ೯೫೦ ಸ್ಥಳೀಯಾಡಳಿತ ಘಟಕ (ಪಂಚಾಯತು)ಗಳಿಗೆ ನಾಲ್ಕು ನಾಲ್ಕು ಬಾರಿ ಭೇಟಿಕೊಟ್ಟು, ಸಾಮಗ್ರಿಗಳನ್ನು ಸಂಗ್ರಹಿಸಿದೆ. ಸಾಮಗ್ರಿ ಸಂಗ್ರಹ, ವಿಶ್ಲೇಷಣೆ ಮತ್ತು ವರದಿಗಾಗಿ ಸಾಮಗ್ರಿಗಳ ಜೋಡಣೆ - ಇತ್ಯಾದಿ ಕಾರ್ಯಗಳನ್ನು ಜಾತಿಯಾಧಾರದಿಂದ ಸಂಘಟಿಸಲಾಗಿತ್ತು. ತಿಲಾಯಾ (ಈ ಟಿ ನ) ಮತ್ತು ನಾಯರ್ ಮಲಯಾಳಂಗಳಿಗೆ ಸಂಬಂಧಿಸಿದ ಸಾಮಗ್ರಿಗಳನ್ನು ಈಗಾಗಲೇ ಸಂಗ್ರಹಿಸಲಾಗಿದ್ದು ಹರಿಜನರಾಡುವ ಉಪಭಾಷೆಯ ಕುರಿತು ಸಾಮಗ್ರಿ ಸಂಗ್ರಹ ಕಾರ್ಯ ಪ್ರಗತಿಯಲ್ಲಿದೆ. ತಿಯ್ಯರ್ (ತೀಯಾ) ಮಲಯಾಳಂಗೆ ಸಂಬಂಧಿಸಿದಂತೆ ಸಮಾನ ಶಬ್ದಾರ್ಥಗಳನ್ನು ತೋರಿಸುವ ಸುಮಾರು ಮುನ್ನೂರರಷ್ಟು ಭೂಪಟಗಳನ್ನು ಸಿದ್ಧಪಡಿಸ ಲಾಗಿದೆ. ಅಂತಿಮವಾಗಿ ಮಲಯಾಳಂ ಉಪಭಾಷೆಗಳಿಗೆ ಸಂಬಂಧಪಟ್ಟ ನಿಘಂಟೊಂದನ್ನು ಸಿದ್ಧಪಡಿಸಲು ವಿಭಾಗವು ಉದ್ದೇಶಿಸಿದೆ.

ಈ ಯೋಜನೆಯ ಸಂಘಟನೆಯು ಜಾತಿ (ಭೇದ) ಪದ್ಧತಿಗೆ ಹೆಚ್ಚಿನ ಪ್ರಾಮುಖ್ಯವನ್ನು ಕೊಡುತ್ತದೆಂದು ಕೆಲವು ವಿದ್ವಾಂಸರು ಟೀಕಿಸಿದ್ದಾರೆ. ರಾಜಕೀಯ ನೆಲೆಯಿಂದ ಈ ಆಕ್ಷೇಪವನ್ನು ಮಾಡಿದ್ದಾದರೆ ಸಮಾಜಶಾಸ್ತ್ರಜ್ಞರು ಆ ಬಗ್ಗೆ ತಲೆಕೆಡಿಸಿಕೊಳ್ಳಬೇಕಾದ್ದಿಲ್ಲ. ಯಾಕೆಂದರೆ ರಾಜಕಾರಣಿಗಳ ಬಯಸಿದಷ್ಟು ವೇಗವಾಗಿ ಜಾತಿ ಭೇದಗಳು ಕಡಿಮೆಯಾಗುವು ದಿಲ್ಲವೆಂಬುದು ಸ್ಪಷ್ಟವಿದೆ. ವೈಧಾನಿಕತೆಯ ದೃಷ್ಟಿಯಿಂದ ಹೇಳಬಹುದಾದರೆ, ಸರ್ವೇಕ್ಷಣೆಯ ವಿನ್ಯಾಸವು 'ಜಾತೀಯ ಉಪಭಾಷೆ'ಯ ಅಸ್ತಿತ್ವವನ್ನು ಆರೋಪಿಸಿಕೊಂಡಿದ್ದರೆ ಅದೇ ರೀತಿ ಆಯಾ ಜಾತಿಗಳವರೇ ಸಾಮಗ್ರಿಗಳನ್ನು ಸಂಗ್ರಹಿಸಿದ್ದರೆ ಅದರ ಫಲಿತಾಂಶವು ಭಾಷಾ ವ್ಯತ್ಯಾಸದ ಅಂಶಗಳಾದ ಜಾತಿ ಮತ್ತು ಇತರ ಸಾಮಾಜಿಕ ವ್ಯತ್ಯಾಸಕಾರಕಗಳೊಳಗಿನ ಸಂಬಂಧವನ್ನು ಮಸುಕಾಗಿಸುವ ಸಾಧ್ಯತೆಯಿದೆ.

**ಸಾಮಾಜಿಕ ಉಪಭಾಷೆಗಳು**

ಗುಂಪರ್ಜನು ನಡೆಸಿದ ಪ್ರಾರಂಭಿಕ ಕಾಲಘಟ್ಟದ ಅಧ್ಯಯನವೊಂದು ಭಾಷಾ ಪ್ರವೃತ್ತಿಯನ್ನು ಪ್ರತ್ಯೇಕೀಕರಿಸುವಲ್ಲಿ ಪ್ರಮುಖ ಪಾತ್ರವಹಿಸುವ ಜಾತಿಭೇದಗಳು, ವಸತಿ ಪರಿಸರ, ಹಾಗೂ ಧಾರ್ಮಿಕ ಸಂಪ್ರದಾಯಗಳ ಮಹತ್ತ್ವವನ್ನು ವಿವರಿಸುತ್ತವೆ. ಆತನ ನಿರ್ಣಯದಂತೆ ಅನೌಪಚಾರಿಕ ಸ್ನೇಹ ಸಂಪರ್ಕಗಳ ನಿರ್ಣಯಾತ್ಮಕ ಅಂಶಗಳಾಗುತ್ತವೆ. ಸ್ಪೃಶ್ಯರ ನಡುವೆ ಅಸಂಖ್ಯ ಅಂತರ್‌ಗುಂಪು ಹಾಗೂ ಅಂತರ್ ಜಾತೀಯ ಸ್ನೇಹ ಸಂಬಂಧಗಳಿದ್ದರೂ ಒಂದು ವಿಭಾಗದಿಂದ ಇನ್ನೊಂದಕ್ಕೆ ನವೀನತೆ (ಬದಲಾವಣೆ)ಯು ಹರಡದಂತೆ ತಡೆಯಬಲ್ಲ ತಡೆಗೋಡೆಗಳಿಲ್ಲ. ಹೇಗಿದ್ದರೂ ಈ ಸ್ನೇಹಸಂಬಂಧಗಳು ಸ್ಪೃಶ್ಯ-ಅಸ್ಪೃಶ್ಯ ರೇಖೆಯುದ್ದಕ್ಕೂ ವಿಸ್ತರಿಸುವುದಿಲ್ಲ ಅಥವಾ ಒಂದು ಸ್ಪೃಶ್ಯ ಗುಂಪಿನಿಂದ ಇನ್ನೊಂದಕ್ಕೂ ವಿಸ್ತರಿಸುವುದಿಲ್ಲ. ಹಾಗಾಗಿ ಅಸ್ಪಶ್ಯರ ಭಾಷಾ ಪ್ರತ್ಯೇಕತೆಗೆ ಇದು ಕಾರಣ ವಾಗುತ್ತದೆ.

ಈ ಫಲಿತದ ಆಧಾರದಿಂದ ಗುಂಪರ್ಜನು, ಬಹುದಿನಗಳಿಂದ ಒಪ್ಪಿಕೊಂಡು ಬಂದಿದ್ದ ಬ್ಲೂಮ್‌ಫೀಲ್ಡ್‌ನ 'ಸಂಪರ್ಕ ಸಾಂದ್ರತೆ' ಸಿದ್ಧಾಂತವನ್ನು ಪರಿಷ್ಕರಿಸಬೇಕಾದ ಅಗತ್ಯವನ್ನು ಮನಗಂಡನು. ಈ ಸಿದ್ಧಾಂತದ ಪ್ರಕಾರ ಸಮಾಜದಲ್ಲಿರುವ ವ್ಯಕ್ತಿ ಭಾಷೆಗಳು ಮತ್ತು ಅವರೊಳಗೆ ನಡೆಯುವ ಸಂವಹನ ಪ್ರಮಾಣವು ಅನುಪಾತದಲ್ಲಿ ಸಮಾನವಾದುದು. ಇಲ್ಲಿ ಭಾಷಾಭೇದಗಳು ಬಹುಪಾಲು ಜಾತಿಗಳನ್ನು ಒಳಗೊಂಡ ಕೆಲಸದ ಗುಂಪುಗಳಿಗೆ ಸಂಬಂಧಿಸಿರದೆ, ಸ್ನೇಹಗುಂಪುಗಳಿಗೆ ಸಂಬಂಧಿಸಿರುತ್ತವೆ. ಸ್ಪಷ್ಟವಾಗಿ ಸಂಪರ್ಕ ವಿಷಯದ ಪ್ರಮಾಣವಷ್ಟೇ ಆಗಿರದೆ ಸಂಪರ್ಕದ ವಿಧಾನಕ್ಕೂ ಸಂಬಂಧಿಸಿರುತ್ತದೆ.

ಗುಂಪರ್ಜನು ತನ್ನ ಅಧ್ಯಯನಕ್ಕೆ ಆರಿಸಿಕೊಂಡ ಗ್ರಾಮವು ಉತ್ತರ ಭಾರತಕ್ಕೆ ಸೇರಿದುದಾದರೂ ಸ್ನೇಹಗುಂಪುಗಳು ಮತ್ತು ಜಾತಿ ಭೇದಗಳು ಭಾಷಾವ್ಯತ್ಯಾಸಗಳಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತವೆಂಬ ಆತನ ತೀರ್ಮಾನವು ದಕ್ಷಿಣ ಏಷಿಯಾ ಹಾಗೂ ಇತರೆಡೆಗಳಿಗೂ ಅನ್ವಯ ವಾಗುತ್ತದೆ. ಇದುವರೆಗೆ ಲಭಿಸಿದ ಅಂಕಿ ಅಂಶಗಳ ಆಧಾರದಿಂದ ಹೇಳಬಹುದಾದರೆ ದಕ್ಷಿಣ ಭಾರತದಲ್ಲಿ ಉತ್ತರದ ಪ್ರದೇಶಗಳಿಗಿಂತಲೂ ಅಧಿಕ ಸಂಖ್ಯೆಯ ಸಾಮಾಜಿಕ ಉಪಭಾಷೆಗಳು ಹೆಚ್ಚಿನ ಅಂತರದೊಂದಿಗೆ ಕಾಣಸಿಗುತ್ತವೆ. ದಕ್ಷಿಣ ಭಾರತದಲ್ಲಿ ಸಾಮಾಜಿಕ ಉಪಭಾಷೆಗಳಿಗೆ ಸಂಬಂಧಿಸಿದಂತೆ ನಡೆದಿರುವ ಬಹುಪಾಲು ಅಧ್ಯಯನಗಳು ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಭಾಷೆಗಳ ಧ್ವನಿಮಾ, ಆಕೃತಿಮಾ ಮತ್ತು ಶಬ್ದಕೋಶ ಗಳಲ್ಲಿರುವ ತೀಕ್ಷ್ಣ ವ್ಯತ್ಯಾಸಗಳನ್ನು ತೋರಿಸಿಕೊಟ್ಟಿವೆ.

ತಮಿಳು, ತುಳು, ತೆಲುಗು, ಕನ್ನಡ ಮತ್ತು ಮಲಯಾಳಂ ಗಳಿಗೆ ಸಂಬಂಧಪಟ್ಟಂತೆ ಬ್ರಾಹ್ಮಣ ಭಾಷೆಯಲ್ಲಿ ಧ್ವನಿಮಾತ್ಮಕ ಅಂತರಗಳಿರುವುದನ್ನು ಗುರುತಿಸಲಾಗಿದೆ. ಅಸಂಖ್ಯ ಧ್ವನಿಮಾತ್ಮಕ ವ್ಯತ್ಯಾಸಗಳಲ್ಲಿ ಸ್ವೀಕೃತ ರೂಪಗಳ ಬಳಕೆಯೂ ಸೇರಿದೆ. ಬ್ರಾಹ್ಮಣ ಭಾಷಿಕರು ವಿದೇಶೀ ಧ್ವನಿಶಾಸ್ತ್ರವನ್ನು ಬ್ರಾಹ್ಮಣೇತರರಿಗಿಂತ ವಿಶೇಷ ಶ್ರದ್ಧೆ-ವಿಧೇಯತೆಗಳಿಂದ

ಪುನರ್‌ಸೃಷ್ಟಿಸಿ, ಪಾಲಿಸಿಕೊಂಡು ಬರುತ್ತಾರೆ. ಉದಾ. ಬ್ರಾಹ್ಮಣ ತಮಿಳು ಸ್ವಾಮಿ, ಬ್ರಾಹ್ಮಣೇತರ ತಮಿಳು ಸ್ವಾಮಿ (ಸಂಸ್ಕೃತ:ಸ್ವಾಮಿನ್) ಬ್ರಾಹ್ಮಣ ಕನ್ನಡ ಕಾಫಿ, ಬ್ರಾಹ್ಮಣೇತರ ಕನ್ನಡ ಕಾಪಿ (ಇಂಗ್ಲಿಷ್ coffee) ಬ್ರಾಹ್ಮಣ ತೆಲುಗು ವ್ಯವಹಾರ, ಬ್ರಾಹ್ಮಣೇತರ ತೆಲುಗು ವ್ಯವಾರೌ \ಯವ್ವಾರೌ (ಸಂಸ್ಕೃತ : ವ್ಯವಹಾರಂ) ಬ್ರಾಹ್ಮಣ ತುಳು, ಗಂಧ, ಬ್ರಾಹ್ಮಣೇತರ ತುಳು, ಗಂದ (ಸಂಸ್ಕೃತ/ ಗಂಧ) ಕೆಲವೆಡೆ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಭಾಷೆಗಳೆರಡೂ ಸರಿಯಾದ ರೂಪಗಳೆಂಬ ಭ್ರಮೆಯಿಂದ ವಿದೇಶೀ ಧ್ವನಿಮಾ ಅಂಶಗಳನ್ನು ತಪ್ಪಾಗಿ ಬಳಸುವುದಿದೆ. ಉದಾ. ಬ್ರಾಹ್ಮಣ ತಮಿಳು:ಕ್ರಾಫು, ಬ್ರಾಹ್ಮಣೇತರ ತಮಿಳು:ಕ್ರಾಪ್ಪು (ಇಂಗ್ಲಿಷ್/ಕ್ರಾಪ್). ಇವಲ್ಲದೆ ಕೆಲವು ದೇಶೀ ಭಾಷಾ ರೂಪಗಳಲ್ಲೂ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ನಡುವೆ ಧ್ವನಿಮಾತ್ಮಕ ವ್ಯತ್ಯಾಸ ಗಳಿರುವುದನ್ನು ಕಾಣಬಹುದು. ಇಂಥ ಸಂದರ್ಭಗಳಲ್ಲಿ ಬ್ರಾಹ್ಮಣರ ಉಚ್ಚಾರಣೆಯೇ ಹೆಚ್ಚು ಶುದ್ಧವಾದುದು ಎಂಬ ತಿಳುವಳಿಕೆಯೂ ಇದೆ. ಉದಾ. ಬ್ರಾಹ್ಮಣ ಕನ್ನಡ:ಹಾಕು, ಬ್ರಾಹ್ಮಣೇತರ ತೆಲುಗು:ಎದುಗು (ಬಿದಿರು). ಬ್ರಾಹ್ಮಣೇತರ ಕನ್ನಡ, ಆಕು; ಬ್ರಾಹ್ಮಣ ತೆಲುಗು ವೆದುರು (ಸುಬ್ಬರಾವ್ ಅವರ ಪ್ರಕಾರ ಪದಾದಿ ಯವ್ ಧ್ವನಿಮಾವು ಪ್ರಾಚೀನ ರೂಪವಾಗಿದೆ) ಬ್ರಾಹ್ಮಣ ತಮಿಳು ವಾಟಪ್ಪಟಂ, ಬ್ರಾಹ್ಮಣೇತರ ತಮಿಳು ವಾಝುಪ್ಪಳಂ\ ವಾಳಪ್ಪಟಂ \ ವಾಯಪ್ಪಯಂ(ಬಾಳೆಹಣ್ಣು) ಬ್ರಾಹ್ಮಣ ತುಳು ಸಿಕ್ಕ್, ಬ್ರಾಹ್ಮಣೇತರ ತುಳು ತಿಕ್ಕ್ (ಸಿಗು)

ಆಕೃತಿಮಾ (ಶಾಸ್ತ್ರ) ಮತ್ತು ಶಬ್ದಕೋಶಗಳಿಗೆ ಸಂಬಂಧಿಸಿದಂತೆಯೂ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಭಾಷೆಗಳಲ್ಲಿ ವ್ಯತ್ಯಾಸಗಳಾಗುತ್ತವೆ. ರಾಮಾನುಜನ್ ಅವರು ಹೇಳುವಂತೆ, ತಮಿಳಿನ ಕ್ರಿಯಾಂತ್ಯಗಳಲ್ಲಿ ಈ ಆಕೃತಿಮಾ ಭಿನ್ನರೂಪಗಳೆ, ಕಂಡುಬರುತ್ತವೆ. ಕನ್ನಡದ ಕ್ರಿಯಾಂತ್ಯ ಮತ್ತು ನಾಮಪದಾಂತ್ಯಗಳಲ್ಲಿ ಈ ರೀತಿಯ ವ್ಯತ್ಯಾಸಗಳಾಗುತ್ತವೆಂದು ಮೆಕ್‌ಕೊರ್ಮಾಕ್ ಹೇಳುತ್ತಾನೆ. ಬ್ರೈಟ್ ಮತ್ತು ರಾಮಾನುಜನ್ ಅವರು ವಿವರಿಸಿರುವಂತೆ ತುಳುವಿನ ಷಷ್ಠೀ ವಿಭಕ್ತಿ ಪ್ರತ್ಯಯದಲ್ಲಿ ಇಂತಹ ಭಿನ್ನ ಆಕೃತಿಮಾ ರೂಪಗಳಿವೆ. ಸುಬ್ಬರಾವ್ ಅವರ ಪ್ರಕಾರ ತೆಲುಗಿನ ಕ್ರಿಯಾಂತ್ಯಗಳಲ್ಲಿ ಈ ತೆರನಾದ ವ್ಯತ್ಯಾಸಗಳಾಗುತ್ತವೆ. ಅನೇಕ ಸಂದರ್ಭಗಳಲ್ಲಿ ಇಲ್ಲಿ ವಿವರಿಸಿದ ವಿವಿಧ ಪೂರಕಗಳು ಒಂದೇ ಪದಾಂತ್ಯಗಳಲ್ಲಿ ಕಂಡು ಬರುವುದಿದೆ. ಅಂದರೆ ಒಂದೇ ಆಕೃತಿಮಾ ವರ್ಗವು ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಪ್ರಭೇದಗಳಲ್ಲಿ ವಿಭಿನ್ನ ರೂಪಗಳಾಗಿ ಕಾಣಿಸುತ್ತದೆ. ಸಾದೃಶ್ಯಾರ್ಥಗಳೊಂದಿಗೆ ಅನನ್ಯವಾದ ಆಕೃತಿಮಾ ಪರಿಸರದಲ್ಲಿ ಪ್ರತ್ಯಯಗಳ ಧ್ವನಿಮಾ ಸ್ವರೂಪದಲ್ಲಿ ಸಂಭವಿಸುವ ವ್ಯತ್ಯಾಸಗಳೇ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಭಾಷೆಗಳಲ್ಲಿನ ಪ್ರಮುಖ ವ್ಯತ್ಯಾಸಗಳಾಗಿವೆಯೆಂದು ಮೆಕ್ ಕೊರ್ಮಾಕನು ಗುರುತಿಸುತ್ತಾನೆ. ಇದರಂತೆ ಕನ್ನಡದ ಉತ್ತಮ ಪುರುಷ ಏಕವಚನ ಕ್ರಿಯಾಪದವು ಬ್ರಾಹ್ಮಣರಲ್ಲಿ ಎ (e) ಧ್ವನಿಮಾದಿಂದ ಅಂತ್ಯಗೊಂಡರೆ ಬ್ರಾಹ್ಮಣೇತರರಲ್ಲಿ ಆ್ಯ (ae) ಧ್ವನಿಮಾದಿಂದ ಅಂತ್ಯಗೊಳ್ಳುತ್ತದೆಂದೂ, ಉತ್ತಮ ಪುರುಷ ಬಹುವಚನವು

ಬ್ರಾಹ್ಮಣರಲ್ಲಿ ಎ\ವಿ ಧ್ವನಿಮಾಗಳಿಂದ ಅಂತ್ಯಗೊಂಡರೆ ಬ್ರಾಹ್ಮಣೇತರರಲ್ಲಿ ಇ\ವಿ ಧ್ವನಿಮಾಗಳಿಂದ ಅಂತ್ಯಗೊಳ್ಳುತ್ತದೆಂದು ಮೆಕ್ ಕೊರ್ಮಾಕನು ಪಟ್ಟಿ ಮಾಡುತ್ತಾನೆ.[೧]

ಈ ತೆರನಾದ ವ್ಯತ್ಯಾಸಗಳನ್ನು ಇಂದು ಭಾಷಾಶಾಸ್ತ್ರಜ್ಞರು ಮೇಲ್ಮೈ ರಚನೆಯಲ್ಲಾಗುವ ವ್ಯತ್ಯಾಸಗಳೆಂದು ಕರೆಯುತ್ತಾರೆ. ಇಲ್ಲಿ ಪ್ರಸ್ತಾಪಿತವಾದ ಕೆಲವು ಭಿನ್ನತೆಗಳು ಇನ್ನೊಂದೆಡೆ ಅಲ್ಲಿರುವ ಅರ್ಥವಿಜ್ಞಾನ ರಚನೆಯಲ್ಲಾಗುವ ವ್ಯತ್ಯಾಸಗಳೂ ಆಗಿವೆ. ಉದಾಹರಣೆಗೆ ಸಪ್ತಮೀ ವಿಭಕ್ತಿ ಪ್ರತ್ಯಯಗಳ ಕುರಿತು ಚರ್ಚಿಸುತ್ತಾ ಮೆಕ್ ಕೊರ್ಮಾಕನು ಈ ಕೆಳಗಿನ ಎರಡು ದೃಷ್ಟಾಂತಗಳನ್ನು ಪಟ್ಟಿಮಾಡುತ್ತಾನೆ (೧) ಬ್ರಾಹ್ಮಣರಲ್ಲಿಯ - ಕ, ಬ್ರಾಹ್ಮಣೇತರರಲ್ಲಿ ಇಗೆ, (೨) ಬ್ರಾಹ್ಮಣರಲ್ಲಿ ಉಕ್ಕ, ಬ್ರಾಹ್ಮಣೇತರರಲ್ಲಿ. ಇ ಗೆ, ಇಲ್ಲಿ ಬ್ರಾಹ್ಮಣ ಕನ್ನಡದಲ್ಲಿ ವ್ಯತ್ಯಾಸವಾಗಿದ್ದರೆ, ಬ್ರಾಹ್ಮಣೇತರ ಕನ್ನಡದಲ್ಲಿ ಆಗಿಲ್ಲವೆಂದು ಮೆಕ್ ಕೊರ್ಮಾಕನು ಸೂಚಿಸುತ್ತಾನೆ. ಬ್ರೈಟ್ ಮತ್ತು ರಾಮಾನುಜನ್ ಅವರು ಬ್ರಾಹ್ಮಣೇತರ ತುಳುವಿನಲ್ಲಿ 'ದ' ಎಂಬ ಒಂದೇ ಷಷ್ಠೀ ವಿಭಕ್ತಿ ಪ್ರತ್ಯಯವಿದ್ದರೆ ಬ್ರಾಹ್ಮಣ ತುಳುವಿನಲ್ಲಿ 'ನೊ' (ಮಹತ್/ ಚೇತನ ನಾಮಪದಗಳೊಂದಿಗೆ) ಮತ್ತು 'ನ್ತೆ' (ಅಮಹತ್/ ಅಚೇತನ ನಾಮಪದಗಳಿಗೆ) ಎಂಬೆರಡು ವಿಭಿನ್ನ ಪ್ರತ್ಯಯಗಳಿವೆಯೆನ್ನುತ್ತಾರೆ.[೨] ರಾಮಾನುಜನ್ ಅವರು ತಮಿಳು ಸರ್ವನಾಮ ವ್ಯವಸ್ಥೆಯಲ್ಲೂ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಭಾಷೆಗಳೊಳಗೆ ಸಾಕಷ್ಟು ಭಿನ್ನತೆಗಳಿವೆಯೆನ್ನುತ್ತಾರೆ. ಇನ್ನೂ ಹತ್ತಿರದ ಸಂಶೋಧನೆಗಳು ನಡೆದಂತೆಲ್ಲಾ ಈ ರೀತಿಯ ಇನ್ನಷ್ಟು ಭಿನ್ನತೆಯ ಅಂಶಗಳು ಬೆಳಕಿಗೆ ಬರಬಹುದು.[೩] ಭಾಷಿಕ ವ್ಯತ್ಯಾಸಗಳಿಗೆ ಕಾರಣವಾಗುವ ಅಂಶಗಳ ವಿಭಿನ್ನ ಸಾಮಾಜಿಕ ಕ್ರಿಯೆಗಳನ್ನು ಅಧ್ಯಯನ ಮಾಡುವಲ್ಲಿ ಮೇಲ್ಮೈ ವ್ಯಾಕರಣ ಮತ್ತು ಅರ್ಥರಚನೆಗಳೊಳಗಿನ ವ್ಯತ್ಯಾಸವು ಮುಖ್ಯವಾಗಿರುತ್ತದೆ.

ಶಬ್ದಕೋಶಕ್ಕೆ ಸಂಬಂಧಿಸಿದ ವ್ಯತ್ಯಾಸಗಳಲ್ಲೂ ಎರಡು ವಿಧಗಳಿವೆ. ಒಂದನೆಯ ಮಾದರಿಯಲ್ಲಿ ಒಂದೇ ವಸ್ತು ವಿಷಯವನ್ನು ಸೂಚಿಸಲು ವಿವಿಧ ಸಂದರ್ಭಗಳಲ್ಲಿ ಬೇರೆ ಬೇರೆ ರೂಪಗಳಿರುತ್ತವೆ. ಉದಾಹರಣೆಗೆ ತುಳು ಬ್ರಾಹ್ಮಣರು ಗಂಡನಿಗೆ 'ಪುರುಷೆ' (ಸಂಸ್ಕೃತ ಪುರುಷ) ಎಂದರೆ ಬ್ರಾಹ್ಮಣೇತರರು "ಕಂಡನೆ" ಎನ್ನುತ್ತಾರೆ. ಇತರ ಕೆಲವು ಸಂದರ್ಭಗಳಲ್ಲಿ ಮೊದಲ ನೋಟಕ್ಕೆ ಇಂತಹ ಮಾದರಿಗಳು ಕಂಡರೂ ವಾಸ್ತವವಾಗಿ ಅಲ್ಲಿ ಅರ್ಥರಚನೆಗೆ ಸಂಬಂಧಿಸಿದ ವ್ಯತ್ಯಾಸಗಳಿರುತ್ತವೆ. ಉದಾಹರಣೆಗೆ ತಮಿಳು ಕಲಿಯುವ ವಿದೇಶೀಯರಿಗೆ ಕೆಲವೊಮ್ಮೆ ಬ್ರಾಹ್ಮಣೇತರ ಭಾಷಿಕರು ಬ್ರಾಹ್ಮಣ ತಮಿಳಿನಲ್ಲಿಅನ್ನಕ್ಕೆ 'ಸಾದಮ್' ಎಂದೂ ಬ್ರಾಹ್ಮಣೇತರ ತಮಿಳಿನಲ್ಲಿ "ಚೋರು" ಎಂದೂ ಇರುವುದಾಗಿ ಹೇಳುತ್ತಾರೆ. ರಾಮಾನುಜನ್ ಅವರ ಪ್ರಕಾರ ಬೇರೆಯದೇ ಆದ ಅರ್ಥದಲ್ಲಿ ಬ್ರಾಹ್ಮಣ ಭಾಷಿಕರೂ 'ಚೋರು' ಪದವನ್ನು ಬಳಸುತ್ತಾರೆ (ಉಪಯೋಗಕ್ಕೆ ಬಾರದ ಅನ್ನ, ಬಿಟ್ಟಿಕೂಳು - ಭಿಕ್ಷಾನ್ನ ಎಂಬ ಅರ್ಥದಲ್ಲಿ.) ಇಲ್ಲಿಯ ಎರಡನೆಯ ಮಾದರಿಗೆ ಇತರ ಉದಾಹರಣೆಗಳೂ ಸಿಗಬಹುದು. ಇಂತಹ ವಿಷಯಗಳ ಕುರಿತು ಶ್ರದ್ಧಾಪೂರ್ಣ ಅಧ್ಯಯನಗಳು ನಡೆದರೆ ಅಂತರ್‌ಗುಂಪು ಸಂಬಂಧಗಳ ಸಾಮಾಜಿಕ ಚಲನಶೀಲತೆಗೆ ಸಂಬಂಧಿಸಿದ ಮಹತ್ವದ ಅಂಶಗಳು ಬೆಳಕಿಗೆ ಬರಬಹುದು.

ಸಾರ್ವಜನಿಕವಾಗಿ ಆಗಾಗ ಚರ್ಚಿತವಾಗುವ ಪದಗಳಿರುವ ಪ್ರದೇಶಗಳಲ್ಲಿನ ವಿವಿಧ ಜಾತಿ ಗುಂಪುಗಳ ಭಾಷೆಗಳಲ್ಲಿ ಶಬ್ದಕೋಶಕ್ಕೆ ಸಂಬಂಧಿಸಿದ ವ್ಯತ್ಯಾಸಗಳಿಗೆ ಅಷ್ಟೊಂದು ಮಹತ್ವವಿರುವುದಿಲ್ಲವೆಂಬುದಾಗಿ ತಮಿಳು ಮತ್ತು ಇತರ ದಕ್ಷಿಣ ಏಷಿಯಾ ಭಾಷೆಗಳ ಅರ್ಥರಚನೆ. ತೌಲನಿಕ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಈ ಅಧ್ಯಯನದ ಪ್ರಕಾರ ಸಾರ್ವಜನಿಕವಾಗಿ ಚರ್ಚಿತವಾಗುವ ಕೃಷಿ ಸಂಬಂಧೀ ಶಬ್ದಕೋಶಗಳಲ್ಲಿ ಅಂತರ್ ಜಾತೀಯ ವ್ಯತ್ಯಾಸಗಳು ಕಡಿಮೆ ಪ್ರಮಾಣದಲ್ಲಿ ಕಂಡುಬಂದರೆ ಕುಟುಂಬದೊಳಗಡೆ ಅಥವಾ ಜಾತಿ ಗುಂಪುಗಳೊಳಗಡೆಯಷ್ಟೇ ಪ್ರಚಲಿತವಿರುವ ಆಹಾರ, ಊಟ, ಬಂಧುತ್ವ, ಮದುವೆ ಹಾಗೂ ಇತರ ಆಚರಣೆಗಳಿಗೆ ಸಂಬಂಧಿಸಿದ ಪದಗಳಲ್ಲಿ ಇಂತಹ ವ್ಯತ್ಯಾಸಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಇದರಂತೆ ತಮಿಳಿನ 'ನೆಲ್ಲ್' (ಬತ್ತ) ಮತ್ತು 'ಅರಿಸಿ' (ಅಕ್ಕಿ) ಬ್ರಾಹ್ಮಣರಲ್ಲೂ, ಬ್ರಾಹ್ಮಣೇತರರಲ್ಲೂ ವ್ಯತ್ಯಾಸವಿಲ್ಲದೆ ಬಳಕೆಯಾದರೆ, ಅನ್ನಕ್ಕಿರುವ ಪದಗಳು ಮೇಲೆ ನೋಡಿದಂತೆ ವ್ಯತ್ಯಸ್ತವಾಗಿವೆ.

ಎಂ.ಎಸ್.ಪಿಳ್ಳೈ ಅವರು ತಮಿಳು ಗ್ರಾಮವೊಂದನ್ನು ಆಯ್ದುಕೊಂಡು ಸಂಬಂಧವಾಚಿಗಳ ವ್ಯತ್ಯಾಸಗಳ ಕುರಿತು ಅಧ್ಯಯನ ನಡೆಸಿದ್ದಾರೆ. ಆ ಅಧ್ಯಯನದ ಪ್ರಕಾರ ಬಂಧುವಾಚಿಗಳ ಆಧಾರದಿಂದಲೇ ಜನರನ್ನು ನಾಲ್ಕು ಅಥವಾ ಐದು ಗುಂಪುಗಳಾಗಿ ಪ್ರತ್ಯೇಕಿಸಬಹುದೆಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ. ಇದರಂತೆ ಮುಸಲ್ಮಾನ, ಬ್ರಾಹ್ಮಣ ಮತ್ತು ಮುದಲಿಯಾರರನ್ನು ಪರಸ್ಪರವಾಗಿಯೂ, ಇತರ ಸಮುದಾಯಗಳಿಂದಲೂ ಪ್ರತ್ಯೇಕಿಸಲು ಸಾಧ್ಯವಾಗುತ್ತದೆ. ಈ ತೆರನಾದ ಅಧ್ಯಯನಗಳಲ್ಲಿ ಮುಸಲ್ಮಾನ ಮತ್ತು ಕ್ರೈಸ್ತ ಸಮುದಾಯಗಳು ಹೆಚ್ಚು ಭೇದವುಳ್ಳ ಜಾತಿಗಳಾಗಿ ಕಾರ್ಯ ನಿರ್ವಹಿಸುತ್ತವೆ. ಇಂತಹ ಗುಂಪುಗಳನ್ನು ಸೇರಿಸಿಕೊಳ್ಳುವ ಸಲುವಾಗಿ "ಜಾತಿ" ಪರಿಭಾಷೆಯನ್ನು ವಿಸ್ತರಿಸುವುದರಿಂದ ನಿಜಕ್ಕೂ ಪ್ರಯೋಜನವಾಗುತ್ತದೆ. ಹೀಗೆ ಜಾತಿ ಗಡಿಗಳು ಇತರ ಸಾಂಸ್ಕೃತಿಕ ಮೇರೆಗಳಂತೆ ಶಬ್ದಕೋಶದ ಸ್ವರೂಪದಲ್ಲಿ ಕಾರ್ಯ ನಿರ್ವಹಿಸುತ್ತವೆ. ಉದಾಹರಣೆಗೆ ಅಕ್ಕಿ ಮತ್ತು ಭತ್ತಕ್ಕೆ ಸಂಬಂಧಿಸಿದಂತೆ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರಲ್ಲಿ ಇರುವ ಶಬ್ದ ವ್ಯತ್ಯಾಸವನ್ನು ಹಿಂದೂ - ಉರ್ದು ಪ್ರದೇಶದ ಅಕ್ಕಿ ಮತ್ತು ಗೋಧಿ ಆಹಾರವಾಗುಳ್ಳ ಪ್ರದೇಶಗಳೊಳಗಿನ ವ್ಯತ್ಯಾಸದೊಂದಿಗೆ ಹೋಲಿಸಬಹುದಾಗಿದೆ. ಪೂರ್ವದ ಅಕ್ಕಿ ಆಹಾರವಾಗುಳ್ಳ ಪ್ರದೇಶಗಳಲ್ಲಿ "ಭಾತ್" (ಅನ್ನ) ಮತ್ತು " ಚಾವಲ್" (ಅಕ್ಕಿ ) ಗಳೊಳಗೆ ವ್ಯತ್ಯಾಸ ಸ್ಪಷ್ಟವಾಗಿದ್ದರೆ, ಪಶ್ಚಿಮದ ಗೋಧಿ ಆಹಾರವಾಗುಳ್ಳ ಪ್ರದೇಶಗಳಲ್ಲಿ ಅಕ್ಕಿ ಮತ್ತು ಅನ್ನ ಎಂಬ ಎರಡು ಅರ್ಥಗಳಲ್ಲೂ " ಚಾವಲ್ "ರೂಪ ಒಂದೇ ಬಳಕೆಯಾಗುತ್ತದೆ.

ಎಂ.ಎಲ್.ಆಪ್ಟೆಯವರು ಮುಂಬಯಿ ಮಹಾನಗರದಲ್ಲಿ ವಿವಿಧ ಹಿನ್ನೆಲೆಯುಳ್ಳ ಜನರು ಮಾತನಾಡುವ ವಿಭಿನ್ನ ಮರಾಠಿ ಭಾಷಾರೂಪಗಳ ಕುರಿತು ಅಧ್ಯಯನ ನಡೆಸಿದ್ದಾರೆ. ಅವರ ಅಭಿಪ್ರಾಯದಂತೆ ಮರಾಠರು ಮತ್ತು ಇತರ ಮೇಲ್ಜಾತಿಯವರ ಭಾಷೆಯು ವಿಶೇಷವಾಗಿ ಧ್ವನಿಶಾಸ್ತ್ರದ ದೃಷ್ಟಿಯಿಂದ ಬ್ರಾಹ್ಮಣ ಭಾಷೆಗಿಂತ ಭಿನ್ನವಾದ ಲಕ್ಷಣಗಳನ್ನು ತೋರಿಸುತ್ತದೆ.

ಸ್ವೀಕೃತ ಪದಗಳಲ್ಲಿನ ವ್ಯತ್ಯಾಸಗಳನ್ನು ಅವರು ಈ ರೀತಿ ಗುರುತಿಸುತ್ತಾರೆ. ಉದಾ: ಬ್ರಾಹ್ಮಣ "ವರ್ಷ". ಬ್ರಾಹ್ಮಣೇತರ -'ವರ್ಷ". ಸಂಸ್ಕೃತ -"ವರ್ಷ" , ದೇಸೀಯ ಪದಗಳಲ್ಲಿನ ವ್ಯತ್ಯಾಸಗಳಿಗೆ ಈ ಕೆಳಗಿನಂತೆ ಉದಾಹರಣೆಗಳನ್ನು ಕೊಡುತ್ತಾರೆ. ಬ್ರಾಹ್ಮಣ- 'ಎಕ್', ಬ್ರಾಹ್ಮಣೇತರ- "ಯೇಕ್" (ಒಂದು) ಅವರು ಬ್ರಾಹ್ಮಣ ಮರಾಠಿ ಮತ್ತು ಬ್ರಾಹ್ಮಣೇತರ ಮರಾಠಿಯ ನಡುವೆ ಇರುವ ಆಕೃತಿ ವ್ಯತ್ಯಾಸಗಳನ್ನು ಗುರುತಿಸಿದ್ದಾರೆ. ಆದರೆ ಮುಂಬಯಿಯಲ್ಲಿರುವ ಅನೇಕ ಭಾಷಿಕರು ಮಹಾರಾಷ್ಟ್ರದ ಇತರೆಡೆಗಳಿಂದ ಬಂದಿದ್ದರೂ ಪ್ರಾದೇಶಿಕ ಭಿನ್ನತೆಗಳನ್ನು ಗುರುತಿಸಲು ಸಾಕಷ್ಟು ಅಂಕಿ ಅಂಶಗಳು ಅಲ್ಲಿ ಲಭ್ಯವಾಗುವುದಿಲ್ಲ. 'ಪ್ರತಿಷ್ಠಿತ ಬ್ರಾಹ್ಮಣ' ಉಪಭಾಷೆ ಮತ್ತು ಇತರ ಉಪಭಾಷೆಗಳ ನಡುವೆ ಎದ್ದುಕಾಣುವಷ್ಟು ವ್ಯತ್ಯಾಸಗಳಿದ್ದರೆ, ಇನ್ನಿತರ ಬ್ರಾಹ್ಮಣೇತರ ಜಾತಿಗಳ ಉಪಭಾಷೆಗಳೊಳಗೆ ಅಂತಹ ವ್ಯತ್ಯಾಸಗಳಿಲ್ಲ ಎಂಬ ಸಾಮಾನ್ಯವಾದ ಅಭಿಪ್ರಾಯಕ್ಕೆ ಅವರು ಬರುತ್ತಾರೆ. ಮರಾಠಿ ಮತ್ತು ದ್ರಾವಿಡ ಪ್ರದೇಶದ ಭಾಷಾ ವ್ಯತ್ಯಾಸಗಳ ಮಾದರಿಯಲ್ಲಿರುವ ಸಾಮ್ಯವು ಗಮನಾರ್ಹವಾಗಿದೆ. ಆದುದರಿಂದಲೇ ಸಮಾಜೋ ಭಾಷಿಕ ಅಧ್ಯಯನದ ದೃಷ್ಟಿಯಿಂದ ಮಹಾರಾಷ್ಟ್ರವನ್ನು ದಕ್ಷಿಣ ಭಾರತದೊಂದಿಗೆ ಸೇರಿಸಬಹುದೇನೋ ಎನಿಸುತ್ತದೆ. ಈ ಸೇರ್ಪಡೆಯ ಸಾಧ್ಯತೆಗಿರುವ ಚಾರಿತ್ರಿಕ ಆಧಾರಗಳನ್ನು ಮುಂದೆ ಚರ್ಚಿಸಲಾಗಿದೆ.

ಬ್ರಾಹ್ಮಣೇತರ ಭಾಷಾಪ್ರಭೇದಗಳನ್ನು ಅಧ್ಯಯನ ಮಾಡಿದಾಗ ಕೆಳಜಾತಿಗಳಲ್ಲಿಯ ಭಿನ್ನತೆಗಳು ಇತರ ಬ್ರಾಹ್ಮಣೇತರ ಭಾಷಾ ಪ್ರಭೇದಗಳಿಗಿಂತಲೂ ಪ್ರತ್ಯೇಕವಾಗಿ ಗೋಚರವಾಗುತ್ತವೆ. ಹಾಗೂ ದಕ್ಷಿಣ ಭಾರತದಾದ್ಯಂತ ಭಾಷಾ ಪ್ರಭೇದಗಳಿಗೆ ಸಂಬಂಧಿಸಿದಂತೆ ತ್ರಿವಿಧ ವಿಭಾಗಗಳ ಸಾಮಾನ್ಯ ಚಿತ್ರವೊಂದು ಗೋಚರಿಸುತ್ತದೆ. ಉಣ್ಣಿಯವರು ಮಲಯಾಳಂ ಧ್ವನಿಮಾಗಳಲ್ಲಿ ತ್ರಿಪಥ ವಿಭಾಗಗಳಿರುವುದನ್ನು ಗುರುತಿಸಿದ್ದಾರೆ. ಇಲ್ಲಿ ಮತ್ತೆ ಉಚ್ಚಾರಣೆಯ ದೃಷ್ಟಿಯಿಂದ ಮೂರು ಸ್ಥೂಲ ಪ್ರಭೇದಗಳಿವೆ. ಅವುಗಳೆಂದರೆ: ನಂಬೂದಿರಿಗಳ ಉಚ್ಚಾರಣೆ, ಮೇಲ್ಜಾತಿಯ ಬ್ರಾಹ್ಮಣೇತರರ ಉಚ್ಚಾರಣೆ ಮತ್ತು ಮಧ್ಯಮ ಹಾಗೂ ಕೆಳಜಾತಿಗಳವರ ಉಚ್ಚಾರಣೆ. ಮೆಕ್ ಕೊರ್ಮಾಕನು ಕನ್ನಡದ ಸ್ಥಿತಿಗತಿಗಳ ಬಗ್ಗೆ ಈ ರೀತಿ ಹೇಳಿದ್ದಾನೆ. ಧಾರವಾಡದಲ್ಲಿನ ಹಿಂದುಳಿದ ವರ್ಗಗಳ ಭಾಷಾಶೈಲಿಗೂ ಇತರ ಎರಡು ಸಾಮಾಜಿಕ ಪಂಗಡ (ಸಮುದಾಯ )ಗಳ ಭಾಷಾಶೈಲಿಗೂ ಇರುವ ಪ್ರಮುಖ ವ್ಯತ್ಯಾಸವು ಕ್ರಿಯಾ ಪ್ರತ್ಯಯಗಳ ಧ್ವನಿಮಾ ರೂಪಗಳಿಗೆ ಸಂಬಂಧಿಸಿದುದಾಗಿದೆ. ಸಂಯುಕ್ತ ಕ್ರಿಯಾಮೂಲಗಳ ಬಳಕೆಯಲ್ಲೂ ವ್ಯತ್ಯಾಸಗಳಿವೆ. ಆದೇ ರೀತಿ ಸಂಬೋಧನ ವಾಚಿಗಳಲ್ಲೂ ಬಂಧುವಾಚಿಗಳಲ್ಲೂ ಕೆಲವು ಭಿನ್ನರೂಪಗಳಿವೆ. ಆದರೆ ಧಾರವಾಡದ ಹರಿಜನ ಭಾಷಾಪದಗಳು ಇತರ ಬ್ರಾಹ್ಮಣೇತರ ಜಾತಿಗಳ ಭಾಷಾಪದಗಳಿಗಿಂತ ಭಿನ್ನವಾಗಿರುವುದು ಈ ಅಧ್ಯಯನದಿಂದ ಶ್ರುತಪಟ್ಟಿದೆ.

ತೆಲುಗಿನ ಕೆಳಜಾತಿಗಳವರ ಭಾಷೆಯು ಧ್ವನಿಮಾ ಮತ್ತು ಆಕೃತಿಮಾಗಳೆರಡರಲ್ಲೂ

ಇತರ ಬ್ರಾಹ್ಮಣೇತರ ಭಾಷೆಗಳಿಗಿಂತ ಅನೇಕ ಸಂದರ್ಭಗಳಲ್ಲಿ ಭಿನ್ನವಾಗಿರುವುದನ್ನು ಸುಬ್ಬರಾವ್ ಅವರು ಗುರುತಿಸುತ್ತಾರೆ. ಮರಾಠಿಗೆ ಸಂಬಂಧಿಸಿದಂತೆ ಆಪ್ಟೆಯವರು ಹೇಳುವ ಪ್ರಕಾರ ಬ್ರಾಹ್ಮಣೇತರ ಭಾಷಿಕರಲ್ಲಿ ಯಾವುದೇ ಜಾತಿಗೂ ನಿರ್ದಿಷ್ಟ ಗುಣಲಕ್ಷಣಗಳನ್ನು ಅನ್ವಯಿಸಲು ಸಾಧ್ಯವಾಗುವುದಿಲ್ಲ. ಈ ಪರಿಸ್ಥಿತಿಯನ್ನು ವಿಲ್ಲಿಯಂ ಮೆಕ್ ಕೊಮಕನು ತನ್ನ 'ಸೋಷಿಯಲ್ ಡಯಾಲೆಕ್ಟ್ಸ್ ಇನ್ ಧಾರ್‌ವಾರ್ ಕನ್ನಡ' ಎಂಬ ಲೇಖನದಲ್ಲಿ ಹೇಳಿರುವ ಅಂಶಗಳೊಂದಿಗೆ ಹೋಲಿಸಿ, ಸಾದೃಶ್ಯ - ವೈದೃಶ್ಯಗಳನ್ನು ಗುರುತಿಸಬಹುದಾಗಿದೆ." ಮೇಲೆ ವಿವರಿಸಿದಂತೆ ಮಹಾರಾಷ್ಟ್ರ ಮತ್ತು ದಕ್ಷಿಣ ಭಾರತದ ಭಾಷಾ ಪರಿಸ್ಥಿತಿಗಳನ್ನು ಗಮನಿಸಿದರೆ ಅವುಗಳೊಳಗಿನ ಗಮನಾರ್ಹವಾದ ವೈದೃಶ್ಯಗಳು ಸ್ಪಷ್ಟವಾಗುತ್ತವೆ. ಅದೇ ರೀತಿ ಉತ್ತರಭಾರತಕ್ಕೆ ಸಂಬಂಧಪಟ್ಟಂತೆ ಗುಂಪರ್ಜ್ ಮತ್ತು ಲೆವೀನ್ ನಡೆಸಿದ ಗ್ರಾಮ ಅಧ್ಯಯನಗಳಿಂದಲೂ ಇಂತಹುದೇ ಅಂಶಗಳು ಪ್ರಕಟವಾಗಿವೆ. ಇದು ಸ್ಪೃಶ್ಯ ಮತ್ತು ಅಸ್ಪೃಶ್ಯ ಜಾತಿಗಳೊಳಗೆ ಮುಖ್ಯವಾಗಿ ಧ್ವನಿಮಾ ವ್ಯತ್ಯಾಸಗಳಿರುವುದನ್ನು ತೋರಿಸಿ ಕೊಡುತ್ತದೆ. ಮಾತ್ರವಲ್ಲ, ಎಲ್ಲಾ ಸ್ಪೃಶ್ಯ ಗುಂಪುಗಳೊಳಗೆ ಹೇಳಿಕೊಳ್ಳುವಂತಹ ಪರಸ್ಪರ ವ್ಯತ್ಯಾಸಗಳಿಲ್ಲವೆಂಬುದನ್ನು ತಿಳಿಸುತ್ತದೆ.( ಆದರೂ ಗುಂಪರ್ಜನ ಅಧ್ಯಯನದಿಂದ ಪ್ರತ್ಯೇಕ ಹಳ್ಳಿಗಳಲ್ಲಿ ವಾಸಿಸುತ್ತಿರುವ ಮೂರು ಅಸ್ಪೃಶ್ಯ ಗುಂಪುಗಳೊಳಗೆ ಪರಸ್ಪರ ಭಾಷಾ ವ್ಯತ್ಯಾಸವಿರುವುದು ವ್ಯಕ್ತವಾಗಿದೆ.)

ಮರಾಠಿಗೆ ಸಂಬಂಧಿಸಿದಂತೆ ಇನ್ನಷ್ಟು ಮಾಹಿತಿಗಳ ಆವಶ್ಯಕತೆ ಇದೆಯೆನಿಸುತ್ತದೆ. ಆಪ್ಟೆಯವರ ಅಧ್ಯಯನವು ಮುಖ್ಯವಾಗಿ ನಗರವಾಸಿಗಳನ್ನು ಗಮನದಲ್ಲಿರಿಸಿಕೊಂಡು ನಡೆದಿರುವುದರಿಂದ ಅಸ್ಪೃಶ್ಯರು ಮೂಲತಃ ತಮ್ಮ ಸಾಂಪ್ರದಾಯಿಕ ಭೌತಿಕ ಪ್ರತ್ಯೇಕತೆಯಲ್ಲಿ ಹೇಗೆ ಬದುಕುತ್ತಿದ್ದಾರೆ.? ಹೇಗೆ ಮಾತನಾಡುತ್ತಿದ್ದಾರೆ? ಎಂಬುದರ ಕಡೆಗೆ ಅಷ್ಟಾಗಿ ಗಮನ ಹರಿಸಿದಂತಿಲ್ಲ, ನನ್ನ ಪ್ರಕಾರ ಕಡೇ ಪಕ್ಷ ಅಸ್ಪೃಶ್ಯರು ಭೌತಿಕವಾಗಿ ಪ್ರತ್ಯೇಕವಾಗಿರುವ ಕಡೆಗಳಲ್ಲಾದರೂ "ಕೆಳಸ್ತರದ" ಪ್ರತ್ಯೇಕ ಭಾಷಾ ಪ್ರಭೇದವೊಂದು ಅಸ್ತಿತ್ವದಲ್ಲಿರುವುದು ಅಖಿಲ ಭಾರತ ಲಕ್ಷಣವೆನಿಸುತ್ತದೆ. ಆದರೆ ನಿಖರವಾದ "ಮೇಲ್ವರ್ಗ"ದ ಪ್ರಭೇದವೊಂದಿರುವುದು (ಮುಖ್ಯವಾಗಿ ಬ್ರಾಹ್ಮಣರಲ್ಲಿ, ಕೆಲವೊಮ್ಮೆ ಇತರ ಮೇಲ್ವರ್ಗದವರಲ್ಲೂ) ಮಹಾರಾಷ್ಟ್ರವೂ ಸೇರಿದಂತೆ ದಕ್ಷಿಣ ಭಾರತದ ಭಾಷಾ ವೈಲಕ್ಷಣ್ಯವಾಗಿದೆ.

ಕೆಳಜಾತಿಯ ಭಾಷಾ ಪ್ರಭೇದಗಳನ್ನುಪಯೋಗಿಸುವ ಗುಂಪುಗಳ ಅನನ್ಯತೆಗೆ ಸಂಬಂಧಿಸಿದಂತೆ ನಮ್ಮ ಬಳಿ ಸಾಕಷ್ಟು ಮಾಹಿತಿಗಳಿಲ್ಲ.ಅಸ್ಪೃಶ್ಯರು ತಮ್ಮ ಭಾಷೆಯಿಂದ ಗುರುತಿಸಲ್ಪಡುತ್ತಾರೆಂದು ಹೇಳುತ್ತಾ ಬರಲಾಗಿದೆ. ಆದರೆ ಉಡುಗೆ ತೊಡುಗೆ ಅಥವಾ ಜೀವನ ವಿಧಾಗಳಂತಹ ಇತರ ಸಂಗತಿಗಳು ಈ ಅನನ್ಯತೆಯನ್ನು ಗುರುತಿಸುವಲ್ಲಿ ಎಷ್ಟರ ಮಟ್ಟಿಗೆ ಕಾರಣವಾಗುತ್ತವೆಂಬ ಬಗ್ಗೆ ನಾವು ಹೆಚ್ಚು ತಿಳಿದಿಲ್ಲ. ಮೇಲೆ ನೋಡಿದ ಎಂ.ಎಸ್.ಪಿಳ್ಳೈ ಅವರ ಅಧ್ಯಯನದಲ್ಲಿ ಪ್ರಸ್ತಾವಿಸಲಾದ "ಕೆಳ" ಗುಂಪು ತೀಕ್ಷ್ಣ ಭಾಷಿಕ ಗಡಿಗಳಿಲ್ಲದ ಕೆಳಜಾತಿಯ ಹರಿಜನ ಮತ್ತು ಮೇಲ್ಜಾತಿಯ ಪಿಳ್ಳೈ ಸೇರಿದಂತೆ ಹತ್ತು ಜಾತಿಗಳನ್ನು ಹೊಂದಿದೆ. ವಿವಿಧ

ಗುಂಪುಗಳ ಭೇದದಲ್ಲಿ ಸ್ಪಷ್ಟವಾದ ವ್ಯತ್ಯಾಸಗಳಿವೆ. ಅದೇ ರೀತಿ ಹೆಚ್ಚಿನ ಅಧ್ಯಯನಗಳಿಲ್ಲದೇನೇ ಈ ಕುರಿತು ಕೆಲವು ಸಾಮಾನ್ಯೀಕರಣಗಳನ್ನು ಮಾಡಿಕೊಳ್ಳಲು ಸಾಧ್ಯವಿದೆ.

ಸದ್ಯ ಗಮನಿಸಿದಂತೆ ಮುಸಲ್ಮಾನರದೂ ಭಾಷಾ ಭೇದವುಳ್ಳ ಒಂದು ಗುಂಪೆನಿಸುತ್ತದೆ. ಪಿಳ್ಳೈಯವರ ಅಧ್ಯಯನದ ಪ್ರಕಾರ ಮುಸಲ್ಮಾನರು ಗ್ರಾಮವೊಂದರಲ್ಲಿ ಅತಿಹೆಚ್ಚು ಭಾಷಾ ವಿಶಿಷ್ಟತೆಯಿರುವ ಗುಂಪಾಗಿದ್ದಾರೆ. ಮೇಲೆ ಪ್ರಸ್ತಾಪಿಸಿದ ಇತರ ಅಧ್ಯಯನಗಳು ಮುಸ್ಲಿಮರನ್ನು ಪರಿಗಣಿಸಿಲ್ಲ. ಆದರೆ ಮಾಹಿತಿದಾರರ ವರದಿಯ ಪ್ರಕಾರ ದಕ್ಷಿಣದ ಹಿಂದೂ ಮತ್ತು ಮುಸ್ಲಿಮರೊಳಗೆ ಸಾಕಷ್ಟು ಭಾಷಿಕ ವ್ಯತ್ಯಾಸಗಳಿವೆ. ಉತ್ತರ ಮಲಬಾರಿನ ಪಿ.ವಿ.ಕುಞ್ಞಿಕಣ್ಣನ್ ಎಂಬ ಮಾಹಿತಿದಾರರೊಬ್ಬರು ನೀಡಿದ ಮಾಹಿತಿಯ ಪ್ರಕಾರ ಅವರ ಪ್ರದೇಶದ ಮುಸಲ್ಮಾನರು ತಮ್ಮ ಆಡುನುಡಿಯಲ್ಲಿ ಮಲಯಾಳಂನ "ರ್" ಜಾಗದಲ್ಲಿ "ಲ್" ಧ್ವನಿಮಾವನ್ನು ಬಳಸುತ್ತಾರೆ. ಅದೇ ರೀತಿ ಅವರಲ್ಲಿ ನಿರ್ದಿಷ್ಟವಾದ ಕೆಲವು ಆಕೃತಿಮಾ ಹಾಗೂ ಶಬ್ದಕೋಶೀಯ ವ್ಯತ್ಯಾಸಗಳೂ ಕಾಣಸಿಗುತ್ತವೆ. ಇದಕ್ಕೆ ಉದಾಹರಣೆಯಾಗಿ ಆ ಮಾಹಿತಿದಾರರು ನೀಡಿದ ವಾಕ್ಯದ ಮಾದರಿಯೊಂದು ಹೀಗಿದೆ: ("ರಾಘವಾ ! ನೀನೇನು ಮಾಡುತ್ತಿರುವಿ?") ಇದು ನಾಯರ್ ಮಲಯಾಳಂನಲ್ಲಿ "ರಾಗವಾ ಎಂದಾ ಚೆಯ್ಯುನ್ನದ್? ಎಂದಿದ್ದರೆ ಮುಸ್ಲಿಂ ಮಲಯಾಳಂನಲ್ಲಿ "ಲಾಗವ ದೆತ್ತಾ ಕಾಟ್ಟನ್ನು (ದು)?" ಎಂದಿರುತ್ತದೆ. (ಇದು ಪರಿಣತ ಭಾಷಾಶಾಸ್ತ್ರಜ್ಞನೊಬ್ಬನ ಅನುಗಮನವಲ್ಲದಿದ್ದರೂ ಪ್ರಸ್ತುತ ವಕ್ತೃ ಓರ್ವ ಅದ್ಭುತ ಅನುಕರಣ ಕಲಾವಿದ. ಆತನ ಅನುಗಮನವು ತಕ್ಷಣದ ಸಹಜ ಪ್ರತಿಕ್ರಿಯೆಯಾಗಿತ್ತು). ಉತ್ತರ ಭಾರತಕ್ಕೆ ಸಂಬಂಧಪಟ್ಟಂತೆ ಗುಂಪರ್ಜನು ಮುಸ್ಲಿಂ ಭಾಷೆಯ ಧ್ವನಿಮಾ ಲಕ್ಷಣಗಳನ್ನು ವರದಿ ಮಾಡುವುದಿಲ್ಲ. ಬದಲಾಗಿ ಆತನು ಪ್ರಮಾಣ ಭಾಷೆಯನ್ನಾಡುವವರೆಂದು ಪರಿಗಣಿತರಾದ "ಹಿಂದೂ ಮತ್ತು ಸ್ಪೃಶ್ಯ ಮುಸ್ಲಿಂ ಜಾತಿಗಳ" ನಡುವೆ ಕೆಲವು ಶಬ್ದಕೋಶೀಯ ವ್ಯತ್ಯಾಸಗಳಿವೆಯೆಂದೂ, ಅದೇ ರೀತಿ ಎಲ್ಲಾ ಕಡೆಗಳಲ್ಲೂ ಹಿಂದೂ ಮುಸ್ಲಿಮರೊಳಗೆ ಅಧಿಕ ಪ್ರಮಾಣದ ಭಾಷಿಕ ವ್ಯತ್ಯಾಸಗಳಿವೆಯೆಂದೂ ಹೇಳುತ್ತಾನೆ.

ಜಾತಿ ಅಥವಾ ಸಾಮಾಜಿಕ ವರ್ಗಗಳನ್ನಾಧರಿಸಿರುವ ಭಾಷಾವ್ಯತ್ಯಾಸವು ಕೇವಲ ಒಂದು ವಿಧವಷ್ಟೆ. ಇದು ಸಮಜೋಭಾಷಿಕ ವ್ಯತ್ಯಾಸದ ಪ್ರಮುಖ ಪ್ರಭೇದವೆಂದು ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಆದರೆ ಇನ್ನೂ ವ್ಯವಸ್ಥಿತವಾದ ಅಧ್ಯಯನಗಳು ನಡೆದು, ಇತರ ಭೇದಕಾರಕಗಳನ್ನು ಕಂಡುಕೊಳ್ಳುವ ತನಕ ಇದೊಂದು ಕಲ್ಪನೆಯಾಗಿಯಷ್ಟೇ ಇರುತ್ತದೆ. ಈ ನಿಟ್ಟಿನಲ್ಲಿ ಶಿಕ್ಷಣವು ಸಹಜವಾಗಿ ಒಂದು ಪ್ರಮುಖ ವ್ಯತ್ಯಾಸಕಾರಕವಾಗಿದೆ. ಸಾಮಾನ್ಯವಾಗಿ ಹೇಳುವುದಾದರೆ ವಿದ್ಯಾವಂತ ವ್ಯಕ್ತಿಯ ಭಾಷೆಯು ಅದೇ ಹಿನ್ನೆಲೆಯುಳ್ಳ ಅವಿದ್ಯಾವಂತ ವ್ಯಕ್ತಿಯ ಆಡುನುಡಿಗಿಂತ ಸಂಬಂಧಪಟ್ಟ ಭಾಷೆಯ ಪ್ರತಿಷ್ಠಿತ ಪ್ರಭೇದಕ್ಕೆ ಹೆಚ್ಚು ಹತ್ತಿರವಾಗಿರುತ್ತದೆ. ನಗರೀಕರಣವು ಇಂತಹುದೇ ಇನ್ನೊಂದು ಪರಿಣಾಮಕಾರಕವೆನ್ನಬಹುದು. ಇಲ್ಲಿ ಭಾಷಾ ವ್ಯತ್ಯಾಸದ ಮಾರ್ಗವು ಅತಿಪ್ರತಿಷ್ಠಿತ ಪ್ರಭೇದದ ಕಡೆಗೆ

ಇಲ್ಲವಾದರೂ ವ್ಯತ್ಯಾಸವು ಸಂಭವಿಸುತ್ತದೆ. ಈ ನಗರೀಕರಣವೆಂಬುದು ನಗರ ಪರಿಸರದಲ್ಲಿರುವ ವಿವಿಧ ರೀತಿಯ ಹಿನ್ನೆಲೆಯ ವ್ಯಕ್ತಿಗಳಿಗೆ ಮುಕ್ತವಾಗಿ ತೆರೆದುಕೊಳ್ಳಲಿರುವ ಒಂದು ಅವಕಾಶವಾಗಿದೆ. ಇಲ್ಲಿ ಅಂತರ್ಜಾತಿ ಸಂಬಂಧಗಳ ಮೇಲಿನ ಹಲವಾರು ನಿರ್ಬಂಧಗಳು ತಮ್ಮ ಸಾಂಪ್ರದಾಯಿಕ ಶಕ್ತಿಗಳನ್ನು ಕಳೆದುಕೊಳ್ಳುತ್ತಿವೆ.

ಮೆಕ್ ಕೊರ್ಮಾಕನು ಕನ್ನಡ ಭಾಷೆಯ ಧ್ವನಿಮುದ್ರಿತ ಮಾದರಿಗಳ ಮೂಲಕ ಜಾತಿಗಳನ್ನು ಕುರಿತಾದ ವಕ್ತೃ ತೀರ್ಪುಗಳನ್ನು ಹೊರಗೆಡಹುತ್ತಾ ಈ ರೀತಿ ಉಲ್ಲೇಖಿಸುತ್ತಾನೆ: “ನಾಲ್ಕು ಹಿಂದುಳಿದ ವರ್ಗಗಳ ಭಾಷಿಕರು ಯಾವತ್ತೂ ಸರಿಯಾಗಿ ಗುರುತಿಸಿಕೊಂಡಿಲ್ಲ. ಯಾಕೆಂದರೆ ಅವರು ಬ್ರಾಹ್ಮಣ, ಲಿಂಗಾಯತ ಮತ್ತು ಗ್ರಂಥಸ್ಥ ರೂಪಗಳು ಮಿಶ್ರಿತವಾದ ಭಾಷೆಯನ್ನಾಡುತ್ತಾರೆ. ಇದು ಅವರ ಸ್ವಂತ ಭಾಷಾ ವೈಶಿಷ್ಟ್ಯವನ್ನು ಮರೆಮಾಚುತ್ತದೆ. ನಗರೀಕರಣಗೊಂಡ ಕೆಲವು ಹಿಂದುಳಿದ ವರ್ಗಗಳ ಭಾಷಿಕರು ಇತರ ಸಾಮಾಜಿಕ ವರ್ಗಗಳ ಸದಸ್ಯರೊಡನೆ ವ್ಯವಹರಿಸುವಾಗ ನಿಯತವಾಗಿ ಇಂತಹ ಮಿಶ್ರಭಾಷೆಯನ್ನಾಡುತ್ತಾರೆ”. ಈ ರೀತಿ ಗ್ರಂಥಸ್ಥ ಶೈಲಿಯ ಭಾಷೆಯನ್ನು ಬಳಸುವುದರಿಂದ ಕೇಳುಗರು ಆ ಭಾಷಿಕರನ್ನು ಬ್ರಾಹ್ಮಣರೆಂದು ಪರಿಗಣಿಸಲು ಪ್ರೇರೇಪಿಸಿದಂತಾಗುತ್ತದೆಂದು ಮೆಕ್ ಕೊರ್ಮಾಕನು ಹೇಳುತ್ತಾನೆ.

ಮುಂಬಯಿಯ ಮರಾಠಿ ಭಾಷಿಕರ ಕುರಿತು ಇದೇ ರೀತಿಯ ಅಧ್ಯಯನವನ್ನು ನಡೆಸಿದ ಆಪ್ಟೆಯವರು ಇಂತಹುದೇ ನಿರ್ಣಯಕ್ಕೆ ಬರುತ್ತಾರೆ. ಅವರು ಹೇಳುವ ಪ್ರಕಾರ "ನಿರ್ದಿಷ್ಟ ಜನಸಮುದಾಯದವರ ಭಾಷೆಗಳ ಧ್ವನಿಸುರುಳಿಯನ್ನು ಕೇಳಿಸಿದಾಗ ಕೆಲವೇ ಮಂದಿ ವಕ್ತೃಗಳು ಮಾತ್ರ ಸಂಬಂಧಪಟ್ಟ ಭಾಷೆಗಳನ್ನಾಡುವವರ ನಿಖರ ಜಾತಿಗಳನ್ನು ಗುರುತಿಸಲು ಶಕ್ತರಾದರು. ಇಲ್ಲಿ ಉತ್ತಮ ಅಥವಾ ಶುದ್ಧ ಭಾಷೆಯು ಸಹಜವಾಗಿಯೇ ಬ್ರಾಹ್ಮಣರು ಅಥವಾ ಮರಾಠರ ಜತೆ (ಹೆಚ್ಚಿನ ಸಂದರ್ಭಗಳಲ್ಲಿ ಬ್ರಾಹ್ಮಣರ ಜತೆ) ಸಂಬಂಧಹೊಂದಿದೆಯೆಂಬುದನ್ನು ಮಾತ್ರ ವಕ್ತೃಗಳು ಅರಿತುಕೊಂಡಿದ್ದಾರೆ”. ಆಪ್ಟೆಯವರ ನಿರ್ಣಯದ ಪ್ರಕಾರ “ಶಿಕ್ಷಣ ಮತ್ತು ನಗರೀಕರಣಗಳು ಆಕೃತಿಮಾ ಮತ್ತು ವಾಕ್ಯರಚನಾ ವ್ಯತ್ಯಾಸಗಳನ್ನು ಕಡಿಮೆಗೊಳಿಸುವ ಗಮನಾರ್ಹ ಅಂಶಗಳು. ಸ್ವಲ್ಪಮಟ್ಟಿಗೆ ಇದು ಧ್ವನಿಶಾಸ್ತ್ರದ ವಿಷಯದಲ್ಲೂ ಸತ್ಯವಾಗುತ್ತದೆ".ಮ್ಯಾಕ್ಸೈನ್ ಬಾರ್ನ್‌ಸ್ಟನ್ ಅವರು ಷಲ್ತಾನ್ ನಗರದಲ್ಲಿ ನಡೆಸಿದ ಸಮಾಜೋಭಾಷಿಕ ವ್ಯತ್ಯಾಸದ ಅಧ್ಯಯನವು ಕೆಲವು ನಿರ್ದಿಷ್ಟ ಭಾಷಾ ವ್ಯತ್ಯಾಸಗಳು ಜಾತಿಗಿಂತಲು ಹೆಚ್ಚಾಗಿ ಶಿಕ್ಷಣದೊಂದಿಗೆ ಸಂಬಂಧಹೊಂದಿದೆಯೆಂಬುದನ್ನು ತೋರಿಸಿಕೊಟ್ಟಿದೆ.

**ಕ್ರಿಯಾತ್ಮಕ ವ್ಯತ್ಯಾಸ :**

ಭಾಷಾ ಮಾದರಿಗಳ ರೂಪೀಕರಣದಲ್ಲಿ ಜಾತಿ, ವರ್ಗ, ಮತ್ತು ಶಿಕ್ಷಣಗಳಂತಹ ವಿಷಯಗಳಿಗೆ ಇರುವ ಮಹತ್ವವನ್ನು ಕಂಡುಕೊಳ್ಳಲು ಪ್ರಯತ್ನಿಸುವಾಗ, ವ್ಯಕ್ತಿಯೊಬ್ಬನ ಭಾಷೆಯು ಸಾಮಾಜಿಕ ಸನ್ನಿವೇಶಕ್ಕೆ ಹೊಂದಿಕೊಂಡು ಬದಲಾಗುತ್ತಾ ಹೋಗುತ್ತದೆಂಬುದನ್ನು

ನಾವು ನೆನಪಿನಲ್ಲಿಟ್ಟುಕೊಂಡಿರಬೇಕು. "ಇತರ ಸಾಮಾಜಿಕ ವರ್ಗಗಳ ಸದಸ್ಯರೆದುರು ಅವರು ಮಾತನಾಡುವಾಗ" ಎಂಬ ಮೆಕ್ ಕೊರ್ಮಾಕನ ವಾಕ್ಯ ಭಾಗ ಇಲ್ಲಿ ಒಂದು ಪ್ರಮುಖ ಸೂಚನೆಯಾಗಿದೆ. ಯಾಕೆಂದರೆ ಕೆಲವು ನಿರ್ದಿಷ್ಟ ಸನ್ನಿವೇಶಗಳಲ್ಲಿ ಕೆಳಜಾತಿಯ ಜನರು ಮೇಲ್ಜಾತಿಯವರ ಭಾಷಾ ಪ್ರಭೇದವನ್ನು ಬಳಸುವುದರಿಂದ ಕೆಳಜಾತಿಯವರ ಭಾಷೆಯು ಬಳಕೆಯಿಂದ ತಪ್ಪಿಹೋಗುತ್ತದೆಂಬುದರಲ್ಲಿ ಖಾತರಿಯಿಲ್ಲ. ವಿವಿಧ ಭಾಷಾ ಸಮುದಾಯ ಗಳಲ್ಲಿ ಕಂಡುಬರುವ ಪಲ್ಲಟ (switching) ಪ್ರಕ್ರಿಯೆಯ ಬಗ್ಗೆ ಹಲವು ಸಂಶೋಧಕರು ದಾಖಲಾತಿ ಮಾಡಿದ್ದಾರೆ. ಇದುವರೆಗಿನ ವರದಿಗಳ ಪ್ರಕಾರ ಇತರ ಯಾವುದೇ ಸಮುದಾಯದಲ್ಲಿರುವಂತೆಯೇ ಭಾರತದಲ್ಲೂ ಈ ಪ್ರಕ್ರಿಯೆಯು ಚಾಲ್ತಿಯಲ್ಲಿದೆ. ಇದು ನಮ್ಮನ್ನು ಭಾಷೆಯು ಘಟಿಸುವ (ಆಡಲ್ಪಡುವ) ಪರಿಸ್ಥಿತಿ ಎಂಬ ಭಾಷಾ ವ್ಯತ್ಯಾಸದ ಬಹುಮುಖ್ಯ ಅಂಶದತ್ತ ಕೊಂಡೊಯ್ಯುತ್ತದೆ. ಆದಕಾರಣ ಎದುರಿಗಿರುವ ವ್ಯಕ್ತಿಗಳನ್ನ ವಲಂಬಿಸಿ ಜನರ ಮಾತಿನ ಶೈಲಿ ಗಣನೀಯವಾಗಿ ಬದಲಾಗುತ್ತಿರುತ್ತದೆಂಬುದನ್ನು ನಾವು ಬಲ್ಲೆವು. ಕೆಳಜಾತಿಯ ಜನರು (ನಿಮ್ನ ಘನತೆಯುಳ್ಳ ಗುಂಪಿನ ಜನರು) ಸಾಮಾನ್ಯವಾಗಿ ಪ್ರತಿಷ್ಠಿತ ಭಾಷಾರೂಪದ ನಿರ್ದೇಶನದಂತೆ (ಮಾದರಿಯಲ್ಲಿ) ತಮ್ಮ ಭಾಷೆಯನ್ನು ಪರಿಷ್ಕರಿಸಿ ಕೊಳ್ಳುತ್ತಾರೆ. ವ್ಯಕ್ತಿಯೊಬ್ಬನ ಭಾಷೆಯ ಎಲ್ಲಾ ಮಟ್ಟಗಳನ್ನೂ ವಿವಿಧ ಸನ್ನಿವೇಶಗಳಲ್ಲಿ ನಿರ್ಧರಿಸುವವರಿಗೆ ಈ ತೆರನಾದ ಪರಿಶೋಧನೆಗಳನ್ನು ಪರಿಪೂರ್ಣವೆಂದು ಪರಿಗಣಿಸ ಲಾಗದು.

ಸಾಂಪ್ರದಾಯಿಕವಾಗಿ ಅನೇಕ ಕಡೆಗಳಲ್ಲಿ ಕೆಳಜಾತಿಗಳವರು ಮೇಲ್ಜಾತಿಯವರ ಉಡುಗೆ ತೊಡುಗೆ ಹಾಗೂ ಜೀವನ ಕ್ರಮಗಳನ್ನು ಅನುಕರಿಸುವುದಕ್ಕೆ ಪ್ರೋತ್ಸಾಹ ನೀಡಲಾಗುವುದಿಲ್ಲ. ಇದರಿಂದ ವ್ಯಕ್ತವಾಗುವಂತೆ, ವ್ಯಕ್ತಿಯೊಬ್ಬನ ಭಾಷೆ ಆತನು ಸಮಾನ ಸಾಮಾಜಿಕ ಸ್ತರದವರೊಂದಿಗೆ ಮಾತನಾಡುತ್ತಾನೋ? ಅಥವಾ ತನಗಿಂತ ಮೇಲ್‌ಸ್ತರದವರೊಂದಿಗೆ ಮಾತನಾಡುತ್ತಾನೋ? ಎಂಬುದನ್ನುವಲಂಬಿಸಿ ಗಣನೀಯವಾಗಿ ಬದಲಾಗುತ್ತಿರುತ್ತದೆ. ಕೇರಳದಲ್ಲಿ ತೀರಾ ಇತ್ತೀಚಿನವರೆಗೂ ಇಂತಹ ಪ್ರಕ್ರಿಯೆಯು ಅತಿರೇಕವೆಂಬಂತೆ ಪ್ರಚಲಿತ ವಿದ್ದುದನ್ನು ಉಣ್ಣಿ ಅವರು ವರದಿ ಮಾಡುತ್ತಾರೆ. ಇದು ಅಲ್ಲಿ "ಆಚಾರಂ ಪಳಯಲ್" ಎಂಬ ಸಂಪ್ರದಾಯವಾಗಿ ರೂಢಿಯಲ್ಲಿದ್ದುದನ್ನು ಅವರು ಗುರುತಿಸುತ್ತಾರೆ. ಇದರ ಪ್ರಕಾರ ಮೇಲ್ಜಾತಿಯವರು ಬಳಸುವ ಕೆಲವು ಪದಗಳನ್ನು ಕೆಳಜಾತಿಗಳವರು ಮಾತನಾಡಬಾರದೆಂದು ಅವರ ಮೇಲೆ ನಿಷೇಧ ಹೇರಲಾಗುತ್ತದೆ. ಇದರ ಪರಿಣಾಮವೆಂಬಂತೆ ಭಾಷಾ ಬಳಕೆಯ ಕ್ಷೇತ್ರದಲ್ಲಿ ಮೇಲ್ವರ್ಗದ ಸಾಮಾಜಿಕ ಕಟ್ಟುಪಾಡನ್ನು ಮೀರಿ ಮುಕ್ತ ಸಾಮಾಜಿಕ ನೀತಿಯನ್ನು ಪಾಲಿಸುವುದು ಕಷ್ಟವೆನಿಸುತ್ತದೆ. ಹಾಗೂ ಪ್ರತಿಯೊಂದು ಜಾತಿಗಳವರೂ ಅವರವರ ಕೆಳಮಟ್ಟದ ಬಗ್ಗೆ ಜಾಗೃತರಾಗಿರುತ್ತಾರೆ.ಉಣ್ಣಿಯವರು ಉದಾಹರಿಸುವಂತೆ ಕೆಳಜಾತಿ ಗಳವರಿಗೆ ನಿಷೇಧವಾಗಿರುವ ಪದಗಳಲ್ಲಿ ಮುಖ್ಯವಾಗಿ ವ್ಯಕ್ತಿಯ ವಸತಿ, ಬಂಧುತ್ವ, ಮನೆಯ ಕೆಲವು ನಿರ್ದಿಷ್ಟ ದೈನಂದಿನ ಚಟುವಟಿಕೆಗಳಾದ ಊಟ, ಅಡುಗೆ, ಸ್ನಾನ ಇತ್ಯಾದಿಗಳು

ಸೇರುತ್ತವೆ. ಕೆಳಜಾತಿಯ ವ್ಯಕ್ತಿಯು ಮೇಲ್ಜಾತಿಯ ವ್ಯಕ್ತಿಯೊಂದಿಗೆ ಮಾತನಾಡುವಾಗ ತನ್ನನ್ನು ತಾನು "ಅಡಿಯನ್" (ಸೇವಕ) ಎಂದು ಕರೆದುಕೊಳ್ಳುತ್ತಾನೆ. ಅದೇ ರೀತಿ ಮೇಲ್ಜಾತಿಯವರನ್ನು "ತಂಬುರಾನ್" (ರಕ್ಷಕ ) "ಯಜಮಾನ್ " (ಯಜಮಾನ ) ಮೊದಲಾದ ನಿಗದಿತ ಪದಗಳಿಂದ ಸಂಬೋಧಿಸುತ್ತಾನೆ. ಕೆಳಜಾತಿಗಳವರ ಮನೆ ಕುಪ್ಪಾಡು (ತಿರಸ್ಕೃತ ಸ್ಥಳ). ಮೇಲ್ಜಾತಿಯವರಲ್ಲಿ ನಂಬೂದಿರಿಗಳ ಮನೆ "ಇಲ್ಲವ್" ನಂಬೂದಿರಿಪಾಡರದು "ಮನೆ ". ವಲಸೆ ಬಂದ ಬ್ರಾಹ್ಮಣರದು "ಮಡಮ್" ಅದೇ ರೀತಿ ನಾಯರ ಮನೆ "ವೀಡ್" ಕೆಳಜಾತಿಗಳ ಜನರಲ್ಲಿ ನಿಷೇಧಿತವಾಗಿರುವ ಪರಿಭಾಷೆಗಳು ಇನ್ನು ಹಲವಿವೆ. ಉದಾಹರಣೆಗೆ ಮಜ್ಜಿಗೆಗೆ ಸಾಮಾನ್ಯವಾಗಿ ಮಲಯಾಳಂನಲ್ಲಿ "ಮೊರ್" ಎಂದರೆ ಕೆಳಜಾತಿಗಳವರು ಅದರ ಬದಲಿಗೆ "ವೆಳುತ್ತದ್" (ಬೆಳ್ಳಗಿರುವುದು ) ಎನ್ನುತ್ತಾರೆ. "ನೆಲ್ಲ್ " (ಭತ್ತ ) ಬದಲಿಗೆ "ಕರಿಕ್ಕಾದಿ " (ಕರಿ-ಮಸಿಯೊಂದಿಗೆ ಹೋಲಿಕೆ ) , "ಅರಿ" (ಅಕ್ಕಿ) ಬದಲಿಗೆ " ಕಲ್ಲರಿ " (ಕಲ್ಲಕ್ಕಿ ), "ತೇಂಜ" (ತೆಂಗಿನಕಾಯಿ ) ಬದಲಿಗೆ ತೆಂಜೆನ್ ಮೇಲ್ಕಾಯ್ (ತೆಂಗಿನ ಮರದ ಕಾಯಿ )- ಇತ್ಯಾದಿ ಬದಲಿರೂಪಗಳನ್ನು ಬಳಸುತ್ತಾರೆ. ಭಾರತದ ಇತರೆಡೆಗಳಲ್ಲೂ ಇಂತಹ ಶ್ರೇಣೀಕೃತ ಪದಕೋಶವಿರುತ್ತದೆ. ಆದರೆ ಅದರ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆದಿಲ್ಲ.

ಭಾಷಾ ಪರಿಸ್ಥಿತಿಯ ಘಟಕಾಂಶಗಳಲ್ಲಿ ಸಾಮಾಜಿಕ ಸಂರಚನೆ ಮಾತ್ರ ಅಡಕವಾಗಿದೆಯೆಂದು ಹೇಳಲಾಗದು. ನಿರ್ದಿಷ್ಟ ಸನ್ನಿವೇಶದ ಅಂತಸ್ತು , ಮತ್ತು ಸಂಭಾಷಣೆಯ ವಸ್ತು ವಿಷಯಗಳೂ ಇಲ್ಲಿಯ ಘಟಕಾಂಶಗಳಾಗಿರುತ್ತವೆ. ಲ್ಯಾಬೊವ್ ಎಂಬ ಭಾಷಾಶಾಸ್ತ್ರಜ್ಞನು ಶಿಷ್ಟಾಚಾರದ ಅಂತಸ್ತುಗಳಿಗನುಸಾರವಾಗಿ ನಡೆಯುವ ಭಾಷಾ ವ್ಯತ್ಯಾಸಗಳ ಕುರಿತು ವಿಶೇಷವಾಗಿ ಚರ್ಚೆ ನಡೆಸಿದ್ದಾನೆ. ಸಂದರ್ಶನ ಸ್ಥಿತಿಯಲ್ಲಾಗುವ ವಿವಿಧ ಶಿಷ್ಟಾಚಾರ ಮಟ್ಟಗಳ ಭಾಷಾರೂಪಗಳನ್ನು ಹೊರಗಡೆಹುವ ತಂತ್ರ ವೈವಿಧ್ಯಗಳನ್ನು ಅವನು ಪ್ರಸ್ತಾಪಿಸುತ್ತಾನೆ.

ಗುಂಪರ್ಜ್ ಮತ್ತು ನಯೀಮರು ಹಿಂದಿ, ಉರ್ದುಗಳಲ್ಲಿ ಔಪಚಾರಿಕ ಮತ್ತು ಅನೌಪಚಾರಿಕ ಭಾಷಾರೂಪಗಳೊಳಗಿನ ವ್ಯತ್ಯಾಸಗಳ ಕುರಿತು ಚರ್ಚಿಸಿದ್ದಾರೆ. ಸಾಮಾನ್ಯವಾಗಿ ದಕ್ಷಿಣ ಏಷಿಯಾದ ಭಾಷೆಗಳು ಔಪಚಾರಿಕ ಹಾಗೂ ಅನೌಪಚಾರಿಕ ಆಯಾಮಗಳಿಗೆ ಹೊಂದಿಕೊಂಡು ಗಣನೀಯವಾಗಿ ಬದಲಾಗುತ್ತಿರುತ್ತವೆ. ಅನೌಪಚಾರಿಕ ಭಾಷಾ ಪರಿಸ್ಥಿತಿಯು ಅಂತಸ್ತು ಅಥವಾ ಭಾಷಿಕ ಔಚಿತ್ಯದೊಂದಿಗೆ ಕನಿಷ್ಟ ಸಂಬಂಧವನ್ನು ಹೊಂದಿದೆ. ಪರಸ್ಪರ ಸಂಬಂಧಕ್ಕೆ (ಶಾಬ್ದಿಕ ಮತ್ತು ಇತರ) ಅಲ್ಲಿ ಹೆಚ್ಚಿನ ಒತ್ತು ಇರುತ್ತದೆ. ಇನ್ನೊಂದೆಡೆ ಔಪಚಾರಿಕ ಭಾಷಾ ಪರಿಸ್ಥಿತಿಯು ಉಚ್ಚಾರಣೆಯಾಗುವ ಶಬ್ದಗಳ ಔಚಿತ್ಯ - ಶುದ್ಧತೆಗಳತ್ತ ಹೆಚ್ಚಿನ ಒತ್ತು ನೀಡುತ್ತದೆ. ದಕ್ಷಿಣ ಏಷಿಯಾ ಭಾಷೆಗಳ ಉನ್ನತ ಮತ್ತು ನಿಮ್ನ ಪ್ರಭೇದಗಳೊಳಗಿನ (ಭಾಷಾ) ವ್ಯತ್ಯಾಸಗಳಿಗೆ ಸಂಬಂಧಿಸಿದ ವ್ಯಾಕರಣಾತ್ಮಕ ವಿವರಣೆಗಳ ರೂಪದ ಕೆಲವು ಮಾಹಿತಿಗಳು ಇಂಡಿಯನ್ ಲಿಂಗ್ವಿಸ್ಟಿಕ್ಸ್ ಮತ್ತು ಭಾಷಾಶಾಸ್ತ್ರಕ್ಕೆ

ಸಂಬಂಧಪಟ್ಟ ಇತರ ನಿಯತಕಾಲಿಕೆಗಳಲ್ಲಿ ಪ್ರಕಟವಾಗಿವೆ. ನಿಘಂಟುಶಾಸ್ತ್ರಕ್ಕೆ ಸಂಬಂಧಪಟ್ಟ ಕೆಲಸಗಳು ಹೆಚ್ಚಾಗಿ ಗ್ರಾಂಥಿಕ ಅಥವಾ ಪ್ರಾದೇಶಿಕ ಭಾಷೆಗಳ ಔಪಚಾರಿಕ ಪ್ರಬೇಧಗಳನ್ನು ಆಧಾರವಾಗಿರಿಸಿಕೊಂಡು ನಡೆದಿವೆ. ಕ್ರಿಯಾತ್ಮಕ ಪ್ರಭೇದಗಳ ಕುರಿತು ಇಲ್ಲಿ ವಿಶೇಷ ಗಮನ ಹರಿಸಿಲ್ಲ. ಉದಾಹರಣೆಗೆ ಇತ್ತೀಚಿಗೆ ಪ್ರಕಟವಾದ ಹಿಂದಿ ಇಂಗ್ಲಿಷ್ ಶಬ್ದಕೋಶ (ನಿಘಂಟು) ಒಂದರಲ್ಲಿ ಲೇಕಿನ್,ಪರ್, ಮಗರ್, ಕಿಂತು ಮತ್ತು ಪರಂತು ಎಂಬ ಪದಗಳಿವೆ. ಈ ಎಲ್ಲಾ ಪದಗಳು ಆದರೆ ಎಂಬ ಅರ್ಥವನ್ನು ಕೊಡುತ್ತವೆ. ಆದರೆ, ಶಬ್ದಕೋಶದಲ್ಲಿ ಇವುಗಳ ಬಳಕೆಯ ಸಾಂದರ್ಭಿಕತೆಯ ಬಗೆಗೆ ಯಾವೊಂದು ಸೂಚನೆಯನ್ನೂ ಕೊಟ್ಟಿಲ್ಲ. (ಮೊದಲ ಎರಡು ಪದಗಳು ಸಾಮಾನ್ಯವಾಗಿ ಅನೌಪಚಾರಿಕ ಸಂಭಾಷಣೆಗಳಲ್ಲೂ, ಕೊನೆಯವೆರಡು ಮುಖ್ಯವಾಗಿ ಔಪಚಾರಿಕ ಸಂಭಾಷಣೆಗಳಲ್ಲೂ ಬಳಕೆಯಾಗುತ್ತವೆ.) ಇದು ನಿಘಂಟು ರಚನೆಗೆ ಸಂಬಂಧಿಸಿದಂತೆ ಪ್ರಪಂಚದ ಬಹುತೇಕ ಭಾಷೆಗಳಲ್ಲಿ ಕಂಡುಬರುವ ಒಂದು ಮಾದರಿಯೆನ್ನಬಹುದು. ಹಾಗಾಗಿ ಮೇಲಿನ ಟೀಕೆಯು (ಹೇಳಿಕೆ) ವಿಶೇಷವಾಗಿ ದಕ್ಷಿಣ ಏಷಿಯಾದ ನಿಘಂಟು ಶಾಸ್ತ್ರಜ್ಞರಿಗಷ್ಟೆ ಅನ್ವಯವಾಗುವ ವಿಮರ್ಶೆಯಲ್ಲ.

ನಾವು ಕ್ರಿಯಾತ್ಮಕ ವ್ಯತ್ಯಾಸಗಳ ಸಮಾಜಶಾಸ್ತ್ರೀಯ ಅಂತರ್ ಸಂಬಂಧಗಳತ್ತ ಬಂದಾಗ ನಮ್ಮ ಅಜ್ಞಾನವು ಇನ್ನಷ್ಟು ಸ್ಪಷ್ಟವಾಗುತ್ತದೆ. ಔಪಚಾರಿಕ ಸಂದರ್ಭಗಳು ಚಾಲನೆಗೊಳಿಸುವ ನಿರ್ದಿಷ್ಟ ಭಾಷಿಕ ಪ್ರತಿಸ್ಪಂದನೆಗಳು ಅನೌಪಚಾರಿಕ ಅಥವಾ ಆಪ್ತ ಸನ್ನಿವೇಶಗಳು ಚಾಲನೆಗೊಳಿಸುವ ಪ್ರತಿಸ್ಪಂದನೆಗಳಿಗಿಂತ ಭಿನ್ನವಾದವುಗಳೆಂಬುದನ್ನು ನಾವು ಸಾಮಾನ್ಯವಾಗಿ ತಿಳಿದವರಿದ್ದೇವೆ. ಆದರೆ ಈ ಪ್ರತಿಸ್ಪಂದನದಲ್ಲಾಗುವ ವ್ಯತ್ಯಾಸವನ್ನು ಅಳೆಯುವ ಅಥವಾ ಈ ಪ್ರಕ್ರಿಯೆಗೆ ಕಾರಣೀಭೂತವಾದ ಸಮಾಜಶಾಸ್ತ್ರೀಯ ಅಂಶಗಳನ್ನು ಗುರುತಿಸುವ ಪ್ರಯತ್ನ ಇದುವರೆಗೆ ನಡೆದಂತಿಲ್ಲ. ಈ ಬಗೆಯ ಅಧ್ಯಯನಗಳಿಗೆ ಅವಶ್ಯವಾದ ವೈಧಾನಿಕತೆಯು ರೂಪುಗೊಳ್ಳಬೇಕಾಗಿದೆ. ಭವಿಷ್ಯದಲ್ಲಿ ದಕ್ಷಿಣ ಏಷಿಯಾದ ಭಾಷೆಗಳಿಗೆ ಸಂಬಂಧಿಸಿದಂತೆ ಮಹತ್ವದ ಅಧ್ಯಯನಗಳು ನಡೆದು, ತತ್ಪರಿಣಾಮವಾಗಿ ವೈಧಾನಿಕತೆಯೊಂದರ ಬೆಳವಣಿಗೆ ಸಂಭವನೀಯವಾಗಬಹುದು. ಇಂತಹ ಅಧ್ಯಯನಗಳ ಪ್ರಯೋಗಾತ್ಮಕ ಮಹತ್ವವನ್ನು ಮುಂದೆ "ಆನ್ವಯಿಕತೆ" ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ.

**ಬಹುಭಾಷಿಕತೆ :**

ದ್ವಿಭಾಷಿಕತೆಗೆ ಸಂಬಂಧಿಸಿದ ಸಾಮಾಗ್ರಿಗಳನ್ನೊಳಗೊಂಡ ೧೯೬೧ ನೆಯ ಜನಗಣತಿಯ ವರದಿಯು ಪ್ರಕಟವಾದ ನಂತರ ಭಾರತದಲ್ಲಿ ಬಹುಭಾಷಿಕತೆಯ ಬಗೆಗೆ ವಿಶೇಷವಾದ ಗಮನ ಹರಿಸಲಾಯಿತು. ಸಂಕುಚಿತವಾದ ಸಮಾಜೋ ಭಾಷಿಕ ದೃಷ್ಟಿಕೋನದಿಂದ ಹೇಳುವುದಾದರೆ ಬಹುಭಾಷಿಕತೆಯನ್ನು ಕುರಿತಾದ ಆಸಕ್ತಿಯು ವಿವಿಧ ಭಾಷಾ ವ್ಯವಸ್ಥೆ ಮತ್ತು ಸಂಸರ್ಗದ ಪರಿಣಾಮವಾಗಿ ಉಂಟಾಗುವ ವ್ಯತ್ಯಾಸಗಳೊಳಗಿನ ಪರಸ್ಪರ ಸಂಬಂಧಗಳತ್ತ ಕೇಂದ್ರೀಕೃತವಾಯಿತು. ಮದುರೈ ಮತ್ತು ಆಸುಪಾಸಿನಲ್ಲಿ ಮಾತನಾಡುವ ಸೌರಾಷ್ಟ್ರ (ಗುಜರಾತಿಯ ಒಂದು ಪ್ರಭೇದ) ಭಾಷೆಯ ಕುರಿತು ಪಿ.ಬಿ.ಪಂಡಿತರು ನಡೆಸಿದ

ಅಧ್ಯಯನವು ಸೌರಾಷ್ಟ್ರಿ ಭಾಷಿಕರು ತಮಿಳು ವ್ಯಾಕರಣ ಮಾದರಿಗಳನ್ನು ಸ್ವೀಕರಿಸಿರುವುದನ್ನು (ತಮಿಳು ವ್ಯಾಕರಣ ಮಾದರಿಗಳು ಸೌರಾಷ್ಟ್ರಿ ಭಾಷೆಯೊಳಗಡೆ ಅಂತರ್ಗತವಾಗಿರುವುದನ್ನು) ವಿಶದೀಕರಿಸುತ್ತದೆ. ಈ ಸ್ವೀಕರಣದ ಪರಿಣಾಮವಾಗಿ ಸಂಖ್ಯಾವಾಚಿ ವ್ಯವಸ್ಥೆಯಂತಹ ವ್ಯಾಕರಣ ಭಾಗಗಳು ಮೇಲ್ಮೈಯಲ್ಲೇನೂ ವ್ಯತ್ಯಾಸವಾಗದೆ ಇದ್ದ ಹಾಗೆಯೇ ಬಳಕೆಗೊಳ್ಳುವುದನ್ನು ಗುರುತಿಸಬಹುದಾಗಿದೆ. ಮೈಸೂರಿನ (ಕರ್ನಾಟಕದ ) ಉತ್ತರ ಭಾಗದ ಕನ್ನಡದ ಮೇಲೆ ಉರ್ದುವಿನ ಪರಿಣಾಮಕಾರಿ ಪ್ರಭಾವವಾಗಿರುವುದನ್ನು ಯು.ಪಿ. ಉಪಾಧ್ಯಾಯ ಅವರ ಬೀದರ ಕನ್ನಡವನ್ನು ಕುರಿತ ಅಧ್ಯಯನವು ಬಿಡಿಬಿಡಿಯಾಗಿದ್ದರೂ ಆಸಕ್ತಿದಾಯಕವಾಗಿ ತೆರೆದಿಡುತ್ತದೆ. ಮೈಸೂರು (ಕರ್ನಾಟಕ) - ಮಹಾರಾಷ್ಟ್ರ ಗಡಿ ಪ್ರದೇಶದ ಕನ್ನಡ ಮತ್ತು ಮರಾಠಿ ಸ್ಥಳೀಯ ಪ್ರಭೇದಗಳಲ್ಲಿನ ಏಕಾಗ್ರಮುಖತೆಯ ಕುರಿತು ಅಧ್ಯಯನ ನಡೆಸಿರುವ ಗುಂಪರ್ಜ್ ಅವರು ಸ್ಥಿರ ದ್ವಿಭಾಷಿಕತೆಯು ವ್ಯಾಕರಣ ಸ್ವರೂಪದಲ್ಲಿನ ಪರಿಣಾಮಸಿದ್ಧವಾದ ಅನನ್ಯತೆಯತ್ತ ಕೊಂಡೊಯ್ಯುತ್ತದೆಂದು ಅಭಿಪ್ರಾಯಪಟ್ಟಿದ್ದಾರೆ. ಇಂತಹ ಏಕಾಗ್ರಮುಖತೆಯ ಸಾಮಾಜಿಕ ಕ್ರಿಯೆಯ ಬಗೆಗೆ ಗುಂಪರ್ಜ್ "ಇಂತಹ ಸಂಕೇತಗಳು ಸಮಾಜದಲ್ಲಿ ಸಂವಹನಕ್ಕೆ ಆದರ್ಶಪ್ರಾಯವಾಗಿ ಯೋಗ್ಯವೆಂದು ಭಾಸವಾಗುತ್ತವೆ. ಇವು ಸಾಂಸ್ಕೃತಿಕ ಅಂತರದ ಕಡೆಗೆ ಒತ್ತು ಕೊಡುತ್ತವೆ. ಅದೇ ವೇಳೆ ನಿರಂತರವೂ ನಿಯತವೂ ಆದ ಅಂತರ್ ಸಂಬಂಧಗಳನ್ನು ಅಪೇಕ್ಷಿಸುತ್ತವೆ." ಎಂದಿದ್ದಾರೆ.

ವ್ಯಾಪಕ ಸಮಾಜೋ ಭಾಷಿಕ ಆಸಕ್ತಿಯ ದೃಷ್ಟಿಯಿಂದ ಬಹುಭಾಷಿಕ ಸಮುದಾಯಗಳ ಮೂಲ, ಸ್ಥಿರ ದ್ವಿಭಾಷಿಕತೆಯ ಸಾಮಾಜಿಕ ಪ್ರಕ್ರಿಯೆ, ಹಾಗೂ ಅದನ್ನು ಪ್ರೋತ್ಸಾಹಿಸದಿರುವ ಅಥವಾ ವಿಸ್ಮೃತಿಯಾಗದಂತೆ ನೋಡಿಕೊಳ್ಳುವ ಅಂಶಗಳ ಕುರಿತು ಅಧ್ಯಯನಗಳು ನಡೆಯಬೇಕಾಗಿವೆ. ಇದಕ್ಕೆ ಹಿನ್ನೆಲೆಯೆಂಬಂತೆ ಅಖಿಲ ಭಾರತ ಮಟ್ಟದಲ್ಲಿ ನಡೆದ ಆಸಕ್ತಿದಾಯಕ (ಕುತೂಹಲಕಾರಿ) ಕೆಲಸಗಳಲ್ಲಿ ಬೋಸ್, ಆಪ್ಟೆ ಮತ್ತು ಖುಬ್ ಚಂದಾನಿಯವರ ಅಧ್ಯಯನಗಳು ಒಳಗೊಳ್ಳುತ್ತವೆ. ಬಹು ಭಾಷಿಕ ಗುಂಪುಗಳ ವಿವರವಾದ ಅಧ್ಯಯನವು ಇನ್ನೂ ಶೈಶವಾಸ್ಥೆಯಲ್ಲಿದೆ. ಆದರೂ ಖುಬ್ ಚಂದಾನಿಯವರ ಮುಂಚೂಣಿಯ ಅಧ್ಯಯನವು ಮುಂದಿನ ಕೆಲಸಗಳಿಗೆ ಒಂದು ಅಪ್ರತಿಮ ಮಾದರಿಯನ್ನು ಒದಗಿಸಿಕೊಡುತ್ತದೆ. ತಂಜಾವೂರು ಮತ್ತು ತಮಿಳುನಾಡಿನ ಇತರೆಡೆಗಳಲ್ಲಿರುವ ಮರಾಠಿ ಭಾಷಿಕರ ಕುರಿತು ಆಪ್ಟೆಯವರು ಇತ್ತೀಚೆಗೆ ನಡೆಸಿರುವ ಅಧ್ಯಯನದ ಫಲಿತಗಳನ್ನು ನಾವು ಎದುರು ನೋಡಬಹುದಾಗಿದೆ.

**ಚಾರಿತ್ರಿಕ ಅಧ್ಯಯನ :**

೧೯ನೆಯ ಶತಮಾನದ ಮೊದಲ ಭಾಗದಲ್ಲಿ ಸಂಸ್ಕೃತ ಮತ್ತು ಪ್ರಮುಖ ಯುರೋಪಿಯನ್ ಭಾಷೆಗಳೊಳಗಿನ ಐತಿಹಾಸಿಕ ಸಂಬಂಧದ ಕುರಿತು ಸಂಶೋಧನೆ ಪ್ರಾರಂಭವಾಯಿತು. ಅದರಿಂದ ಪ್ರಚೋದನೆಗೊಂಡು ಭಾಷಾ ವ್ಯವಸ್ಥೆಯಲ್ಲಾಗುವ ಬದಲಾವಣೆಗಳ ಅಧ್ಯಯನ - ಅರ್ಥಾತ್ ಐತಿಹಾಸಿಕ ಭಾಷಾ ವಿಜ್ಞಾನವು ಕವಲೊಡೆಯಿ

ತೆಂದು ಹೇಳಬಹುದಾಗಿದೆ. ಅಲ್ಲಿಂದೀಚೆಗೆ ಸುಮಾರು ಒಂದು ಶತಮಾನದ ಕಾಲ ಸಂಸ್ಕೃತ ಭಾಷೆಗೆ ಅದರ ಪೂರ್ವಿಕ (ಜನಕ) ಭಾಷೆಗಳೊಂದಿಗೆ ಇದ್ದ ಸಂಬಂಧ, ಸಮಕಾಲೀನ ಸೋದರಿ ಭಾಷೆಗಳೊಂದಿಗೆ ಇರುವ ಸಂಬಂಧ, ಮಧ್ಯಕಾಲೀನ ಇಂಡೋ - ಆರ್ಯನ್ ಪುತ್ರಿ ಭಾಷೆಗಳೊಂದಿಗಿನ ಸಂಬಂಧ, ಅದೇ ರೀತಿ ಆಧುನಿಕ ಇಂಡೋ ಆರ್ಯನ್ ಪೌತ್ರಿ ಭಾಷೆಗಳೊಂದಿಗಿನ ಸಂಬಂಧ- ಇವುಗಳನ್ನು ಕಂಡುಕೊಳ್ಳುವ ಸಂಸ್ಕೃತ ಭಾಷೆಯ ಚಾರಿತ್ರಿಕ ಅಧ್ಯಯನದತ್ತ ತೀವ್ರ ಗಮನಹರಿಸಲಾಯಿತು. ಸಂಸ್ಕೃತದ ಮೇಲೆ ದ್ರಾವಿಡದ ಪ್ರಭಾವವನ್ನು ಗುರುತಿಸುವ ಟಿ.ಬರ್ರೋನ ಅಧ್ಯಯನವು ೧೯೪೦ ರಷ್ಟು ಹಿಂದೆಯೇ ಬೆಳಕು ಕಾಣತೊಡಗಿದ್ದರೂ ೧೯೫೦ ಮತ್ತು ೧೯೬೦ರ ವೇಳೆಗಷ್ಟೆ ಭಾಷಾಶಾಸ್ತ್ರಜ್ಞರು ಮತ್ತು ಭಾರತಾಧ್ಯಯನಕಾರರು ಇಂತಹ ಕೆಲಸ ಶೂನ್ಯದಲ್ಲಿ (ಕನ್ನೆ ನೆಲದಲ್ಲಿ ) ನಡೆಯುತ್ತಿದೆಯೆಂದು ತಿಳಿಯತೊಡಗಿದರು. ಎಂ.ಬಿ.ಎಮಿನೋನ "ಲಿಂಗ್ವಿಸ್ಟಿಕ್ ಪ್ರಿ ಹಿಸ್ಟರಿ ಆಫ್ ಇಂಡಿಯಾ" (ಭಾರತದ ಭಾಷಾವೈಜ್ಞಾನಿಕ ಪೂರ್ವೇತಿಹಾಸ) ಮತ್ತು "ಇಂಡಿಯಾ ಆ್ಯಸ್ ಎ ಲಿಂಗ್ವಿಸ್ಟಿಕ್ ಏರಿಯಾ" (ಭಾಷಾ ಪ್ರದೇಶವಾಗಿ ಭಾರತ) ಎಂಬ ಕೃತಿಗಳು ದ್ರಾವಿಡ ಮತ್ತು ಇಂಡೋ ಆರ್ಯನ್ ಭಾಷೆಗಳೊಳಗಿನ ಅಂತರ್ ಸಂಬಂಧಗಳ ವ್ಯಾಪಕತೆಯ ಕುರಿತು ಭಾಷಾಶಾಸ್ತ್ರಜ್ಞರಿಗೂ ಇತರರಿಗೂ ಅರಿವು ಮೂಡಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. ಪ್ರಸ್ತುತ ಕೃತಿಗಳು ಈ ಎರಡು ಭಾಷಾಗುಂಪುಗಳು ಪರಸ್ಪರ ಸಂಪರ್ಕಕ್ಕೆ ಬಂದ ಪ್ರಾರಂಭಿಕ ಹಂತದ ಸ್ಥಿತಿ ಗತಿಗಳನ್ನು ವಿವರಿಸುತ್ತವೆ. ಇವು ಮತ್ತು ಇತರ ಕೆಲವು ಅಧ್ಯಯನಗಳು ದಕ್ಷಿಣ ಏಷಿಯಾದ, ಅದರಲ್ಲೂ ವಿಶೇಷವಾಗಿ ದ್ರಾವಿಡ ಮತ್ತು ಇಂಡೋ - ಆರ್ಯನ್ ಭಾಷೆಗಳೊಳಗಿನ ಪರಸ್ಪರ ಸಂಬಂಧಗಳ ಕುರಿತು ಮುಂದೆ ನಡೆದ ಅಸಂಖ್ಯ ಅಧ್ಯಯನಗಳಿಗೆ ಪ್ರೇರಣೆಯನ್ನೊದಗಿಸಿದುವು. ಹಿಂದಿನ ಭಾಗದಲ್ಲಿ ಹೆಸರಿಸಿದ ಅಧ್ಯಯನಗಳಲ್ಲದೆ ಸಂಪರ್ಕ ಮತ್ತು ಏಕಾಗ್ರಮುಖತೆಗೆ ಸಂಬಂಧಿಸಿದ ಪ್ರಬಂಧಗಳ ಎರಡು ಸಂಕಲನಗಳು ಸಿದ್ಧಗೊಳ್ಳುತ್ತಿವೆ. ಹಾಗಾಗಿ ಸಂಸ್ಕೃತ ವಿದ್ಯಾರ್ಥಿಗಳು ಹಲವು ದಶಕಗಳಿಂದ ಮಾಡುತ್ತಾ ಬಂದ ತಪ್ಪುಗಳನ್ನು - ತಮ್ಮ ಭಾಷೆಯನ್ನು ಶೂನ್ಯದಲ್ಲಿ ಕಲ್ಪಿಸಿಕೊಳ್ಳುವ ತಪ್ಪು - ದ್ರಾವಿಡ ಚಿಂತಕರು ದ್ರಾವಿಡಾಧ್ಯಯನಕಾರರು) ಮಾಡಲಾರರೆಂದು ಹೇಳಬಹುದು.

ಐತಿಹಾಸಿಕ ಭಾಷಾವಿಜ್ಞಾನವು ಭಾಷೆಯೊಂದರ ಔಪಚಾರಿಕ ವ್ಯವಸ್ಥೆಯಲ್ಲಾಗುವ ಬದಲಾವಣೆಗಳೊಂದಿಗೆ ಸಂಬಂಧ ಹೊಂದಿರುತ್ತದೆ. ಪಾರಂಪರಿಕವಾಗಿ ಅದು ಮುಖ್ಯವಾಗಿ ಕಾಲದ ದೀರ್ಘವ್ಯಾಪ್ತಿಯೊಂದಿಗೆ ಸಂಬಂಧ ಹೊಂದಿದೆ. ಭಾಷಾ ವ್ಯವಸ್ಥೆಯೊಳಗೆ ಅಂತರ್ಗತವಾಗಿರುವ ವ್ಯತ್ಯಾಸಗಳನ್ನು ಗಣನೆಗೆ ತೆಗೆದುಕೊಂಡರೆ ಸಾಮಾಜಿಕ ಭಾಷಾ ವಿಜ್ಞಾನವು ಭಾಷಾವ್ಯತ್ಯಾಸದೊಂದಿಗೆ ಸಂಬಂಧವಿರುವ ಸಾಮಾಜಿಕ ಅಂಶಗಳ ಸವಿವರ ಅಧ್ಯಯನಕ್ಕೆ ಸಾಧ್ಯವಾಗುವ ಕ್ರಿಯಾತ್ಮಕ ಆಯಾಮವನ್ನು ಸೇರ್ಪಡೆಗೊಳಿಸುತ್ತದೆ. ಫಿಶರ್ ಮತ್ತು ಲೇಬೋರಂಥವರ ಪ್ರಾರಂಭಿಕ ಘಟ್ಟದ ಅಧ್ಯಯನಗಳು ಗುಂಪಿನೊಳಗಿನ ಒಗ್ಗಟ್ಟು, ಗುಂಪುಗಳ ನಡುವಿನ ಉದ್ವೇಗಗಳು ಮತ್ತು ಗುಂಪಿನ ನಿರೀಕ್ಷೆಗಳನ್ನು ಗುರುತಿಸುವ

ಸಾಧ್ಯತೆಯು ಧ್ವನಿ ವ್ಯತ್ಯಾಸದಲ್ಲಿ ಪ್ರಮುಖ ಅಂಶಗಳಾಗುತ್ತವೆಂಬುದನ್ನು ತೋರಿಸಿಕೊಟ್ಟಿವೆ. ಇಂತಹ ಅಂಶಗಳು ದಕ್ಷಿಣ ಏಷಿಯಾ ಕ್ಷೇತ್ರದಲ್ಲಿ ನಿರ್ಣಾಯಕ ಪಾತ್ರ ವಹಿಸುವುದನ್ನು ಮೇಲೆ ಹೆಸರಿಸಿದ ಅಧ್ಯಯನಗಳಲ್ಲಿ ಹಲವು ದೃಢೀಕರಿಸುತ್ತವೆ. ಗುಂಪರ್ಜ್ ಮತ್ತು ರಾಮಾನುಜನ್ ಅವರುಗಳ ಪ್ರಕಾರ ಜಾತಿ ಮೇರೆಗಳು ಒಂದು ಗುಂಪಿನಿಂದ ಇನ್ನೊಂದು ಗುಂಪಿಗೆ ಆಗಬಹುದಾದ ಬದಲಾವಣೆ (ನಾವೀನ್ಯತೆ)ಯ ಶಿಥಿಲತೆಗೆ ಅಡ್ಡಿಯಾಗುತ್ತವೆ. (ಪ್ರೋತ್ಸಾಹ ಕೊಡುವುದಿಲ್ಲ). ಅದೇ ರೀತಿ ಒಂದು ನಿರ್ದಿಷ್ಟ ಗುಂಪಿನೊಳಗೆ ವಿಶಿಷ್ಟ ರೀತಿಯ ಮಾರ್ಪಾಟುಗಳಾಗುವುದಕ್ಕೆ ಪ್ರಚೋದನೆ ನೀಡುತ್ತವೆ.

ಇಂತಹ ಅಧ್ಯಯನಗಳು ನಾವು ಗಮನಿಸಿದ ಸಾಮಾಜಿಕ ಉಪಭಾಷೆಗಳಲ್ಲಿನ ವ್ಯತ್ಯಾಸಗಳಿಗೆ ಸಾಕಷ್ಟು ಪ್ರೇರಣೆಯನ್ನೊದಗಿಸಿವೆ. ಆದರೆ, ಮತ್ತೆ ಮತ್ತೆ ತೋರಿಸಲಾಗಿರುವ ಅನಿರೀಕ್ಷಿತ ಸಾಮ್ಯತೆಗಳನ್ನು ಅವು ಗಮನಿಸಿದಂತಿಲ್ಲ. ಕನ್ನಡ ಮತ್ತು ಮರಾಠಿಯಂತಹ ಪರಸ್ಪರ ಸಂಬಂಧವಿಲ್ಲದ ಎರಡು ಭಾಷೆಗಳು ಒಂದೇ ತೆರನಾದ ವ್ಯಾಕರಣ ರಚನೆಯನ್ನು ಹೊಂದಿದೆಯೆಂದಾಗ ಅಲ್ಲಿಯ ಸಮಸ್ಯೆಯನ್ನು ಪ್ರಾಚೀನವಾದ (ಶಾಸ್ತ್ರೀಯವಾದ) ಐತಿಹಾಸಿಕ ಸಿದ್ಧಾಂತದಿಂದ ಪರಿಹರಿಸಿಕೊಳ್ಳಲಾಗದ ಸ್ಥಿತಿ ನಮ್ಮದಾಗುತ್ತದೆ. ಭಾಷೆಗಳು ಪದಗಳನ್ನು ಪರಸ್ಪರ ಸ್ವೀಕರಿಸಿದರೂ ವ್ಯಾಕರಣ ಮತ್ತು ಅರ್ಥ ರಚನಾ ವಿಧಾನಗಳಲ್ಲಿ ತಮ್ಮ ಮೂಲ ಸ್ವರೂಪವನ್ನು ಹಾಗೆಯೇ ಉಳಿಸಿಕೊಳ್ಳುತ್ತವೆ ಎಂಬ ಪಾರಂಪರಿಕ ತಿಳುವಳಿಕೆಯೊಂದಿದೆ. ಆದರೆ, ದಕ್ಷಿಣ ಭಾರತದಲ್ಲಿ ಇದಕ್ಕೆ ವಿರುದ್ಧವಾದ ಪ್ರಕ್ರಿಯೆಯು ಅಧಿಕ ಪ್ರಮಾಣದಲ್ಲಿ ನಡೆದಿರುವುದನ್ನು ನಾವು ಕಾಣುತ್ತೇವೆ. ಇಡಿಯ ಉಪಖಂಡದಲ್ಲಿ ವ್ಯಾಕರಣ, ಧ್ವನಿ ಹಾಗೂ ಅರ್ಥರಚನೆಗೆ ಸಂಬಂಧಪಟ್ಟ ಇಂತಹ ಹಲವು ಲಕ್ಷಣಗಳು ಸರ್ವತ್ರ ವ್ಯಾಪಿಸಿಕೊಂಡಿವೆ. ಇದಕ್ಕೆ ಹೋಲಿಸಿದರೆ ಶಬ್ದಗಳ ಸ್ವೀಕೃತಿಯ ಪ್ರಮಾಣವು (ತಮಿಳನ್ನು ಬಿಟ್ಟು ಎಲ್ಲಾ ಗ್ರಾಂಥಿಕ ಭಾಷೆಗಳೂ ಸಂಸ್ಕೃತದಿಂದ ಹೇರಳವಾಗಿ ಸ್ವೀಕರಿಸಿರುವುದನ್ನು ಹೊರತುಪಡಿಸಿ) ಸಾಕಷ್ಟು ಸೀಮಿತವಾಗಿದೆಯೆನ್ನಬಹುದು.

ಗುಂಪರ್ಜ್ ಹೇಳುವ ಪ್ರಕಾರ ಬಹುಜಾತಿಗಳಿರುವ ಹಳ್ಳಿಗಳಲ್ಲಿ ವಾಸಿಸುವ ಜನರ ಆವಶ್ಯಕತೆಯಿಂದಾಗಿ ಇಂತಹ ಪರಿಸ್ಥಿತಿ ಉದ್ಭವವಾಗುತ್ತದೆ. ಉಡುಗೆ - ತೊಡುಗೆ, ಮತ್ತು ಆಚರಣೆ - ಸಂಪ್ರದಾಯಗಳಲ್ಲಿನ ವ್ಯತ್ಯಾಸಗಳು ವಿವಿಧ ಸಮುದಾಯಗಳ ವಿಶಿಷ್ಟತೆಗೆ ಒತ್ತು ಕೊಡುವಂತೆ, ಪ್ರಜ್ಞಾಪೂರ್ವಕವಾಗಿ ಗಮನಿಸತಕ್ಕ ಭಾಷೆಯ ಲಕ್ಷಣಗಳು ಕೂಡ ಇಂತಹುದೇ ಕ್ರಿಯೆಯನ್ನುಳ್ಳವುಗಳಾಗಿವೆ. ಇನ್ನೊಂದೆಡೆ ಪದಾನುಕ್ರಮ, ಅರ್ಥರಚನಾ ವೈಶಿಷ್ಟ್ಯಗಳಂತಹ ಸುಲಭಗ್ರಾಹ್ಯವಲ್ಲದ ಅಂಶಗಳು ಕೃಷಿ ಕ್ಷೇತ್ರದಲ್ಲಿನ ಆರ್ಥಿಕ ಸಹಕಾರಗಳ ಕಾರಣಕ್ಕಾಗಿ ಸಾಮ್ಯತೆಯತ್ತ ಚಲಿಸುತ್ತಿರುವಂತೆ ಕಾಣಿಸುತ್ತದೆ. ವಿಶೇಷವಾಗಿ ಬತ್ತ ಬೆಳೆಯುವಂತಹ ಭಾರತದ ಕೆಲವು ಪ್ರದೇಶಗಳಲ್ಲಿ ಕೃಷಿಕಾರ್ಯಗಳು ಮೇಲ್ಜಾತೀಯ ಭೂಮಾಲಿಕರು, ಮಧ್ಯಮ ಜಾತಿಗಳ ಗೇಣಿದಾರರು (ಒಕ್ಕಲುಗಳು) ಮತ್ತು ಕೆಳಜಾತಿಯ ಕೃಷಿಕಾರ್ಮಿಕರೊಳಗೆ ಒಂದು ಸಂಕೀರ್ಣ ಮಾದರಿಯ ಸಹಕಾರ ತತ್ವದಿಂದ

ನಡೆಯುತ್ತಿರುವುದನ್ನು ಕಾಣಬಹುದಾಗಿದೆ. ಹೀಗೆ ವ್ಯಾಕರಣ ಮತ್ತು ಅರ್ಥರಚನೆಗೆ ಸಂಬಂಧಿಸಿದ ಸಾಮಾನ್ಯ ತಳಹದಿಯು ಭಾಷೆಯ ಸ್ಪಷ್ಟ ರೂಪಗಳಲ್ಲಿನ ಗಣನೀಯ ವ್ಯತ್ಯಾಸಗಳ ಸಲುವಾಗಿ ಸಂವಹನವನ್ನು ಸುಲಭ ಸಾಧ್ಯವಾಗಿಸುವ ನಿಟ್ಟಿನಲ್ಲಿ ಕೆಲಸ ನಿರ್ವಹಿಸುತ್ತದೆ.

ದಕ್ಷಿಣ ಏಷಿಯಾದ ಸಾಮಾಜಿಕ ಭಾಷಾವಿಜ್ಞಾನದ ಚರಿತ್ರೆಯನ್ನು ಬರೆಯುವುದೆಂದರೆ, ಉಪಖಂಡದ ವಿವಿಧ ಭಾಗಗಳಲ್ಲಿ, ವಿವಿಧ ರೂಪಗಳಲ್ಲಿ ಉಂಟಾದ ಗಮನಾರ್ಹವಾದ ಭಾಷಿಕ ಒಗ್ಗೂಡುವಿಕೆಯನ್ನು ವಿವರಿಸುವ ಪ್ರಾರಂಭಿಕ ಕಾಲಘಟ್ಟದ ಭಾಷಾ ಸಂವಹನ ಮಾದರಿಗಳನ್ನು ಅಭಿವೃದ್ಧಿಪಡಿಸುವುದೆಂದರ್ಥ. ಇದಕ್ಕಾಗಿ ನಾವು ಲಭ್ಯವಿರುವ ಎಲ್ಲಾ ಬಗೆಯ ಆಧಾರಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ಅದು ಸಮಕಾಲೀನ ಸಮಾಜದಲ್ಲಿನ ಸಾಮಾಜಿಕ ಬದಲಾವಣೆಯ ಅಧ್ಯಯನ, ಮೊದಲ ಘಟ್ಟದ ಬರಹಗಾರರು ಇಂತಹ ಬದಲಾವಣೆಗಳ ಬಗೆಗೆ ನೀಡಿದ ವಿವರಣೆ, ಭಾಷಾಶಾಸ್ತ್ರೀಯ ಅಧ್ಯಯನಗಳು ಮತ್ತು ಭಾಷೆಯ ಚರಿತ್ರೆ, ಪುರಾತತ್ವ ಮತ್ತು ಭೌತಿಕ ಮಾನವಶಾಸ್ತ್ರಗಳ ಆಧಾರಗಳು- ಇವೆಲ್ಲವುಗಳನ್ನು ಒಳಗೊಂಡಿರುತ್ತವೆ. ಮರಾಠಿಯ ಸಮಾಜೋ ಭಾಷಿಕ ಹಿನ್ನೆಲೆಯನ್ನು ಪರೀಕ್ಷಿಸಲು ನಡೆಸಿದ ಪ್ರಾಥಮಿಕ ಪ್ರಯತ್ನವೊಂದು ಅದು ಇತರ ಹಲವು ಇಂಡೋ-ಆರ್ಯನ್ ಭಾಷೆಗಳಿಗಿಂತ ದ್ರಾವಿಡದ ಜತೆಗೆ ಹೆಚ್ಚಿನ ಸಾಮ್ಯವನ್ನು ಹೊಂದಿದೆಯೆಂಬುದನ್ನು ತೋರಿಸಿಕೊಟ್ಟಿದೆ. ದ್ರಾವಿಡದಲ್ಲಿ ಹುಟ್ಟಿರಬಹುದಾದ ವ್ಯಾಕರಣ ಮತ್ತು ಅರ್ಥರಚನಾ ಮಾದರಿಗಳೊಂದಿಗೆ ಇಂಡೋ - ಆರ್ಯನ್ ಶಬ್ದಸಾಮಗ್ರಿಯು ಬೆಸೆದುಕೊಂಡುದಕ್ಕೆ ಈ ಅಧ್ಯಯನವು ಸವಿವರ ಆಧಾರವನ್ನೊದಗಿಸುತ್ತದೆ. ಈ ಭಾಷಿಕ ಸಂಯೋಗವು ಭಾರತದ ವಿಶಿಷ್ಟ ಬಹುಜಾತಿ ನೆಲೆಗಳನ್ನು ಸೃಷ್ಟಿಸಿದ ಸಾಮಾಜಿಕ ಒಗ್ಗೂಡುವಿಕೆ ಪ್ರಕ್ರಿಯೆಯ ಒಂದು ದ್ಯೋತಕವಾಗಿ ಕಂಡುಬರುತ್ತದೆ. ಇದು ಗುಂಪುಗಳು ವಿವಿಧ ಭೌಗೋಲಿಕ ಮತ್ತು ಕುಲಸಂಬಂಧಿ ಹಿನ್ನೆಲೆಯಿಂದ ಆರ್ಥಿಕವಾಗಿ ಸಬಲವಾದ ಘಟಕಗಳಾಗಿ ಒಂದುಗೂಡುವುದರ ದ್ಯೋತಕವೂ ಹೌದು.

**ಸಂವಹನದ ಮಾನವ ಕುಲಶಾಸ್ತ್ರ :**

ಮೇಲೆ ಪ್ರಸ್ತಾಪಿಸಿದ ಅಧ್ಯಯನಗಳಲ್ಲಿ ಹಲವು ದಕ್ಷಿಣ ಏಷಿಯಾದಲ್ಲಿರುವ ಸಂವಹನ ಪ್ರವೃತ್ತಿಯನ್ನು ಕುರಿತ ಸಾಮಾನ್ಯ ತಿಳುವಳಿಕೆಗೆ ಸಹಕಾರಿಯಾಗುತ್ತವೆ. ಈ ಸಂವಹನ ಪ್ರವೃತ್ತಿಯು ಭಾಷಾ ವ್ಯತ್ಯಾಸದ ಸಾಮಾಜಿಕ ಕ್ರಿಯೆಗಳು, ದ್ವಿಸ್ತರತೆ, ನಗರೀಕರಣ, ಹಾಗೂ ಶಿಕ್ಷಣದ ಪರಿಣಾಮಗಳನ್ನು ಒಳಗೊಂಡಿರುತ್ತದೆ. ಆದರೆ, ಪ್ರಪಂಚದಲ್ಲಿನ ಈ ಭಾಗದ ಜನರು ತಮ್ಮ ಜೀವನಕ್ಕೆ ಅಗತ್ಯವಿರುವ ವೈವಿಧ್ಯಮಯ ಸಂವಹನಕಾರ್ಯಗಳನ್ನು ಹೇಗೆ ಈಡೇರಿಸಿಕೊಳ್ಳುತ್ತಿದ್ದಾರೆಂಬ ಬಗ್ಗೆ ನಾವು ಸಾಕಷ್ಟು ತಿಳಿದುಕೊಂಡಿಲ್ಲ. ಮುಂದಿನ ಪ್ರಕರಣಗಳು (ಪ್ಯಾರಾಗಳು) ಈ ನಿಟ್ಟಿನಲ್ಲಿ ಕೆಲಸ ಆಗಬೇಕಾದ ಕೆಲವು ಕ್ಷೇತ್ರಗಳನ್ನು ಸ್ಪರ್ಶಿಸುತ್ತವೆ.

ಸಂವಹನ ಪ್ರವೃತ್ತಿಯ ಮೇಲಿನ ಒತ್ತಡ (ನಿರ್ಬಂಧ)ದ ಬಗ್ಗೆ- ಅಂದರೆ, ಯಾರು? ಏನು? ಯಾವಾಗ? ಮತ್ತು ಯಾರಿಗೆ? ಒತ್ತಡ ತರುತ್ತಾರೆ? ಎಂಬ ಬಗ್ಗೆ- ದಕ್ಷಿಣ ಏಷಿಯಾದ ಯಾವುದೇ ಭಾಗದಲ್ಲೂ ವ್ಯವಸ್ಥಿತವಾದ ಅಧ್ಯಯನವು ನಡೆದಂತಿಲ್ಲ. ಹಾಗಾಗಿ ಸದ್ಯದ ಮಟ್ಟಿಗೆ ನಾವೀಗ ಈ ಕುರಿತಾದ ಸಾಮಾನ್ಯ ಅಭಿಪ್ರಾಯಗಳ ಆಧಾರದಿಂದ ಮುಂದುವರಿಯಬೇಕಾಗಿದೆ. ಉದಾಹರಣೆಗೆ, ಕುಟುಂಬದ ಕಿರಿಯ ಸದಸ್ಯರು ತಮಗೆ ಮಾತನಾಡಲು ಸೂಚನೆ ಬಂದ ಹೊರತು ತಮ್ಮ ಹಿರಿಯರೆದುರು ಮೌನವಾಗಿರುವ ಪ್ರವೃತ್ತಿಯುಳ್ಳವರಾಗಿರುತ್ತಾರೆಂದು ಈ ಪ್ರದೇಶಕ್ಕೆ ಬಂದ ಹಲವಾರು ಪ್ರವಾಸಿಗರು ಗುರುತಿಸಿದ್ದಾರೆ. ಈ ಬಗೆಯ ನಿರ್ಬಂಧದ ಒಂದು ವಿಸ್ತರಣೆಯನ್ನು ಕುಟುಂಬದ ಹೊರಗಡೆಯೂ ಗಮನಿಸಲಾಗಿದೆ. ಉದಾಹರಣೆಗೆ ವ್ಯಾಪಾರೀ ಸಂಸ್ಥೆ ಅಥವಾ ಸರಕಾರಿ ಕಛೇರಿಗಳಲ್ಲಿ, ಅದೇ ರೀತಿ ಶೈಕ್ಷಣಿಕ ಸಂದರ್ಭಗಳಲ್ಲಿ ಕಿರಿಯ ಸಹೋದ್ಯೋಗಿಗಳು ತಮ್ಮ ದಿನನಿತ್ಯದ ವ್ಯವಹಾರಗಳನ್ನು ಹೊರತುಪಡಿಸಿ, ಉಳಿದಂತೆ ಸಂವಹನದಲ್ಲಿ ತೊಡಗಿಕೊಳ್ಳಲು ಇಚ್ಛಿಸುವುದಿಲ್ಲ. ಇದೇ ತೆರನಾದ ನಡವಳಿಕೆಯನ್ನು ನಾವು ಪ್ರಾಥಮಿಕ ಹಂತದಿಂದ ಕಾಲೇಜು ವರೆಗಿನ ಶಾಲಾ ತರತಿಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾಣಲು ಸಾಧ್ಯವಾಗುತ್ತದೆ. ಅಲ್ಲಿ ವಿದ್ಯಾರ್ಥಿಯು ವಿರಳವಾಗಿ ಕೇಳುವ ನೇರಪ್ರಶ್ನೆಯನ್ನು ಹೊರತುಪಡಿಸಿದರೆ, ಉಳಿದಂತೆ ಸಂಪೂರ್ಣವಾಗಿ ಶಿಕ್ಷಕನ ಕಡೆಯಿಂದ ವಿದ್ಯಾರ್ಥಿಯ ಕಡೆಗೆ ಸಂವಹನ ಏರ್ಪಡುತ್ತದೆ. ಈ ಪ್ರವೃತ್ತಿಯು ಎಷ್ಟು ಪ್ರಬಲವಾಗಿದೆ? ಇತರ ಯಾವ ಸಾಂಸ್ಕೃತಿಕ ಪರಿಸ್ಥಿತಿಗಳಲ್ಲಿ ಇದು ನಿರ್ಮಾಣವಾಗುತ್ತದೆ? ಅಥವಾ ಯಾವ ಪ್ರಮಾಣದಲ್ಲಿ (ಮತ್ತು ಯಾವ ಸಂದರ್ಭಗಳಲ್ಲಿ) ಈ ಪ್ರವೃತ್ತಿ ಬದಲಾಗಬಹುದು ಎಂಬುದು ನಮಗೆ ತಿಳಿದಿಲ್ಲ. ಇದು ನಿರ್ಬಂಧದ ಕೇವಲ ಒಂದು ಮಾದರಿಯಷ್ಟೆ. ಆಚರಣೆಗಳು, ಅಂತರ್ಜಾತಿ ಕಾರ್ಯಕ್ರಮಗಳು, ಔಪಚಾರಿಕ ಸಭೆಗಳು, ಹಾಗೂ ವೈವಾಹಿಕ ಒಪ್ಪಂದಗಳಂತಹ ಇತರ ಹಲವು ಸಂದರ್ಭಗಳಲ್ಲೂ ಇನ್ನಿತರ ಕಟ್ಟುಪಾಡುಗಳು ನಿಸ್ಸಂದೇಹವಾಗಿ ರೂಢಿಯಲ್ಲಿವೆ.

ದಕ್ಷಿಣ ಏಷಿಯಾ ಸಮಾಜದಲ್ಲಿ ಒಂದಲ್ಲ ಒಂದು ಬಗೆಯ ದ್ವಿಸ್ತರತೆಯು ಕೇವಲ ಅಪವಾದವಾಗಿರದೆ, ರೂಢಿಗತವಾಗಿರುವುದು ಸ್ಪಷ್ಟವಾಗುತ್ತದೆ. ನಗರ ಹಾಗೂ ಗ್ರಾಮೀಣ ಪ್ರದೇಶಗಳೆರಡರಲ್ಲೂ ಬಹುಭಾಷಿಕ ಜನರು ಮತ್ತು ಗುಂಪುಗಳು ಎಲ್ಲಾಕಡೆ ಸರ್ವೇಸಾಮಾನ್ಯವೆನ್ನಬಹುದು. ಕ್ರಿಯಾತ್ಮಕ ದ್ವಿಸ್ತರತೆಯು ವಿದ್ಯಾವಂತರಿಗೆ ಮಾತ್ರ ವಿಶಿಷ್ಟವಾದ ಜನ್ಮಸಿದ್ಧ ಹಕ್ಕಲ್ಲ.ಹೀಗಿದ್ದೂ ಅನೇಕ ಸಂದರ್ಭಗಳಲ್ಲಿ ವ್ಯಕ್ತಿಯೊಬ್ಬನ ಮನೆ ಮಾತು ಆತನನ್ನು ನಿರ್ದಿಷ್ಟ ಪ್ರಾದೇಶಿಕ ಮತ್ತು ಸಾಮಾಜಿಕ ಅನನ್ಯತೆಗೆ ಸೀಮಿತಗೊಳಿಸುತ್ತದೆ. ದಕ್ಷಿಣ ಏಷಿಯಾದಲ್ಲಿ ದ್ವಿಸ್ತರತೆಯ ಕಡೆಗಿನ ಒಲವು ಹೆಚ್ಚು ಕಡಿಮೆ ಸಾರ್ವತ್ರಿಕವಾಗಿದೆಯೆಂದು ತಿಳಿಯಲಾಗುತ್ತದೆ. ಹಾಗಿದ್ದರೂ ಈ ಒಲವು ವ್ಯಕ್ತವಾಗುವ. ವಿಧಾನವು ತುಂಬಾ ಸಂಕೀರ್ಣವಾಗಿದೆ. ಸದ್ಯದ ಮಟ್ಟಿಗೆ ಈ ಬಗ್ಗೆ ಸಾಕಷ್ಟು ವಿವರಗಳು ನಮಗೆ ಲಭ್ಯವಿಲ್ಲ.

ದಕ್ಷಿಣ ಮಲಬಾರಿನಲ್ಲಿ ಈಗಲೂ ಇರುವ ಸ್ಥಿತಿಗತಿಗಳನ್ನು ಕುರಿತ ಮುಂದಿನ ಸಂಕ್ಷಿಪ್ತ ವಿವರಣೆಯಿಂದ ಇಂತಹ ಸಂಕೀರ್ಣತೆಯ ಕೆಲವು ಪ್ರವೃತ್ತಿಗಳು ವ್ಯಕ್ತವಾಗುತ್ತದೆ. ಆ ಪ್ರದೇಶದ ಸಾಮಾಜಿಕ ಮಾನವಶಾಸ್ತ್ರಜ್ಞರಾದ ಡಾ.ಕೆ.ರಾಮನ್ ಉಣ್ಣಿ ಅವರು ೧೯೫೦ ಮತ್ತು ೧೯೭೦ ರಲ್ಲಿ ನಡೆಸಿದ ಕ್ಷೇತ್ರಕಾರ್ಯದ ಆಧಾರದಿಂದ ಇತ್ತೀಚೆಗೆ ಈ ಮಾಹಿತಿಯನ್ನೊದಗಿಸಿದ್ದಾರೆ. ಪ್ರಸ್ತುತ ಮಾಹಿತಿಯು ಪರಿಣಾಮಕಾರಿಯಾಗಿದ್ದರೂ ಅಲ್ಲಿಯ ಅಸಂಖ್ಯ ಸಂಗತಿಗಳು ಇನ್ನಷ್ಟು ಸಂಶೋಧನೆಯನ್ನು ಅಪೇಕ್ಷಿಸುತ್ತವೆಂದು ಹೇಳಬಹುದು. ಮಲಯಾಳಂನ ಪ್ರಾದೇಶಿಕ ಮತ್ತು ಸಾಮಾಜಿಕ ಉಪಭಾಷೆಗಳು ಮಾತ್ರವಲ್ಲದೆ ಈ ಕೆಳಗಿನ ವಿಶಿಷ್ಟ ಪ್ರಭೇದಗಳನ್ನೂ ನಮಗಲ್ಲಿ ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಾಗುತ್ತದೆ. ಆಂಗ್ಲೀಕೃತ ಮಲಯಾಳಂ, ಸಂಸ್ಕೃತೀಕೃತ ಮಲಯಾಳಂ, ಮತ್ತು ಇಂಗ್ಲಿಷ್. (ನಾನು ಸ್ವತಃ ಗಮನಿಸಿದ ಪ್ರಕಾರ ಕೆಲವು ನಿರ್ದಿಷ್ಟ ನಗರ ಸಂದರ್ಭಗಳಲ್ಲಿ ಇಡೀ ವಾಕ್ಯಗಳನ್ನೇ ಏಕಕಾಲಕ್ಕೆ ಇಂಗ್ಲಿಷ್ ಮತ್ತು ಮಲಯಾಳಂಗಳೆರಡರಲ್ಲೂ ಹೇಳುವ ಪ್ರವೃತ್ತಿಯೂ ಕಂಡುಬರುತ್ತದೆ.)

ಆಂಗ್ಲೀಕೃತ ಮಲಯಾಳಂ ನ ಶೈಲಿಯ ಮಟ್ಟದಲ್ಲಿ, ಮೂಲ ಮಲಯಾಳಂ ಚೌಕಟ್ಟಿನೊಳಗಡೆ ಇಂಗ್ಲಿಷ್ ಪದಗಳು ವ್ಯತ್ಯಸ್ತ ಪ್ರಮಾಣಗಳಲ್ಲಿ ಬಳಕೆಯಾಗುತ್ತವೆ. ಸೂಕ್ತ ಸಂವಾದಿ ರೂಪಗಳಿಲ್ಲದ ಕರೆಂಟ್, ಫ್ಯೂಸ್, ವೈರ್, ಟ್ರಾನ್ಸ್‌ಫಾರ್ಮರ್ ನಂತಹ ಇಂಗ್ಲಿಷ್ ಪರಿಭಾಷೆಗಳು ಕೆಲವು ಸಂದರ್ಭಗಳಲ್ಲಿ ಅವಶ್ಯವಿದ್ದರೂ ಈ ಅಂಶಗಳಿಂದಷ್ಟೇ.

ಗ್ರಾಮೀಣ ಪರಿಸರಗಳಲ್ಲಿ ಕೆಲವೇ ಕೆಲವು ಇಂಗ್ಲಿಷ್ ಪದಗಳು ಗೊತ್ತಿದ್ದರೆ ತಾನು ಶೋಕಿ ಮನುಷ್ಯ (ಸಭ್ಯ), ತಿಳುವಳಿಕೆಯುಳ್ಳವ ಎಂಬುದಾಗಿ ತನ್ನ ಪ್ರತಿಷ್ಠೆಯನ್ನು ಸ್ಥಾಪಿಸಲು ಅದು ಸಹಕಾರಿಯಾಗುತ್ತದೆ. ಆದರೆ, ಇದಷ್ಟೇ ಅಲ್ಲದೆ ಆಂಗ್ಲೀಕೃತ ಮಲಯಾಳಂ ಮತ್ತು ಆಂಗ್ಲ ಭಾಷೆಗಳ ಬಳಕೆಯ ಪ್ರಮುಖ ಕಾರ್ಯವೆಂದರೆ ಸಾಂಪ್ರದಾಯಿಕ ಭಿನ್ನತೆಯನ್ನು ಮರೆಮಾಚುವುದು. ಇದು ಪಾರಂಪರಿಕ ಸ್ವರೂಪದಲ್ಲಿ ಅಸ್ತಿತ್ವದಲ್ಲಿಲ್ಲದ ಹೊಸ ಸಂವಹನ ಸ್ಥಿತಿಯ ಸಂದರ್ಭದಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಇದಕ್ಕೆ ಶಾಲಾ ಶಿಕ್ಷಣದ ಸಾರ್ವತ್ರಿಕತೆಯೇ ಕಾರಣವೆನ್ನಬಹುದು. ಉದಾಹರಣೆಗೆ ಉಣ್ಣಿ ಅವರ ಉಲ್ಲೇಖವನ್ನೇ ಗಮನಿಸಬಹುದು: ೧೯೫೦ರಲ್ಲಿ ಅವರು ದಕ್ಷಿಣ ಮಲಬಾರ್ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಆಂಗ್ಲೀಕೃತ ಮಲಯಾಳಂ ಮತ್ತು ಆಂಗ್ಲ ಭಾಷೆಗಳನ್ನು ಬಳಸಿದುದರಿಂದಾಗಿ ಅಲ್ಲಿಯ "ಆಚಾರಂ ಪಟಿಯಲ್" ಸಂಪ್ರದಾಯವನ್ನು ಪಾಲಿಸಬೇಕಾದ ಆವಶ್ಯಕತೆ ಅವರಿಗೆ ಕಂಡುಬರಲಿಲ್ಲ. ಅವರು ವಿದ್ಯಾವಂತರಾಗಿ ಪ್ರತಿಷ್ಠಿತರೆನಿಸಿಕೊಂಡಿದ್ದರಿಂದ ಈ ಸಂಪ್ರದಾಯದ ಸಡಿಲಿಕೆ ಒಪ್ಪಿತವಾಗಿತ್ತು.

ಇನ್ನೊಂದು ಬಗೆಯ ಸನ್ನಿವೇಶದಲ್ಲಿ ನಿರ್ದಿಷ್ಟ ವ್ಯಾಪ್ತಿಯಲ್ಲಿ ಬರುವ ಕೆಲವು ನಿಗದಿತ ಜಾತಿ ಅಥವಾ ಧಾರ್ಮಿಕ ಗುಂಪುಗಳಿಗೆ ಸಂಬಂಧಪಟ್ಟ ಬಂಧುವಾಚಿ, ಆಹಾರವಾಚಿ, ಮತ್ತು ಆರಾಧನಾ ಸಂಬಂಧಿ ಪದಗಳ ಬದಲಿಗೆ ಇಂಗ್ಲಿಷ್ ಪದಗಳನ್ನು ಬಳಸುವುದು

ಸರ್ವೇಸಾಮಾನ್ಯವಾಗಿದೆ. ಇದರಂತೆ ವಿಶೇಷವಾಗಿ ಕಾಲೇಜ್ ಹಾಸ್ಟೆಲ್‌ಗಳಂತಹ ಮಿಶ್ರಗುಂಪುಗಳಿರುವಲ್ಲಿ ಮಲಯಾಳಂ ಭಾಷೆಯ ನಡುವೆ ಫಾದರ್, ಅಂಕಲ್, ಬ್ರದರ್ - ಇನ್ ಲಾ, ವೈಫ್ ಮುಂತಾದ ಪದಗಳು ಕೇಳಿಬರುತ್ತವೆ. ವೈದ್ಯಕೀಯ ಸಂದರ್ಭಗಳಲ್ಲಿ, ಕುಟುಂಬ ಯೋಜನೆ ಹಾಗೂ ಅಂತಹುದೇ ಇತರ ವಿಷಯಕವಾದ ಚರ್ಚೆಗಳಲ್ಲಿ ಆಂಗ್ಲ ಪರಿಭಾಷೆಗಳು ಯಥೇಚ್ಛವಾಗಿ ಬಳಕೆಯಾಗುತ್ತವೆ. ಈ ಸಂದರ್ಭಗಳಲ್ಲಿ "ಸೆಕ್ಷುವಲ್ ರಿಲೇಷನ್ಸ್", "ಪ್ರೈವೇಟ್ ಪಾರ್ಟ್ಸ್", "ಡೆಲಿವರಿ", "ಬ್ರೆಸ್ಟ್ ಫೀಡಿಂಗ್"ನಂತಹ ಪದಗಳನ್ನು ಬಳಸುವುದರಿಂದ ತತ್ಸಂಬಂಧವಾದ ಮಲಯಾಳಂ ಪರಿಭಾಷೆಗಳನ್ನು ಉಪಯೋಗಿಸಿದಾಗ ಉಂಟಾಗಬಹುದಾದ ಕಿರಿಕಿರಿ (ಮುಜುಗರ)ಯನ್ನು ತಪ್ಪಿಸಬಹುದಾಗಿದೆ: ಅಧಿಕೃತ ಅಂಕಿ ಅಂಶಗಳು ಭಾರತದ ಜನಸಂಖ್ಯೆಯಲ್ಲಿ ಕೇವಲ ಶೇಕಡಾ ಒಂದರಷ್ಟು ಜನ ಮಾತ್ರ ಇಂಗ್ಲಿಷ್ ಬಲ್ಲವರಾಗಿದ್ದಾರೆಂದು ಹೇಳಿದರೂ, ಆಂಗ್ಲೀಕೃತ ಪ್ರಾದೇಶಿಕ ಭಾಷಾರೂಪಗಳನ್ನುಪಯೋಗಿಸುವ ಪ್ರವೃತ್ತಿಯು ನಮ್ಮಲ್ಲಿ ಸರ್ವತ್ರ ವ್ಯಾಪಿಸಿದೆ.

ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಇಂದಿನ ಜನತೆ ಆಂಗ್ಲೀಕೃತ ಮಾಲಯಾಳಂನ್ನು ಬಳಸುವುದರೆ ಹಿಂದಿನ ತಲೆಮಾರಿನವರು ಸಂಸ್ಕೃತೀಕೃತ ಮಲಯಾಳಂನ್ನು ಬಳಸುತ್ತಿದ್ದರು. ಉದಾಹರಣೆಗೆ ಜೋತಿಶ್ಯಾಸ್ತ್ರಜ್ಞರು ಮತ್ತು ಮರಗೆಲಸದ ಶಿಕ್ಷಕರಂತಹ ವಿಶೇಷಜ್ಞರು ಪಾರಂಪರಿಕ ಸಂಸ್ಕೃತ ಪಠ್ಯಗಳ ಆಧಾರದಿಂದ ತಾಂತ್ರಿಕ ತರಬೇತಿಯನ್ನು ಪಡೆಯುತ್ತಿದ್ದರು. ಅಂಥ ಕೆಲವರು ಕೆಳಜಾತಿಯವರಾಗಿದ್ದರೂ ದಿನನಿತ್ಯದ ಸಂಭಾಷಣೆಯಲ್ಲಿ ಸಂಸ್ಕೃತ ಪದಗಳನ್ನು ಬಳಸಬಲ್ಲ ಅವರ ಸಾಮರ್ಥ್ಯದಿಂದಾಗಿ ಅವರಿಗೆ ವಿಶೇಷ ಚಲಾವಣೆ (ಪ್ರಚಾರ) ಸಿಗುತ್ತಿತ್ತು. ಸಬಲರಾಗಿದ್ದ ನಾಯರ್ ಹುಡುಗಿಯರು ರಾಮಾಯಣ, ಮಹಾಭಾರತಗಳಂತಹ ಕೃತಿಗಳನ್ನು ಓದಬಲ್ಲಷ್ಟು ಸಂಸ್ಕೃತ ಶಿಕ್ಷಣವನ್ನು ಪಡೆಯಲು ಬಯಸುತ್ತಿದ್ದರು. ಆಧುನಿಕ ಮಹಿಳೆಯರು ಫ್ಯಾಷನ್, ಡೀಸೆನ್ಸಿ, ಲವ್, ಮ್ಯಾರಿಯೇಜ್ ಗಳಂತಹ ಇಂಗ್ಲಿಷ್ ಪದಗಳನ್ನು ಬಳಸುವುದರ ಮೂಲಕ ತಮ್ಮ ಸಂಭಾಷಣೆಗೆ ಸಂಬಾರ (ಮಸಾಲೆ) ಬೆರೆಸಿಕೊಳ್ಳುವಂತೆ ಆಗಿನ ಕಾಲದ ಮಹಿಳೆಯರು ಮಾತಿನ ಮಧ್ಯೆ ಕೆಲವು ಸಂಸ್ಕೃತ ಪದಗಳನ್ನು ಸೇರಿಸಿಕೊಳ್ಳುವ ಮೂಲಕ ತಮ್ಮ ಸಂಭಾಷಣೆಗೆ ಸಾಂಬಾರು(ಮಸಾಲೆ) ಬೆರೆಸಿಕೊಳ್ಳುತ್ತಿದ್ದರು.

ಗುರುತು ಹಲಗೆ (ನಾಮಫಲಕ )ಗಳಲ್ಲಿ, ಲಗ್ನಪತ್ರಿಕೆಗಳಂತಹ ಔಪಚಾರಿಕ ಸಂವಹನಗಳಲ್ಲಿ (ಕೆಲವೊಮ್ಮೆ ಮಲಯಾಳಂನ ಜತೆಗೆ) ಗ್ರಂಥಸ್ಥ ಇಂಗ್ಲಿಷ್ ಬಳಕೆಯಾಗುತ್ತದೆ. ಅದೇ ರೀತಿ ಖಾಸಗಿ (ವೈಯಕ್ತಿಕ) ಪತ್ರಗಳ ಆರಂಭ ಮತ್ತು ಅಂತ್ಯಗಳನ್ನು ಇಂಗ್ಲಿಷ್ ಪದಗಳ ಮೂಲಕ ಮಾಡುವುದಿದೆ. (ಮಲಾಯಾಳಂನಲ್ಲಿ ಖಾಸಗಿ ಪತ್ರವನ್ನು "ಡಿಯರ್ ಬ್ರದರ್" ಎಂದು ಪ್ರಾರಂಭಿಸಿ, "ಯುವರ್ ಅಫೆಕ್ಷನೇಟ್" ಎಂದು ಮುಕ್ತಾಯ ಗೊಳಿಸುವುದು ಸರ್ವೇಸಾಮಾನ್ಯವೆನ್ನಬಹುದು.) ಸಹಕಾರಿ ಹಾಗೂ ವ್ಯಾಪಾರೀ ಸಂಸ್ಥೆ-ಕಛೇರಿಗಳಲ್ಲಿ, ಶೈಕ್ಷಣಿಕ ಸಂದರ್ಭಗಳಲ್ಲಿ, ಅದೇ ರೀತಿ ದೂರವಾಣಿ ಸಂಭಾಷಣೆಗಳಲ್ಲಿ

ವ್ಯವಹಾರ ಮಾಧ್ಯಮವಾಗಿ ಇಂಗ್ಲಿಷ್ ಅಥವಾ ಆಂಗ್ಲೀಕೃತ ಮಲಯಾಳಂ ಬಳಸುವುದು ಒಪ್ಪಿತವಾಗಿದೆ. ಗ್ರಾಮೀಣ ಸಂದರ್ಭದಲ್ಲಿ ಇಂಗ್ಲಿಷ್ ಬಳಸುವುದರಿಂದ ಅಶಿಕ್ಷಿತನಾಗಿದ್ದ ವ್ಯಕ್ತಿ ಇದ್ದಕ್ಕಿದ್ದ ಹಾಗೆ ಸುಶಿಕ್ಷಿತನಾದಂತೆ ತನ್ನ ಸ್ಥಾನಮಾನವನ್ನು ಹೆಚ್ಚಿಸಿಕೊಳ್ಳುತ್ತಾನೆ. ಇದರಂತೆ ಸಬಲನಾದ ವ್ಯಕ್ತಿಯು (ಜಮೀನ್ದಾರ) ಅವಿದ್ಯಾವಂತರಾದ ಒಕ್ಕಲು ಮಕ್ಕಳೊಡನೆ ಇಂಗ್ಲಿಷ್‌ನಲ್ಲಿ ಮಾತನಾಡುವಂತೆ ತನ್ನ ವಿದ್ಯಾವಂತ ಮಗನನ್ನು ಪ್ರೇರೇಪಿಸುತ್ತಾನೆ. ಮದರಾಸಿನ (ತಮಿಳುನಾಡಿನ )ಗ್ರಾಮವೊಂದರಲ್ಲಿ ನಾನು ಗಮನಿಸಿದಂತೆ, ವಿದ್ಯಾವಂತರಾಗಿದ್ದ ಅಲ್ಲಿಯ ಪಂಚಾಯತ್ ಅಧ್ಯಕ್ಷರೊಬ್ಬರು ಹರಿಜನನಾಗಿದ್ದು, ಸ್ನಾತಕೋತ್ತರ ಪದವೀಧರ ನಾಗಿದ್ದ ನನ್ನ[*] ಸಂಶೋಧನ ಸಹಾಯಕನ ಜತೆ ಸಂದರ್ಭಗಳಲ್ಲಿ ಇಂಗ್ಲಿಷ್‌ನಲ್ಲೇ ಮಾತನಾಡಿದರು, ಇಂತಹ ಸಂದರ್ಭಗಳಲ್ಲಿ ಇಂಗ್ಲಿಷ್ ಬಳಕೆಯು ವಿವಿಧ ಸಾಮಾಜಿಕ ಹಿನ್ನೆಲೆಯುಳ್ಳ ವ್ಯಕ್ತಿಗಳ ಸಾಂಪ್ರದಾಯಿಕ ಸಂಪರ್ಕ ವಿಧಾನವನ್ನು ನಿವಾರಿಸುವುದು ಮಾತ್ರವಲ್ಲದೆ. ಅವರೊಳಗೆ ಸಮಾನ ಸ್ಥಾನಮಾನವನ್ನು ಸಾಂಕೇತಿಸುವಲ್ಲೂ ಇತ್ಯಾತ್ಮಕವಾಗಿ ನೆರವಾಗುತ್ತದೆ.

ದಕ್ಷಿಣ ಏಷಿಯಾದ ಇತರ ಹಲವೆಡೆಗಳಲ್ಲೂ ವಿವರಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವಿದ್ದರೂ - ಇಂತಹುದೇ ಚಿತ್ರಗಳು ಕಾಣಸಿಗುತ್ತವೆ. ಈ ವಿಷಯದ ಕುರಿತಾಗಿ ಹೆಚ್ಚಿನ ಅಧ್ಯಯನ ನಡೆಸಿದಂತೆಲ್ಲಾ ಅಂತರ್ ಪ್ರಾದೇಶಿಕ ಭಿನ್ನತೆಗಳ ಅನ್ವೇಷಣೆಯಾಗುವುದರ ಜತೆಗೆ ತತ್ಸಂಬಂಧವಾದ ಅಸಂಖ್ಯ ಪ್ರಶ್ನೆಗಳೂ ಹುಟ್ಟಿಕೊಳ್ಳುತ್ತವೆ. ಇಂದು ಈ ಮಾದರಿಗಳಲ್ಲಿ ಯಾವ ರೀತಿಯ ಬದಲಾವಣೆ ಗಳಾಗುತ್ತಿವೆ. ಆಕಾಶವಾಣಿ (ರೇಡಿಯೊ) ಮತ್ತು ಪತ್ರಿಕೆಗಳಲ್ಲಿ ಸಂಸ್ಕೃತೀಕರಣಗೊಂಡ ಮಲಯಾಳಂನ್ನು ಬಳಸುವುದರಿಂದ ಆಂಗ್ಲೀಕೃತ ಮಲಯಾಳಂ ಮತ್ತು ಸಂಸ್ಕೃತೀಕೃತ ಮಲಯಾಳಂ ಗಳೊಳಗಿನ ಸಾಂಬಂಧಿಕ ಸ್ಥಾನಮಾನಗಳ ಮೇಲೆ ಏನಾದರೂ ಪರಿಣಾಮ ಬೀರುತ್ತದೆಯೆ? ಮಾರ್ಕ್ಸಿಸ್ಟರು ಆಂಗ್ಲೀಕೃತ ಮಲಯಾಳಂನ್ನು ಬಳಸುವುದರ ಮೂಲಕ ಪಡೆಯುವ ಆರೋಪಿತ ಬೆಂಬಲವು ಯಾವುದಾದರೂ ದೃಗ್ಗೋಚರ ಪರಿಣಾಮವನ್ನುಂಟುಮಾಡುತ್ತದೆಯೆ? ಸಾಮಾನ್ಯವಾಗಿ ಯಾವ್ಯಾವ ಸಂದರ್ಭ ಸನ್ನಿವೇಶ ಗಳಲ್ಲಿ ಯಾವ್ಯಾವ ಬದಲಾವಣೆಗಳಾಗುತ್ತವೆ? ಇವುಗಳೇ ಆ ಪ್ರಶ್ನೆಗಳು. ಸಮಾಜದಲ್ಲಿಯ ವ್ಯಕ್ತಿಯ ನೆಲೆಯಿಂದ ನೋಡುವುದಾದರೆ ಅಲ್ಲಿ ದ್ವಿಸ್ತರತೆಯನ್ನು ಯಾವ ರೀತಿಯಲ್ಲಿ ಪಡೆಯಲಾಗಿದೆ? ಎಂಬ ಬಗ್ಗೆ ನಮ್ಮಲ್ಲಿ ಸಾಕಷ್ಟು ವಿವರಗಳಿಲ್ಲ. ಮನೆ ಮಾತನ್ನು ಬಿಟ್ಟು, ಉಳಿದ ಯಾವುದೇ ಭಾಷಾ ಮಾಧ್ಯಮದಲ್ಲಿನ ಮಾತಿನ ಓಘ (ನಿರರ್ಗಳತೆ) ವು ಸಾಮಾನ್ಯವಾಗಿ ಔಪಚಾರಿಕ ಶಿಕ್ಷಣ ಅಥವಾ ಹೆತ್ತವರ ತರಬೇತಿಯಿಂದ ಪ್ರಾಪ್ತವಾದುದಲ್ಲ. ಅದು ಹೆಚ್ಚಾಗಿ ಸಮಾನ ಗುಂಪುಗಳೊಳಗಿನ ಪರಸ್ಪರ ಸಂಪರ್ಕದಿಂದ ಪ್ರಾಪ್ತವಾದುದು. ಬರೆವಣಿಗೆಯ ಇಂಗ್ಲಿಷಿನ ಮೇಲೆ ಹಿಡಿತ ಸಾಧಿಸಲು ಪ್ರಾಯಶಃ ಔಪಚಾರಿಕ ಶಿಕ್ಷಣ ನಿರ್ಣಾಯಕವೆನಿಸಿದರೂ ವ್ಯಾವಹಾರಿಕ ಇಂಗ್ಲಿಷಿನ ಮೇಲೆ ಹಿಡಿತ ಸಾಧಿಸಲು ಇಂತಹ ಶಿಕ್ಷಣದ ಪ್ರಾಮುಖ್ಯತೆ ಅಷ್ಟಾಗಿ ಇಲ್ಲವೆನ್ನಬಹುದು. ಸಂಗ್ರಹ- ಸಂಪಾದನೆಯ ಪ್ರಶ್ನೆ

ಬಂದಾಗ ಅದರ ಜತೆಗೆ ವೈಯಕ್ತಿಕ ಭಾಷಾ ಸಂಗ್ರಹಾಲಯಕ್ಕೆ ಸಂಬಂಧಿಸಿದ ಸಂಕೇತ ನಿರೂಪಣಾ ಶಾಸ್ತ್ರವೊಂದರ ಆವಶ್ಯಕತೆಯಿದೆಯೆಂಬುದೂ ಮನವರಿಕೆಯಾಗುತ್ತದೆ. ಕೆಲವು ವಿದ್ಯಾವಂತ ಅಥವಾ ಅವಿದ್ಯಾವಂತ ವ್ಯಕ್ತಿಗಳು ಮೂರ್‍ನಾಲ್ಕು ಭಾಷೆಗಳಲ್ಲಿ ಹಿಡಿತ ಸಾಧಿಸಿರುವುದು ಅಸಹಜವೇನಲ್ಲ. ಮುಖ್ಯವಾಗಿ ಔದ್ಯೋಗಿಕ ಅನುಭವ ಅಥವಾ ವಿವಿಧೆಡೆಗಳಲ್ಲಿ ವಾಸಮಾಡುವ ಪರಿಣಾಮವಾಗಿ ಬಹುಭಾಷಿಕತೆಯು ನಿರ್ಮಾಣವಾಗುತ್ತದೆಂಬುದನ್ನು ನಾವು ಸಾಮಾನ್ಯವಾಗಿ ಬಲ್ಲೆನಾದರೂ, ಈ ಪ್ರಕ್ರಿಯೆಯ ವಾಸ್ತವ ಘಟನೆಯ ಬಗ್ಗೆ ನಮ್ಮಲ್ಲಿ ಸಾಕಷ್ಟು ಮಾಹಿತಿಗಳಿಲ್ಲ.

'ನುಡಿಪಲ್ಲಟ' ವನ್ನು ಕುರಿತ ಅಧ್ಯಯನಗಳು ಭಾಷಾ ವ್ಯತ್ಯಾಸದ ಅಧ್ಯಯನಕ್ಕೆ ಉಪಯೋಗವಾಗುವ ಮಾಹಿತಿಯನ್ನು ಬದಗಿಸಿಕೊಟ್ಟಿವೆಯಾದರೂ ನಿರ್ದಿಷ್ಟ ಸನ್ನಿವೇಶ ಸಂದರ್ಭಗಳಲ್ಲಿ ಯಾವ್ಯಾವ ಸಂಕೇತಗಳು ಬಳಕೆಯಾಗುತ್ತವೆಂಬುದನ್ನು ನಿಷ್ಕರ್ಷೆ ಮಾಡಲು ಬೇಕಾದ ಅಂಶಗಳತ್ತ ಬೆಳಕು ಚೆಲ್ಲಿಲ್ಲ. ಇಂತಹ ಹಲವು ಅಂಶಗಳನ್ನು ಈಗಾಗಲೇ ಪ್ರಸ್ತಾಪಿಸಲಾಗದೆ. ಉದಾಹರಣೆಗೆ: ಪಾರಂಪರಿಕ ವರ್ಗ, ಜಾತಿಭೇದ ಹಾಗೂ ಸೂಕ್ಷ್ಮ ವಿಷಯಗಳ ನಿವಾರಣೆ, ಸಂಭಾಷಣೆಯ ವಿಷಯಗಳು, ಸ್ಥಾನ ಮಾನ ವ್ಯತ್ಯಾಸದ ಸಾಂಕೇತೀಕರಣ ಮತ್ತು ಕಛೇರಿ, ದೂರವಾಣಿ ಸಂಭಾಷಣೆಗಳಂತಹ ಸನ್ನಿವೇಶಗಳ ಮಾದರಿ. ಇನ್ನಿತರ ಅಂಶಗಳನ್ನು ನಿಸ್ಸಂದೇಹವಾಗಿ ಗುರುತಿಬಹುದಾಗಿದೆ. ಬೇರೆ ಬೇರೆ ಹಿನ್ನೆಲೆಯುಳ್ಳ ಭಾಷಿಕರು ತಮ್ಮ ಮಾಧ್ಯಮ ಭಾಷೆಯನ್ನು ಆಯ್ಕೆಮಾಡಿಕೊಳ್ಳುವಲ್ಲಿ ಪ್ರಭಾವ ಬೀರುವ ಅಂಶಗಳನ್ನು ಅನ್ವೇಷಿಸಲು, ವಿವಿಧ ಸನ್ನಿವೇಶಗಳಲ್ಲಿ ವ್ಯಕ್ತಿಯ ವರ್ತನೆ ಹೇಗಿರುತ್ತದೆಂಬುದರ ಸವಿವರ ಅಧ್ಯಯನ ಅವಶ್ಯವಾಗಿ ನಡೆಯಬೇಕಾಗಿದೆ. ಗುಂಪಿನ ರಚನೆಯಲ್ಲಾಗುವ ಬದಲಾವಣೆ, ಅಥವಾ ಸ್ಥಳೀಯಾಡಳಿತ ಘಟಕಗಳು, ಕಾರ್ಮಿಕ ಸಂಘಟನೆಗಳು, ಕಾಲೇಜಿನ ಸಾಮಾಜಿಕ ಸಂಘಟನೆಗಳ ಸಂದರ್ಭದಗಳಲ್ಲಾಗುವ ಹೊಸ ಗುಂಪುಗಳ ಪುನಾರಚನೆ ಹೀಗೆ ವಿವಿಧ ಸಂದರ್ಭದಲ್ಲಾಗುವ ಬದಲಾವಣೆಗಳನ್ನು ಗಮನಿಸುವುದು ಈ ಅಧ್ಯಯನದ ಒಂದು ಪ್ರಮುಖ ಭಾಗವಾಗಿದೆ.

ಸಂವಹನದ ಮಾನವಕುಲ ಶಾಸ್ತ್ರದೊಳಗಡೆಯ ಪ್ರಮುಖ ಅಧ್ಯಯನ ಕ್ಷೇತ್ರವೆಂದರೆ ಮಾನವಕುಲ ಶಾಸ್ತ್ರೀಯ ಅರ್ಥವಿಜ್ಞಾನ. (ಕೆಲವರು ಇದನ್ನು ಪ್ರತ್ಯೇಕ ಕ್ಷೇತ್ರವೆಂದು ಪರಿಗಣಿಸುತ್ತಾರೆ.) ಸಾಮಾನ್ಯವಾಗಿ ಈ ಬಗೆಯ ಅಧ್ಯಯನಗಳು ವೈದ್ಯಕೀಯ ಅಥವಾ ಸಸ್ಯ ಶಾಸ್ತ್ರೀಯ ಪಾರಿಭಾಷಿಕಗಳಂತಹ ನಿರ್ದಿಷ್ಟ ಅರ್ಥವಿಜ್ಞಾನ ಕ್ಷೇತ್ರಗಳ ಮೇಲೆ ಬೆಳಕು ಚೆಲ್ಲುತ್ತವೆ. ಅದೇ ರೀತಿ ಅಲ್ಲಿ ಬಳಕೆಗೊಳ್ಳುವ ಪರಿಭಾಷೆಗಳಲ್ಲಿ ಅಡಕವಾಗಿರುವ ವರ್ಗೀಕರಣ ತತ್ವಗಳನ್ನೂ, ಆ ವರ್ಗೀಕರಣವು ಇತರ ಸಾಂಸ್ಕೃತಿಕ ಪ್ರವೃತ್ತಿಯ ಜತೆ ಹೇಗೆ ಸಂಬಂಧ ಹೊಂದಿರುತ್ತದೆಂಬುದನ್ನೂ ಪರೀಕ್ಷಿಸುತ್ತದೆ. ದಕ್ಷಿಣ ಭಾರತದಲ್ಲಿ ಈ ಮಾದರಿಯ ಕೆಲವು ಅಧ್ಯಯನಗಳು ನಡೆದಿವೆಯಾದರೂ ಅವು ಯಾವುವೂ ಇಂದು ಪ್ರಕಟಗೊಂಡ ರೂಪದಲ್ಲಿ ಲಭಿಸುತ್ತಿಲ್ಲ. ಕನ್ನಡದಲ್ಲಿ ವ್ಯಕ್ತಿ ವಿಷಯಕ ಉಲ್ಲೇಖ ಮತ್ತು ಸಂಬೋಧನ

ರೂಪಗಳಿಗೆ ಸಂಬಂಧಿಸಿದಂತೆ ಸೂಸಾನ್ ಬೀನ್ ಅವರು ಕೊಲಂಬಿಯಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧವು ಪ್ರಸ್ತುತ ಕ್ಷೇತ್ರದಲ್ಲಿ ಪ್ರತ್ಯಕ್ಷ ಕಥನ ಮತ್ತು ಪರೋಕ್ಷ ಕಥನಗಳಿಗಿರುವ ವ್ಯತ್ಯಾಸಗಳ ಕುರಿತು ಅಮೂಲ್ಯ ಮಾಹಿತಿಯನ್ನೊದಗಿಸುತ್ತದೆ. ಸ್ಟ್ಯಾನ್ಲಿ ರೀಗಲ್ಸನ್ ಅವರು ಕೊಲಂಬಿಯಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕನ್ನಡದ ಆಹಾರ ಪರಿಭಾಷೆಗಳಿಗೆ ಸಂಬಂಧಿಸಿದ ಮಹಾಪ್ರಬಂಧವು ಆಹಾರ ಸಂಬಂಧೀ ಪದಗಳನ್ನು ಮಾನವ ಕುಲಶಾಸ್ತ್ರದ ಹಿನ್ನೆಲೆಯಲ್ಲಿ ಪರಿಶೀಲಿಸುತ್ತದೆ.

೧೯೭೦ ರಲ್ಲಿ ತಮಿಳು, ಮಲಯಾಳಂ, ಮರಾಠಿ, ಹಿಂದಿ - ಉರ್ದು ಮತ್ತು ಭಾರತೀಯ ಇಂಗ್ಲಿಷ್ ಭಾಷೆಗಳ ಅರ್ಥರಚನೆಗೆ ಸಂಬಂಧಿಸಿದ ತೌಲನಿಕ ಅಧ್ಯಯನವು ಪ್ರಾರಂಭವಾಯಿತು. ಸಂಯುಕ್ತ ಸಂಸ್ಥಾನ (ಯು.ಎಸ್.)ದ ನ್ಯಾಷನಲ್ ಸೈನ್ಸ್ ಫೌಂಡೇಶನ್ ಪ್ರಾಯೋಜಿಸಿದ್ದ ಈ ಅಧ್ಯಯನವು ಆಹಾರ, ಕೃಷಿಕಾಮಗಾರಿ, ವ್ಯಕ್ತಿವಿಷಯಕ ಉಲ್ಲೇಖ ಹಾಗೂ ಗೌರವ - ಪ್ರತಿಷ್ಠೆಗಳ ಕ್ಷೇತ್ರಗಳ ಮೇಲೆ ಬೆಳಕು ಚೆಲ್ಲುತ್ತದೆ. ಅಧ್ಯಯನ ಕ್ಕೊಳಪಡಿಸಿದ ಭಾಷೆಗಳೊಳಗಿನ ಸಾಮ್ಯ ವ್ಯತ್ಯಾಸಗಳನ್ನು ಪರಿಶೀಲಿಸುವುದೇ ಇದರ ಉದ್ದೇಶವಾಗಿತ್ತು. ಈ ಯೋಜನೆಗಾಗಿ ಸಂಗ್ರಹಿಸಿದ ಸಾಮಗ್ರಿಗಳಲ್ಲಿ ಲಿಪೀಕರಿಸಿದ ಸಂಭಾಷಣೆಗಳು ಅಧಿಕ ಪ್ರಮಾಣದಲ್ಲಿವೆ. ಅವು ಆಯ್ಕೆ ಮಾಡಿದ ಅರ್ಥಕ್ಷೇತ್ರದ ಭಾಗವಾಗಿರುವ ಕೆಲಸಗಳು ಮತ್ತು ಭಾಷಾಭಿವ್ಯಕ್ತಿಗಳ ವಿಪುಲ ಉದಾಹರಣೆಗಳನ್ನೊ ದಗಿಸುತ್ತವೆ. ಮಾತ್ರವಲ್ಲದೆ, ಬದಲಾಗುವ ರಚನೆಯುಳ್ಳ ಸಾಮಾಜಿಕ ಗುಂಪುಗಳಲ್ಲಿನ ಪರಸ್ಪರ ಮಾತಿನ ಸಂಬಂಧದ ಕುರಿತಾಗಿರುವ ಅಪಾರ ಮಾಹಿತಿಗಳನ್ನೂ ಒಳಗೊಂಡಿವೆ. ಈ ಸಂಶೋಧನಾ ಫಲಿತಾಂಶದ ಸಾಮಾನ್ಯ ಅವಲೋಕನವು ಪೂರ್ಣಗೊಂಡಿದೆ.

ಸಾಮಾಜಿಕ ಬದಲಾವಣೆಯ ಅರ್ಥವಿಜ್ಞಾನ ಕ್ಷೇತ್ರವು ಇಂದು ಮಾನವ ಕುಲಶಾಸ್ತ್ರೀಯ ಅರ್ಥವಿಜ್ಞಾನದೊಳಗೆ ತನ್ನ ಪ್ರಾಮುಖ್ಯವನ್ನು ವರ್ಧಿಸಿಕೊಳ್ಳುತ್ತಿದೆ. ಇದು ಬದಲಾವಣೆಯ ಕುರಿತು ಮಾತನಾಡುವ, ಹೊಸ ಮತ್ತು ಹಳೆಯ ಅವ್ಯಯಗಳೊಳಗಿನ ವ್ಯತ್ಯಾಸಗಳನ್ನು ಸ್ಪಷ್ಟಪಡಿಸುವ, ಅದೇ ರೀತಿ ಬದಲಾವಣೆಯ ಕೊರತೆಯನ್ನು ಮರೆಮಾಚುವಂತೆ ಮಾತನಾಡುವ ವಿಧಾನಗಳನ್ನು ಒಳಗೊಂಡಿರುತ್ತದೆ. ಉದಾಹರಣೆ "ಹರಿಜನ" (ಪರಿಶಿಷ್ಟ ಜಾತಿ) ಎಂಬ ಪರಿಭಾಷೆಯು ಬದಲಾವಣೆಯ ಸಂಕೇತವಾಗಿದೆ. ಆದರೆ ಅಸ್ಪೃಶ್ಯರು ಇನ್ನೂ ಪೂರ್ಣವಾಗಿ ಬದಲಾಗದ ಸ್ಥಿತಿಯಿರುವ ಪ್ರದೇಶಗಳಲ್ಲಿ ಇಂತಹ ಪದಗಳ ಬಳಕೆಯು ಅಹಿತಕರ (ಅಪ್ರಿಯ) ಸತ್ಯವನ್ನು ಮರೆಮಾಚಲು ಸಹಕಾರಿಯಾಗುತ್ತದೆ. ಇಂತಹ ಪರಿಭಾಷೆಗಳನ್ನು ಸಮುಚ್ಚಯಾತ್ಮಕವಾಗಿ ಕಾಲಕಾಲಕ್ಕೆ ಆಗುತ್ತಿರುವ ಬದಲಾವಣೆಗಳ ಜತೆಗೆ ಅಧ್ಯಯನ ನಡೆಸಿದರೆ ಅದರಿಂದ ಬದಲಾವಣೆಯ ಪ್ರಕ್ರಿಯೆ ಮತ್ತು ಪ್ರವೃತ್ತಿಗಳನ್ನು ಕುರಿತ ನಮ್ಮ ತಿಳುವಳಿಕೆಗೆ ಗಮನಾರ್ಹ ಕೊಡುಗೆಯಾಗಬಹುದು.

## ಅನ್ವಯಗಳು

ಇಲ್ಲಿ ಚರ್ಚಿಸಿದ ಅನೇಕ ಸಂಗತಿಗಳು ಭಾಷಾಶಿಕ್ಷಣ, ವಯಸ್ಕರ ಸಾಕ್ಷರತಾ ಕಾರ್ಯಕ್ರಮ, ಹಾಗೂ ಸಮೂಹ ಸಂವಹನ ಮಾಧ್ಯಮದ ಆಯ್ಕೆಯಂತಹ ಪ್ರಾಯೋಗಿಕ

ವಿಷಯಗಳೊಂದಿಗೆ ವ್ಯವಸ್ಥಿತವಾದ ನೇರ ಸಂಬಂಧವನ್ನು ಹೊಂದಿವೆ. ಭಾಷಾ ಹಿನ್ನೆಲೆಯಲ್ಲಿಯ ವ್ಯತ್ಯಾಸಗಳು ನಿರ್ದಿಷ್ಟವಾಗಿ ಕೆಳಜಾತಿ ಅಥವಾ ಕೆಳವರ್ಗಗಳ ಮಕ್ಕಳಿಗಿರುವ ಶೈಕ್ಷಣಿಕ ತೊಂದರೆಗಳಿಂದಾಗಿ ಉಂಟಾಗುತ್ತವೆಂಬುದನ್ನು ಗಮನಿಸಲಾಗಿದೆ . ಅರ್ಥಪೂರ್ಣ ಪರಿಹಾರಗಳನ್ನು ಸೂಚಿಸುವ ಹಾಗಿದ್ದರೆ ಇಲ್ಲಿ ಹೇಳಲಾದ ಅಂಶಗಳನ್ನು ಮತ್ತು ಅವುಗಳ ಪ್ರಮಾಣಗಳನ್ನು ಗುರುತಿಸುವ ಕಾರ್ಯ ಆಗತ್ಯವೆನಿಸುತ್ತದೆ.ಮನೆಭಾಷೆ (ಮನೆಯ ಉಪಭಾಷೆ) ಯಲ್ಲಿನ ವ್ಯ ತ್ಯಾಸಗಳು ಇದರ ಒಂದು ಭಾಗವೆಂಬುದು ಶತಸ್ಸಿದ್ಧ. ಭಾಷಾ ಬಳಕೆಯ ಕಡೆಗಿನ - ವಿಶೇಷವಾಗಿ ಕೆಲವು ವಿಶಿಷ್ಟ ಸಂದರ್ಭಗಳಲ್ಲಿ "ಸರಿಯಾದ" ಭಾಷೆಯನ್ನು ಬಳಸುವ ಆವಶ್ಯಕತೆಯ ಕಡೆಗಿನ ಪ್ರವೃತ್ತಿಯು ಕೆಲವು ಸಮಸ್ಯೆಗಳನ್ನು ಸೃಷ್ಟಿಸಬಹುದಾದ ಸಾಧ್ಯತೆಯಿದೆ. ಅಷ್ಟು ಮಾತ್ರವಲ್ಲದೆ ಪ್ರವೃತ್ತಿಗಳು ಮತ್ತು ನಿರೀಕ್ಷೆಗಳು ಶಿಕ್ಷಕರ ಭಾಗವಾಗಿ ಪ್ರವೇಶಿಸಬಹುದು.

"ಸೇವಕ ವರ್ಗ"ದ (ಹರಿಜನ) ಮಕ್ಕಳು ಮೊದಲ ಬಾರಿಗೆ ಶಾಲೆಗೆ ಬಂದಾಗ ಅತ್ಯಂತ ಸರಳವಾದ ಕೆಲವು ಶಬ್ದಗಳೂ ಅವರಿಗೆ ಗೊತ್ತಿರಲಿಲ್ಲವೆಂದು ಮದರಾಸು ನಗರದ ಶಾಲಾ ಶಿಕ್ಷಕರು ಹೇಳುತ್ತಿದ್ದರು. ಅಧ್ಯಾಪಕರ ಮಾತಿನಲ್ಲೇ ಹೇಳುವುದಾದರೆ ಅವರಿಗೆ. 'ಉಕ್ಕಾರ್' (ಕುಳಿತು ಕೊ) ಎಂಬ ಪದದ ಅರ್ಥವೇ ಗೊತ್ತಿರಲಿಲ್ಲ. ನಾವವರಿಗೆ, ಕುಂಡು" ( ಚಕ್ಕಳ ಬಕ್ಕಳ ಕುಳಿತುಕೊ) ಎಂದು ಹೇಳಬೇಕಾಗುತ್ತಿತ್ತು. ದಕ್ಷಿಣ ಏಷಿಯಾದ ಎಲ್ಲೆಡೆ ಇಂತಹ ವ್ಯತ್ಯಾಸಗಳು ಕಂಡುಬರುತ್ತವೆ. ಅಧ್ಯಾಪಕರು ಇಂತಹ ಮಕ್ಕಳನ್ನು ಯಾವುದೇ ಪೂರ್ವಾಗ್ರಹ ಗಳಿಲ್ಲದೆ ಒಪ್ಪಿಕೊಂಡು, ಅವರ ಬಗ್ಗೆ ವಿಶೇಷ ಗಮನ ಹರಿಸಲು ಸಿದ್ಧರಿದ್ದರೂ ಅಂತಹ ಕೆಲಸಗಳಿಗೆ ಅಗತ್ಯವೆನಿಸುವ ತರಬೇತಿಯನ್ನು ಅವರು ಪಡೆದಿರುತ್ತಿರಲಿಲ್ಲ. ಈ ಮಕ್ಕಳ ಉಪಭಾಷೆ ಮತ್ತು ಶಾಲೆಗಳಲ್ಲಿ ಕಲಿಸಲಾಗುವ ಭಾಷೆಗಳೊಳಗಿನ ವ್ಯತ್ಯಾಸಗಳ ಬಗೆಗೆ ವ್ಯವಸ್ಥಿತವಾದ ಅಧ್ಯಯನಗಳು ನಡೆದಿಲ್ಲ. ಅದೇ ರೀತಿ ಇಂತಹ ವ್ಯತ್ಯಾಸಗಳ ಜತೆ ವ್ಯವಹರಿಸಲು ಬೇಕಾದ ತರಬೇತಿಯನ್ನೂ ಶಿಕ್ಷಕರಿಗೆ ನೀಡಲಾಗಿಲ್ಲ. ಈ ವ್ಯತ್ಯಾಸಗಳ ಮೂಲಭೂತ ಅಧ್ಯಯನವು ಪ್ರಾಯೋಗಿಕ ಮಹತ್ವವನ್ನು ಹೊಂದಿದೆ.

ಭಾಷಾ ಸಾಮರ್ಥ್ಯವನ್ನು ಸಂಪಾದಿಸಿಕೊಳ್ಳುವ ಪ್ರಶ್ನೆಗೆ ಸಂಬಂಧಿಸಿದ ಹೆಚ್ಚುವರಿ ಅಂಶವೊಂದನ್ನು ಮೇಲೆ ಪ್ರಸ್ತಾಪಿಸಲಾಗಿದೆ. ಔಪಚಾರಿಕ ತರಬೇತಿ ಮತ್ತು ಇತರ ಪ್ರದರ್ಶನಾವಕಾಶಗಳ ಸಾಂಬಂಧಿಕ ಮಹತ್ವಗಳ ತಿಳುವಳಿಕೆಯು ಪ್ರಾಥಮಿಕ ಭಾಷಾ ಶಿಕ್ಷಣವನ್ನು ಯೋಜಿನೆಸುವಲ್ಲಿ ಮಹತ್ವದ ಪಾತ್ರ ವಹಿಸಬಹುದು. ಕೆಲವು ಸಂಶೋಧಕರು ಗಮನಿಸಿದಂತೆ ಭಾಷಾ ಸಾಮರ್ಥ್ಯವನ್ನು ಸಾಗಿಸುವಲ್ಲಿ ಅನೌಪಚಾರಿಕ ಪ್ರದರ್ಶನಾವಕಾಶಗಳ ಪಾತ್ರವೂ ಮಹತ್ತರವಾದುದು. ಹಾಗಾದಲ್ಲಿ ಶಿಕ್ಷಣ ಪ್ರಕ್ರಿಯೆಯೊಳಗಡೆ ಸಮಾನ ಗುಂಪುಗಳೊಳಗಿನ ಪರಸ್ಪರ ಅನೌಪಚಾರಿಕ ಸಂಬಂಧಗಳನ್ನು ಪರಿಚಯಿಸಲು ಬೇಕಾದ ವಿಧಾನಗಳನ್ನು ಅಧಿಕ ಪ್ರಮಾಣದಲ್ಲಿ ಅಳವಡಿಸಿದರೆ ಅದೊಂದು ಮಾಡಿನೋಡಲೇ ಬೇಕಾದ (ಮೌಲಿಕ) ಪ್ರಯೋಗವೆನಿಸಬಹುದು.

ಶಾಲೆಗಳಲ್ಲಿ ಕಲಿಸಲಾಗುವ ಪ್ರಾದೇಶಿಕ ಭಾಷೆಯ ಶಿಷ್ಟ ರೂಪ ಮತ್ತು ದೈನಂದಿನ ವ್ಯಾವಹಾರಿಕ ಪ್ರಭೇದಗಳೊಳಗಿನ ಕಂದಕವೇ ಭಾಷೆಯನ್ನು ಕಲಿಯುವಲ್ಲಿ ವಿದ್ಯಾರ್ಥಿಗಳೆದುರಿಸುವ ಕಷ್ಟ- ಸಮಸ್ಯೆಗಳಿಗೆ ಕಾರಣವೆಂದು ಆಗಾಗ ದೂಷಿಸಲಾಗುತ್ತದೆ. ಈ ಶಿಷ್ಟ ರೂಪಗಳು ಸಾಮಾನ್ಯವಾಗಿ ಹೆಚ್ಚು ಸಂಸ್ಕೃತೀಕರಣ ಗೊಂಡಿರುತ್ತವೆ. (ಅಥವಾ ತಮಿಳಿನಂತೆ ಅತಿ ಶಾಸ್ತ್ರಬದ್ಧವಾಗಿರುತ್ತವೆ.)` ಅವುಗಳು ವಿವಿಧ ಸಾಂಪ್ರದಾಯಿಕ ವಾದಗಳ ಬೆಂಬಲವನ್ನು ಪಡೆದಿರುತ್ತವೆ. ಅದೇ ರೀತಿ ಪ್ರಾದೇಶಿಕ ಮತ್ತು ಸಾಮಾಜಿಕ ವ್ಯತ್ಯಾಸಗಳಿಂದಾಗಿ ಸಾಮಾನ್ಯ ಆಡುಭಾಷೆಗೆ ಹತ್ತಿರವಾಗಿರುವ ಯಾವುದೇ ಭಾಷಾ ಪ್ರಭೇದವೂ ಇಡಿಯ ಭಾಷಾಪ್ರದೇಶದಲ್ಲಿ ಚಲಾವಣೆಯಲ್ಲಿರುವುದಿಲ್ಲ ಎಂಬುದಾಗಿಯೂ ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಮೇಲೆ ಪ್ರಸ್ತಾವಿಸಿದಂತೆ ಆಂಗ್ಲೀಕರಣದಂತಹ ನಗರ ಭಾಷೆಯ ಲಕ್ಷಣಗಳನ್ನು ಆಳವಡಿಸಿಕೊಳ್ಳುವ ಪ್ರವೃತ್ತಿಯ ಕಾರಣದಿಂದಾಲಾಗಿ ಈ ಭಾವನೆಯು ವಾಸ್ತವವಾಗಿ ನಿಜವೆನ್ನಲಾಗದು. ಹಾಗಾಗಿ ಒಂದು ಶಿಷ್ಟ ಗ್ರಾಮ್ಯ ರೂಪವು ಹಲವು ಭಾಷಾ ಪ್ರದೇಶಗಳಲ್ಲಿ ಮಧ್ಯಮ ವರ್ಗದ ನಗರವಾಸಿಗಳ ನಡುವೆ ಸ್ವಾಭಾವಿಕವಾಗಿ ವಿಕಸಿಸಬಹು ದಾಗಿದೆ. ಇದು ಇಡಿಯ ಪ್ರದೇಶಕ್ಕೆ ಅನ್ವಯವಾಗಿ ಕಾರ್ಯಪ್ರವೃತ್ತವಾಗುತ್ತದೆ. ಈ ರೀತಿಯ ಶಿಷ್ಟ ರೂಪಗಳು ಯಾವ ಪ್ರಮಾಣದಲ್ಲಿ ತಲೆದೋರುತ್ತವೆ ? ಮತ್ತು ಅವುಗಳ ಭಾಷಾ ವೈಜ್ಞಾನಿಕ ಲಕ್ಷಣಗಳೇನು? ಎಂಬ ಬಗ್ಗೆ ಮೌಲಿಕ ಅಧ್ಯಯನ ನಡೆಯಬೇಕಾಗಿದೆ.

**ಅನುಬಂಧ**

ಇಲ್ಲಿ ಕೊಡಲಾದ ಉಲ್ಲೇಖಗಳು ಮೇಲಿನ ನನ್ನ ಪ್ರಬಂಧವನ್ನು ಸಲ್ಲಿಸುವ ಮುನ್ನ ಪರಿಶೀಲಿಸಲಾಗದ ಮಾಹಿತಿಗಳಾಗಿವೆ. ಇವುಗಳನ್ನು ೧೯೭೧ರಲ್ಲಿ ತಿರುವನಂತಪುರದಲ್ಲಿ ನಡೆದ ದ್ರಾವಿಡ ಭಾಷಾ ವಿಜ್ಞಾನ ಸಮ್ಮೇಳನದ ನಡಾವಳಿಗಳಿಂದ ಮತ್ತು ೧೯೭೨ರ ಜನವರಿಯಲ್ಲಿ ಪ್ರಕಟಣೆಯನ್ನು ಪ್ರಾರಂಭಿಸಿದ "ಇಂಟರ್ ನ್ಯಾಷನಲ್ ಜರ್ನಲ್ ಆಫ್ ಡ್ರವೀಡಿಯನ್ ಲಿಂಗ್ವಿಸ್ಟಿಕ್ಸ್"ನ ಮೊದಲೆರಡು ಸಂಚಿಕೆಗಳಿಂದ ಎತ್ತಿಕೊಳ್ಳಲಾಗಿದೆ.

ಬಿ.ಗೋಪಿನಾಥನ್ ನಾಯರ್ ಅವರು ಕೇರಳದ ಉಪಭಾಷಾ ಸರ್ವೇಕ್ಷಣೆಯ ಕೆಲಸಗಳನ್ನಾಧರಿಸಿ, ಅಲ್ಲಿಯ ಸಾಮಾಜಿಕ ಉಪಭಾಷೆಗಳ ಅಧ್ಯಯನ ನಡೆಸಿದ್ದಾರೆ. ಇದು ಧ್ವನಿಮಾ, ಆಕೃತಿಮಾ ಹಾಗೂ ಶಬ್ದವ್ಯತ್ಯಾಸಗಳಿಗೆ ಸಂಬಂಧಿಸಿದ ಪ್ರಾಥಮಿಕ ಚರ್ಚೆಗಳನ್ನಷ್ಟೆ ಹೊಂದಿದೆಯಾದರೂ ತುಂಬಾ ಪಯೋಜನಕಾರಿಯಾಗಿದೆ. ಇಲ್ಲಿ ಗ್ರಾಂಥಿಕ (ಉಪ) ಭಾಷೆ, ಬ್ರಾಹ್ಮಣ (ಉಪ) ಭಾಷೆ, ಈಳವ (ಉಪ) ಭಾಷೆ, ನಾಯರ್ (ಉಪ) ಭಾಷೆ, ಹರಿಜನ (ಉಪ) ಭಾಷೆ, ಕ್ರೈಸ್ತ (ಉಪ) ಭಾಷೆ , ಮತ್ತು ಮುಸ್ಲಿಂ (ಉಪ) ಭಾಷೆ ಎಂಬ ಭಾಷಾ ಪ್ರಭೇದಗಳನ್ನು ತೌಲನಿಕವಾಗಿ ಪರಿಭಾವಿಸಲಾಗಿದೆ. ಕೊನೆಯಲ್ಲಿ ಹೆಸರಿಸಿದ ಉಪಭಾಷೆಯು "ಹೆಚ್ಚು ದಾರಿ ತಪ್ಪಿಹೋಗಿದೆ" ಎಂಬ ನಿರ್ಣಯ ಪ್ರಸ್ತುತ ಪ್ರಬಂಧದ್ದಾಗಿದೆ. ಇಲ್ಲಿ ನೀಡಲಾದ ಸಾಮಗ್ರಿಗಳು ತುಂಬ ಕುತೂಹಲಕಾರಿ (ಆಸಕ್ತಿದಾಯಕ)ಯಾಗಿದ್ದರೂ ಅಧ್ಯಯನಕ್ಕೆ ಬಳಸಿಕೊಳ್ಳಲಾದ ಸಮೀಪನದ ಬಗ್ಗೆ ಮಾತ್ರ ಅನೇಕ ಆಕ್ಷೇಪಗಳನ್ನು

ಎತ್ತಬಹುದಾಗಿದೆ. ಹಾಗಿದ್ದರೂ ಜಾತಿಯ ಜತೆಗೆ ಇತರ ಸಾಮಾಜಿಕ ವ್ಯತ್ಯಾಸಗಳನ್ನು ನಿಯಂತ್ರಿಸುವ ಯಾವುದೇ ಪ್ರಯತ್ನಗಳು ನಡೆದ ಬಗ್ಗೆ ಇಲ್ಲಿ ಸಾಕ್ಷ್ಯಾಧಾರಗಳಿಲ್ಲ. ಜಾತಿ (ಉಪ) ಭಾಷೆಗಳು ಅಸ್ತಿತ್ವದಲ್ಲಿವೆಯೆಂಬ ಗ್ರಹಿಕೆಯಿಂದ ಪ್ರಸ್ತುತ ಅಧ್ಯಯನ ಮೊದಲುಗೊಂಡಿದೆ ಎಂಬ ಸಂಹೇಹ ಕೊನೆಗೂ ಇಲ್ಲಿ ಹಾಗೆಯೇ ಉಳಿದುಬಿಡುತ್ತದೆ. ಅದಕ್ಕನುಗುಣವಾಗಿ ಆಯಾ ಜಾತಿಭಾಷೆಗಳನ್ನು ಪ್ರತಿನಿಧಿಗಳೆಂಬಂತೆ ಪ್ರತಿಯೊಂದು ಜಾತಿಗೆ ಸೇರಿದ ವ್ಯಕ್ತಿಗಳ ಭಾಷೆಗಳನ್ನು ಇಲ್ಲಿ ಎತ್ತಿಕೊಳ್ಳಲಾಗಿದೆ. ಒಂದೇ ತೆರನಾದ (ಸಮಾನ ) ಗುಂಪುಗಳೆನಿಸಿಕೊಳ್ಳುವುದಕ್ಕೆ ಬಹಳ ದೂರದಲ್ಲಿರುವ ಹರಿಜನರು ಮತ್ತು ಕ್ರೈಸ್ತರ ಸಂದರ್ಭಗಳಲ್ಲಿ ಇಡೀ ಗುಂಪಿಗೆ ಏಕಮಾತ್ರ ಉಪಭಾಷೆಯೆಂಬ ಗ್ರಹಿಕೆಯನ್ನು ಖಂಡಿತವಾಗಿಯೂ ಒಪ್ಪಲಾಗದು. ಇದಲ್ಲದೆ ಇಲ್ಲಿ ನೀಡಲಾದ ಪುರಾವೆಯು ಬ್ರಾಹ್ಮಣ ಮತ್ತು ನಾಯರರಂತಹ ಮೇಲ್ಜಾತಿ ಭಾಷೆಯ ಮಾದರಿಗಳಾಗಿವೆ. ಅವು ಸುಶಿಕ್ಷಿತ ಭಾಷೆಯ ಔಪಚಾರಿಕ ಶೈಲಿಗಷ್ಟೇ ಸೀಮಿತವಾಗಿರುತ್ತವೆ. ಹಾಗಾಗಿ ಈ ಉಪಭಾಷೆಗಳ ಮತ್ತು ಇತರ ರೂಪಗಳೊಳಗಿನ ವ್ಯತ್ಯಾಸಗಳನ್ನು ಉತ್ಪ್ರೇಕ್ಷೆ ಮಾಡಲಾಗಿದೆ.

ಮಲಬಾರಿನಿಂದ ದಕ್ಷಿಣ ಕನ್ನಡಕ್ಕೆ ವಲಸೆ ಬಂದ ಮುಸ್ಲಿಮರ ಬಗ್ಗೆ ಸುಶೀಲಾ ಪಿ. ಉಪಾಧ್ಯಾಯರು ನಡೆಸಿದ ಅಧ್ಯಯನವು ತುಂಬ ಅಗತ್ಯವಾದ ಮಾಹಿತಿಗಳನ್ನೊದಗಿಸುತ್ತದೆ. ಈ ಪ್ರದೇಶದ ಮುಸ್ಲಿಮರ ಭಾಷೆಯ ಮೇಲೆ ತುಳುವಿನ ಪ್ರಭಾವವಾಗಿರುವುದನ್ನು ಅವರು ವಿಶೇಷವಾಗಿ ಗುರುತಿಸುತ್ತಾರೆ. ಎಂ. ಷಣ್ಮುಖಂ ಪಿಳ್ಳೈ ಯವರು ತಮಿಳು ಸಂಬೋಧನಾ ರೂಪಗಳ ಕುರಿತು ಸಿದ್ಧಪಡಿಸಿರುವ ಪ್ರಬಂಧವು ಸಂಬೋಧನಾ ಪದಗಳ ಬಳಕೆ, ಇತರ ವ್ಯಕ್ತಿವಿಷಯಕ ಪ್ರವೃತ್ತಿ ರೂಪಗಳೊಂದಿಗೆ ಅವುಗಳ ಸಂಬಂಧ, ಹಾಗೂ ನಿಷಿದ್ಧ ರೂಪ (ಉದಾ: ಮಹಿಳೆಯ ಗಂಡನ ಹೆಸರು)ಗಳ ಬದಲಿಗೆ ಬಳಸುವ ಪರ್ಯಾಯರೂಪಗಳು ಇತ್ಯಾದಿಗಳ ಬಗೆಗೆ ಮೌಲಿಕವೂ, ಕುತೂಹಲಕರವೂ ಆದ ಹೊಸ ಮಾಹಿತಿಗಳ ನ್ನೊದಗಿಸುತ್ತದೆ. ಇಲ್ಲಿ ಪ್ರಸ್ತುತವೆನಿಸಬಹುದಾದ ಇತರ ಕೃತಿಗಳಲ್ಲಿ ತಮಿಳು, ಮಲಯಾಳಂ ದ್ವಿಭಾಷಿಕತೆಯನ್ನು ಕುರಿತ ಆರ್.ಸೊಲಮನ್ ಅವರ ಅಧ್ಯಯನ, ಭಾಷಾ ಸಂಪರ್ಕದ ಬಗೆಗಿನ ಟಿ.ಎಲಿಳರೆಂಕೋವ ಅವರ ಅಧ್ಯಯನ ಹಾಗೂ ದ್ರಾವಿಡದ ಪ್ರಾದೇಶಿಕ ಉಪಭಾಷೆಗಳ ಕುರಿತು ನಡೆದ ಅಸಂಖ್ಯ ಅಧ್ಯಯನಗಳು (ವಿಶೇಷವಾಗಿ ಸಿ.ಇಸಾಕ್ಸ್, ಯು.ಪಿ.ಉಪಾಧ್ಯಾಯ, ಪಿ.ಎಸ್.ನಾಯರ್, ಎಂ.ವಿ.ಶ್ರೀಧರ್, ಎಲ್.ಕೋಶಿ, ಕೆ.ಅರ್.ಸಾವಿತ್ರಿ, ಜೆ.ನೀತಿವನನ್ ಮತ್ತು ಆರ್.ವಿ.ಕೆ.ತಂಬುರಾನ್ ಮೊದಲಾದವರ ಪ್ರಬಂಧಗಳು) ಸೇರುತ್ತವೆ.*

## ಟಿಪ್ಪಣಿಗಳು

೧. ಇವುಗಳಿಗೆ ಉದಾಹರಣೆಗಳನ್ನು ಕೊಡುತ್ತಿದ್ದರೆ ಭಿನ್ನತೆಗಳು ಇನ್ನಷ್ಟು ಸ್ಪಷ್ಟವಾಗುತ್ತಿದ್ದವು.

೨. ಇಲ್ಲಿ locative suffixes (ಸಪ್ತಮೀ ವಿಭಕ್ತಿ ಪ್ರತ್ಯಯ) ಎಂದರೂ ಆತ ಕೊಡುವ ಉದಾಹರಣೆಗಳು

ಚತುರ್ಥೀ ವಿಭಕ್ತಿ ಪ್ರತ್ಯಯಗಳಿಗೆ ಸರಿಹೊಂದುತ್ತವೆ. ಹಾಗೂ ಇಲ್ಲಿಯ ಮಾಹಿತಿಯಲ್ಲಿ ಸ್ವಲ್ಪ ಗೊಂದಲವಿದ್ದಂತಿದೆ.

೩. ಆದರೆ ಇಲ್ಲಿ ಹೇಳಿದುದಕ್ಕಿಂತ ತೀರಾ ಭಿನ್ನವಾದ ವ್ಯವಸ್ಥೆಯನ್ನು ನಾವಿಂದು ತುಳು ಭಾಷೆಯಲ್ಲಿ ಕಾಣುತ್ತೇವೆ. ಬ್ರಾಹ್ಮಣೇತರ ತುಳುವಿನ ಷಷ್ಠೀ ವಿಭಕ್ತಿ ಪ್ರತ್ಯಯವು ಅಚೇತನ ವಸ್ತುಗಳ ಸಂದರ್ಭದಲ್ಲಿ 'ತ'/'ದ' ಆಗಿದ್ದರೆ ಚೇತನ ವಸ್ತುಗಳ ಸಂದರ್ಭದಲ್ಲಿ 'ನ' ಎಂದಾಗಿರುತ್ತದೆ. ಅದೇ ರೀತಿ ಬ್ರಾಹ್ಮಣ ತುಳುವಿನಲ್ಲಿ ಅಚೇತನ ವಸ್ತುಗಳಿಗೆ 'ನ್ತ' ಎಂಬ ಪ್ರತ್ಯಯವಿದ್ದರೆ ಚೇತನಾ ವಸ್ತುಗಳಿಗೆ 'ನೊ' ಎಂಬ ಪ್ರತ್ಯಯವಿದೆ ಹಾಗಾಗಿ ಪ್ರಸ್ತುತ ಲೇಖನದಲ್ಲಿಯ ಮಾಹಿತಿಗಳಿಗೆ ಸಾಕಷ್ಟು ಮಿತಿಗಳಿವೆ ಎನ್ನಬೇಕಾಗುತ್ತದೆ.

೪. ಇಲ್ಲಿ ನಾನು ಎಂದರೆ ಮೂಲ ಲೇಖಕರು.

೫. ಇಲ್ಲಿ ನನ್ನ ಎಂದರೆ ಮೂಲ ಲೇಖಕರ ಎಂದರ್ಥ.

ಇದು ಬರ್ಟನ್ ಸ್ಟೈಯಿನ್ ಸಂಪಾದಿಸಿರುವ 'ಎಸ್ಸೇಸ್ ಆನ್ ಸೌತ್ ಇಂಡಿಯಾ' ಎಂಬ ಸಂಕಲನದಿಂದ ಆಯ್ದ ಲೇಖನವಾಗಿದೆ. ಪ್ರಸ್ತುತ ಕೃತಿಯು ೧೯೭೫ರಲ್ಲಿ ಹವಾಯಿ ವಿಶ್ವವಿದ್ಯಾಲಯ ದಿಂದ ಪ್ರಕಟವಾಯಿತು. ಹಾಗಾಗಿ ಈ ಲೇಖನವು ಸುಮಾರು ೨೫ ವರ್ಷಗಳಷ್ಟು ಹಳೆಯದೆನ್ನಬಹುದು. ಆನಂತರದ ೨೫ ವರ್ಷಗಳ ಅವಧಿಯಲ್ಲಿ ದಕ್ಷಿಣ ಭಾರತಕ್ಕೆ ಸಂಬಂಧಪಟ್ಟಂತೆ ಸಮಾಜೋಭಾಷಿಕ ಅಧ್ಯಯನವು ವಿಪುಲವಾಗಿ ನಡೆದಿದೆಯಾದರೂ, ತತ್ಸಂಬಂಧವಾಗಿ ಕನ್ನಡದಲ್ಲಿ ಬಂದ ಅಧ್ಯಯನ ಕೃತಿಗಳು ಕಡಿಮೆಯೆನ್ನಬಹುದು. ಎಪ್ಪತ್ತರ ದಶಕದಲ್ಲಿ, ಆಗಿನ್ನೂ ಶೈಶವಾವಸ್ಥೆಯಲ್ಲಿದ್ದ ಈ ಭಾಗದ ಸಮಾಜೋಭಾಷಿಕ ಅಧ್ಯಯನದ ಸ್ಥಿತಿಗತಿಯನ್ನರಿಯಲು ಪ್ರಸ್ತುತ ಲೇಖನವು ತುಂಬಾ ಸಹಕಾರಿಯಾಗಿದೆ. ದಕ್ಷಿಣ ಏಷಿಯಾ- ದಕ್ಷಿಣ ಭಾರತ- ದ್ರಾವಿಡ ಎಂಬೀ ಪರಿಭಾಷೆ ಪರಿಕಲ್ಪನೆಗಳ ದೃಷ್ಟಿಯಿಂದಲೂ ಈ ಪ್ರಬಂಧವು ನಮ್ಮ ಗಮನವನ್ನು ಸೆಳೆಯುತ್ತದೆ. ಸಮಾಜೋಭಾಷಿಕ ಅಧ್ಯಯನದ ದೃಷ್ಟಿಯಿಂದ ಮಹಾರಾಷ್ಟ್ರವನ್ನೂ ದಕ್ಷಿಣ ಭಾರತದ ವ್ಯಾಪ್ತಿಯೊಳಗಡೆ ಸೇರಿಸಬಹುದಾದ ಸಾಧ್ಯತೆಯೂ ಇಲ್ಲಿ ಪ್ರಸ್ತಾಪಿತವಾಗಿದೆ.

ಪ್ರಬಂಧದ ಶೀರ್ಷಿಕೆಯೇ ಹೇಳುವಂತೆ ಇದು ದಕ್ಷಿಣ ಭಾರತದಲ್ಲಿ ಆ ಕಾಲಕ್ಕೆ ನಡೆದ ನಡೆಯುತ್ತಿದ್ದ ಸಮಾಜೋಭಾಷಿಕ ಅಧ್ಯಯನಗಳ ಸಮೀಕ್ಷೆ. ಹಾಗೆಂದು ಇದು ಬರಿಯ ಸಮೀಕ್ಷೆ ಮಾತ್ರವಾಗಿರದೆ, ಅಲ್ಲಲ್ಲಿ ಸಮೀಕ್ಷಕರ ವಿಮರ್ಶಾತ್ಮಕ ಟಿಪ್ಪಣಿಗಳನ್ನೂ ಒಳಗೊಂಡಿದೆ. ಪ್ರಾದೇಶಿಕ ಉಪಭಾಷೆಗಳ ಅಧ್ಯಯನ, ಸಾಮಾಜಿಕ ಉಪಭಾಷೆಗಳ ಅಧ್ಯಯನ, ಕ್ರಿಯಾತ್ಮಕ ಭಾಷಾ ವ್ಯತ್ಯಾಸಗಳ ಅಧ್ಯಯನ, ದ್ವಿಸ್ತರತೆ, ದ್ವಿಭಾಷಿಕತೆ, ಬಹುಭಾಷಿಕತೆಗಳ ಅಧ್ಯಯನ, ಭಾಷೆಯ ಚಾರಿತ್ರಿಕ ಅಧ್ಯಯನ, ಸಂವಹನದ ಮಾನವಕಾಲ ಶಾಸ್ತ್ರೀಯ ಅಧ್ಯಯನ ಇತ್ಯಾದಿ ಅಂಶಗಳನ್ನು ಇಲ್ಲಿ ಸಮಾಜೋಭಾಷಿಕ ಅಧ್ಯಯನದೊಳಗಡೆ ಸಮಾವೇಶಗೊಳಿಸಲಾಗಿದೆ. ದ್ರಾವಿಡ ಭಾಷೆಗಳಾದ ತಮಿಳು, ಕನ್ನಡ, ಮಲಯಾಳಂ, ತೆಲುಗು, ತುಳುಗಳ ಜತೆಗೆ ದಕ್ಷಿಣ ಭಾರತದ ಭಾಷೆಯಾದ ಮರಾಠಿಯ ಬಗೆಗೆ ನಡೆದ ಅಧ್ಯಯನವನ್ನೂ ಇಲ್ಲಿ ಅವಲೋಕಿಸಲಾಗಿದೆ. ಸಾಂದರ್ಭಿಕವಾಗಿ ಕೊಂಕಣಿ, ಬೆಂಗಾಲಿ, ಸೌರಾಷ್ಟ್ರಿ, ಉರ್ದು, ಹಿಂದಿ ಭಾಷೆಗಳ ಕುರಿತೂ ಪ್ರಸ್ತಾಪಿಸಲಾಗಿದೆ. ದ್ರಾವಿಡ ಭಾಷೆಗಳ ಮೇಲಾದ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳ ಪ್ರಭಾವವನ್ನು ಗುರುತಿಸಲಾಗಿದೆ.

ಈ ಎಲ್ಲಾ ಗಮನಾರ್ಹ ಅಂಶಗಳ ನಡುವೆಯೂ ಅದರದ್ದೇ ಆದ ಮಿತಿಗಳೂ ಪ್ರಸ್ತುತ ಪ್ರಬಂಧದಲ್ಲಿವೆ. ಅವು ಸಂಬಂಧಪಟ್ಟ ಭಾಷಾಪ್ರಯೋಗ ಉದಾಹರಣೆಗಳ ಕೊರತೆಯಿರಬಹುದು. ಅಥವಾ ಮಾಹಿತಿಗಳಲ್ಲಿನ ದೋಷವಿರಬಹುದು. ಅಂಥವುಗಳಲ್ಲಿ ಕೆಲವನ್ನು ಅಲ್ಲಲ್ಲಿ ಅಡಿಟಿಪ್ಪಣಿಯಲ್ಲಿ ಉಲ್ಲೇಖಿಸಲಾಗಿದೆ. ವಿದೇಶೀ ವಿದ್ವಾಂಸರೊಬ್ಬರು ಭಾರತೀಯ ಭಾಷೆ- ಸಂಸ್ಕೃತಿಯನ್ನು ಅಧ್ಯಯನ ನಡೆಸುವ ಸಂದರ್ಭದಲ್ಲಿ ಇಂತಹ ಕೆಲವು ಲೋಪ ದೋಷಗಳು ಕಾಣಿಸಿಕೊಳ್ಳುವುದು ಸಹಜವೆನ್ನಬಹುದು. ಅವೇನೇ ಇದ್ದರೂ ದಕ್ಷಿಣ ಭಾರತದ ಅಧ್ಯಯನಕ್ಕೆ ಸಂಬಂಧಿಸಿದ ಪ್ರಾರಂಭಿಕ ಬರವಣಿಗೆಗಳಲ್ಲೊಂದಾಗಿ ಇದು ಮಹತ್ವವನ್ನು ಪಡೆದುಕೊಳ್ಳುತ್ತದೆ.

ಅನುವಾದಕ

೧೦

# ಫಾಹಿಯಾನನು ಕಂಡ ದಕ್ಷಿಣ ಸಾಮ್ರಾಜ್ಯ

## ಇಂಗ್ಲಿಶ್ ಮೂಲ : ಥೋಮಸ್ ಫೋಕಸ್
## ಅನುವಾದ : ಡಾ. ಮಾಧವ ಪೆರಾಜೆ

೧

ಫಾಹಿಯಾನನು ಮೂಲತಃ ಉತ್ತರ ಭಾರತದಿಂದ ಶ್ರೀಲಂಕಾಕ್ಕೆ ಹೋಗುವ ಮಾರ್ಗ ಮಧ್ಯೆ ದಕ್ಷಿಣ ಭಾರತದ ಮೇಲೆ ಹಾದುಹೋಗುತ್ತಾನೆ. ಹಾಗೆ ಹೋಗುವಾಗ, ಆತನಿಗೆ ತಾನು ಕ್ರಮಿಸುವ ಪ್ರದೇಶದ ಬಗೆಗೆ ಕಾರಣಾಂತರದಿಂದ ಹೇಳಬೇಕಾಗಿ ಬಂತು. ಆತನು ತನ್ನ ಪ್ರಯಾಣಾವಧಿಯಲ್ಲಿ ಕಲೆ ಹಾಕಿರುವ ಸಂಕ್ಷಿಪ್ತ ಮಾಹಿತಿಗಳು ತುಂಬ ಕುತೂಹಲಕಾರಿಯಾದುವು. ಹಾಗೆಯೇ, ಅಂತಹ ಪ್ರಸ್ತಾಪಗಳ ಮೂಲಕ ಕ್ರಿಸ್ತಶಕ ಆರಂಭ ಕಾಲದ ದಕ್ಷಿಣ ಭಾರತವನ್ನು ಪರಿಕಲ್ಪಿಸುವುದಕ್ಕೆ ವಿಫುಲ ಅವಕಾಶಗಳಿವೆ ಎಂದೂ ನನಗನಿಸಿದೆ.

ಫಾಹಿಯಾನನು ಹೀಗೆ ಮುಂದುವರಿಸುತ್ತಾನೆ: "ದಕ್ಷಿಣದಿಂದ ಎರಡು ಯೋಯಾನ್ (Yeoyyan) ದೂರದಲ್ಲಿ ಥಾ-ತ್ಸೆನ್ ಎಂಬ ಸಾಮ್ರಾಜ್ಯವಿದೆ" ಹೀಗೆ ಹೇಳುತ್ತ ಅದಕ್ಕೆ ಸಂಬಂಧಿಸಿದ ಎರಡು ಅಥವ ಮೂರು ಸಂದರ್ಭಗಳನ್ನು ಆತ ವಿವರಿಸುತ್ತಾನೆ. ಪ್ರಸ್ತುತ ಲೇಖನದಲ್ಲಿ ಅಲ್ಲಿ ಬಳಕೆಯಾಗಿರುವ ಪದಗಳ ಅರ್ಥವನ್ನು ವಿವರಿಸುತ್ತ, ಪೂರಕ ಮಾಹಿತಿಗಳ ಮೂಲಕ ಆ ಸಾಮ್ರಾಜ್ಯವನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಶ್ರೀಯುತ ಕ್ಲಪ್ರೋತ್ (Klaproth) ಅವರು ಈಗಾಗಲೇ ಫಾಹಿಯಾನನು ಪ್ರಯೋಗಿಸಿರುವ 'ಥಾ-ತ್ಸೇನ್' ಪದಕ್ಕೆ ಸಂಬಂಧಿಸಿದಂತೆ, 'ದಕ್ಷಿಣ' ಎಂಬರ್ಥವನ್ನು ನೀಡಿದ್ದಾರೆ. ಅವರು 'ದಕ್ಷಿಣ' ಎಂಬ ಪದವು ಇಂದು 'ದಖ್ಖಿನ್' ಎಂದು ಕರೆಯಲಾಗುವ ಭೂಪ್ರದೇಶಕ್ಕೆ ಸಂಬಂಧಿಸಿರುವುದಾಗಿ, ಅದು ದಕ್ಷಿಣದ ಅಪಭ್ರಂಶ ರೂಪವೆಂದು ಹೇಳುತ್ತಾರೆ. ಇಂತಹ ಪ್ರತ್ಯಭಿಜ್ಞೆಯ ಬಗೆಗೆ ಹೆಚ್ಚಿನ ವಿವರಣೆಗಳ ಅಗತ್ಯ ಇಲ್ಲ ಎಂದು ನನ್ನ ಅಭಿಪ್ರಾಯವೂ ಆಗಿದೆ.

'ದಖ್ಖನ್' **ಪದಕ್ಕೆ** ಸಂಬಂಧಿಸಿದಂತೆ, ವಿಂಧ್ಯಾ ಮತ್ತು ಕೃಷ್ಣಾ ನದಿ ಪ್ರದೇಶದ ನಡುವಿನ ನಾಡು ಎಂಬ ವಿವರಣೆಯು ಇತ್ತೀಚಿನದು ಎಂಬುದೇ ನನ್ನ ನಿಲುವು. ಫಾಹಿಯಾನನ ಕಾಲದಲ್ಲಿ 'ದಕ್ಷಿಣ' ಎಂಬುದಕ್ಕೆ ವಿಂಧ್ಯಾದಿಂದ ಕನ್ಯಾಕುಮಾರಿವರೆಗಿನ ಭೂಪ್ರದೇಶ ಎಂಬ ಅರ್ಥವೇ ಇತ್ತು. ಹಾಗಾದುದರಿಂದಲೇ ಆತನು ಇದಕ್ಕೆ ಸಂಬಂಧಿಸಿದಂತೆ 'ಸಾಮ್ರಾಜ್ಯ' ಎಂಬ ಪದವನ್ನು ಪ್ರಯೋಗ ಮಾಡಿದ್ದಾನೆ. ಹಾಗೆ ನೋಡಿದರೆ ಆತನೇನು ಇದಕ್ಕೆ ಹೊಂದಿಕೊಂಡಂತೆ ಬೇರೆ ಯಾವುದೇ ಸಾಮ್ರಾಜ್ಯವಿರಲಿಲ್ಲ ಎಂದೇನೂ ಹೇಳುವುದಿಲ್ಲ. ಏಕೆಂದರೆ ಇತರ ಆಧಾರಗಳಿಂದ ನಮಗೆ, ಇಡೀ ದಕ್ಷಿಣ ಭಾರತವು ಆಕಾಲಕ್ಕೆ ಏಕ ಚಕ್ರಾಧಿಪತ್ಯದ ಅಧೀನದಲ್ಲಿರಲಿಲ್ಲವೆಂದು ತಿಳಿದು ಬರುತ್ತದೆ; ಹಾಗಿದ್ದರೂ ಆತನಿಗೆ ಮಾಹಿತಿ ನೀಡಿದವರು - ಅದೇ ಪ್ರದೇಶಕ್ಕೆ ಸೇರಿದವರು ಆಗಿದ್ದುದರಿಂದ - ಹೇಳಿರುವ ಪ್ರಕಾರವೇ ದಕ್ಷಿಣದಲ್ಲಿ ಬೇರೆ ಬೇರೆ ಹೆಸರಿನ ಸಾಮ್ರಾಜ್ಯಗಳಿದ್ದಾಗಲೂ ನೆರೆಯ ಸಾಮ್ರಾಜ್ಯಗಳಿಗೆ 'ದಕ್ಷಿಣ ಸಾಮ್ರಾಜ್ಯ' ಎನ್ನುವ ಪದವೇ ಹೆಚ್ಚು ಸೂಕ್ತವಾದುದು ಎಂಬ ತೀರ್ಮಾನಕ್ಕೆ ಆತನು ಬರಬೇಕಾಯಿತು. ಬಹುಶಃ ಫಾಹಿಯಾನನು ಗುರುತಿಸುವ ಸಾಮ್ರಾಜ್ಯವು ಇತರೆಲ್ಲ ಸಾಮ್ರಾಜ್ಯಕ್ಕಿಂತ ದೊಡ್ಡದಾಗಿರಬೇಕು ಇಲ್ಲವೇ ಇತರ ಸಾಮ್ರಾಜ್ಯಗಳ ಮೇಲೆ ಹಿಡಿತ ಸಾಧಿಸಿದ ಸಾಮ್ರಾಜ್ಯವಾಗಿಬೇಕು.

ಫಾಹಿಯಾನನು ನೀಡುವ ಸಂಕ್ಷಿಪ್ತ ವಿವರಣೆಗಳು ಆ ಸಾಮ್ರಾಜ್ಯವು ಮುಂದುವರಿದ ನಾಗರಿಕತೆಯನ್ನು ಹೊಂದಿತ್ತು ಎಂಬ ಬಗೆಗೆ ಪರೋಕ್ಷ ಮಾಹಿತಿಗಳನ್ನು ನೀಡುತ್ತವೆ:-

೧. ೧೫೦೦ ಕೊಠಡಿಗಳಿರುವ ಬೌದ್ಧ ವಿಹಾರಗಳು ಮತ್ತು ಏಕಶಿಲಾ ಮೂರ್ತಿಶಿಲ್ಪಗಳಿಗೆ ಸಂಬಂಧಿಸಿದಂತೆ ಆತ ನಿರ್ದಿಷ್ಟವಾದ ಮಾಹಿತಿಗಳನ್ನು ನೀಡುತ್ತಾನೆ. ಐದು ಅಂತಸ್ತಿನ, ಗೋಪುರಾಕಾರದ ಕಟ್ಟಡಗಳನ್ನು ಮೇಲೆತ್ತಿ ನಿಲ್ಲಿಸುವಂತಹ ಬೃಹತ್ ಶಿಲೆಗಳನ್ನು ಕೆತ್ತನೆಯ ಕಾರ್ಯಗಳಿಗೆ ಬಳಸಲಾಗುತ್ತಿತ್ತು. ಪ್ರತಿಯೊಂದು ಅಂತಸ್ತು ಕೂಡ ಪ್ರಾಣಿ ಅಥವ ಅನೇಕ ಪ್ರಾಣಿಗಳ ಆಕಾರದಲ್ಲಿ ಕೆತ್ತಲಾಗಿರುವುದಾಗಿ, ನೂರಾರು ಬೌದ್ಧ ಭಿಕ್ಷುಗಳ ಕೊಠಡಿಗಳನ್ನೊಳಗೊಂಡಿರುವುದಾಗಿತ್ತು. ಪ್ರತಿಯೊಂದು ಕೊಠಡಿಗಳಿಗೂ ನೀರಿನ ಕೊಳಗಳಿರುತ್ತಿದ್ದು, ಅಲ್ಲಿಂದ ನೀರನ್ನು ಬೇರೆ ಬೇರೆ ಅಂತಸ್ತುಗಳಿಗೆ ಹರಿಯ ಬಿಡಲಾಗುತ್ತಿತ್ತಲ್ಲದೆ, ಅಂತಿಮವಾಗಿ ಅದನ್ನು ಬೌದ್ಧವಿಹಾರದ ಕೊನೆಯ ಬಾಗಿಲಿನಿಂದ ಬಿಡಲಾಗುತ್ತಿತ್ತು. ಈ ಬೃಹದಾಕೃತಿಯ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ಮೂಲಕ ನಾವು ಕೇವಲ ಪ್ರತ್ಯೇಕವಾದ ಸ್ಮಾರಕಗಳ ಮಾದರಿ ಎಂದಷ್ಟೇ ಪರಿಗಣಿಸದೆ, ಈ ಪ್ರದೇಶಗಳಲ್ಲೆಲ್ಲ ಕಂಡುಬರುವ ಅಂತಹುದೇ ಆದ ಕಟ್ಟಡಗಳ ಮಾದರಿಗಳನ್ನೂ ಕೂಡ ಪರಿಕಲ್ಪಿಸಬಹುದಾಗಿದೆ. ಇದರಿಂದಾಗಿ ಇದೀಗ ನಾವು ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳು ಈ ಪರಿಯ ಔನ್ನತ್ಯವನ್ನು ಪಡೆಯುವಲ್ಲಿ ಅವು ಮೂಲತಃ ಮಣ್ಣಿನ ರಚನೆಗಳಾಗಿರಬೇಕು ಎಂದು ಊಹಿಸಬಹುದಾಗಿದೆ. ಹಾಗಾದುದರಿಂದ ಅದನ್ನು ದೇಸಿಯ ಅಥವ ಮಾರ್ಗ ರೀತಿಯ ಶೈಲಿಯೇ ಆಗಿರಲಿ, ಆ ಕಾಲದಲ್ಲಿ ಪ್ರಚಲಿತವಾಗಿದ್ದ ಹಾಗೆಯೇ ದಕ್ಷಿಣ ಭಾರತದ ಈ ಭಾಗದಲ್ಲಿ ಇದ್ದ ವಾಸ್ತುಶೈಲಿ ಎಂದೇ ನಾವು ಪರಿಗಣಿಸಬಹುದಾಗಿದೆ.

೨. ಈ ರೀತಿಯ ಬೌದ್ಧವಿಹಾರಗಳ ಕಟ್ಟೋಣಗಳ ಮೂಲಕ ಸಹಜವಾಗಿಯೇ ದಕ್ಷಿಣ ಭಾರತದಲ್ಲಿ ಬೌದ್ಧಧರ್ಮವು ಸಾಕಷ್ಟು ಪ್ರಭಾವಶಾಲಿಯಾಗಿತ್ತು ಮಾತ್ರವಲ್ಲದೆ, ಅದರ ಅನುಯಾಯಿಗಳು ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಹೊಂದಿದವರೂ ಆಗಿದ್ದರು ಎಂಬುದನ್ನು ನಾವು ಕಂಡುಕೊಳ್ಳಬಹುದಾಗಿದೆ. ಆದರೆ ಫಾಹಿಯಾನನು ಇದನ್ನು ಕೇವಲ ನಮ್ಮ ಊಹನೆಗಷ್ಟೇ ಬಿಡುವವನಲ್ಲ. ಬದಲಾಗಿ ಆತನು ಸನ್ಯಾಸಿಗಳು, ಬ್ರಾಹ್ಮಣರು ಮತ್ತು ನಾಸ್ತಿಕರೂ ಸಹಿತವಾಗಿ ಆ ಸಾಮ್ರಾಜ್ಯದಲ್ಲಿ ವಾಸವಾಗಿದ್ದರು ಎಂಬುದನ್ನು ಪ್ರತ್ಯೇಕವಾಗಿ ಹೇಳುತ್ತಾನೆ. ಅಂತೆಯೇ ದಕ್ಷಿಣ ಭಾರತದಲ್ಲಿ ನಾಗರಿಕತೆಯ ಪ್ರಧಾನ ಲಕ್ಷಣವಾಗಿಯೇ ಧರ್ಮವನ್ನು ಪರಿಗಣಿಸಲಾಗುತ್ತಿತ್ತಲ್ಲದೆ, ಅದರ ಮೂಲಕವೇ ಅತ್ಯುನ್ನತ ವಾದ ಧಾರ್ಮಿಕ ತತ್ತ್ವಶಾಸ್ತ್ರೀಯ ಪಂಥಗಳು ಹುಟ್ಟಿಕೊಳ್ಳಲಾಗಿ ಅವುಗಳಿಂದಲೇ ಆ ಕಾಲದ ಭಾರತದ ಬೌದ್ಧಿಕತೆಯು ಮೂಡಿರುವುದಾಗಿದೆ ಎಂದು ಹೇಳುತ್ತಾನೆ.

೩. ಕೊನೆಯ ಈ ವಿವರವು ಇನ್ನೊಂದು ರೀತಿಯಲ್ಲಿ ಈ ರಾಜ್ಯದ ನಾಗರಿಕತೆಗೂ ಸಂಬಂಧಿಸಿರುವುದಾಗಿದೆ. ಬೌದ್ಧವಿಹಾರಗಳು, ಬ್ರಾಹ್ಮಣರು ಮತ್ತು ಅವರೀರ್ವರ ಅನುಯಾಯಿಗಳು ಅಕ್ಕಪಕ್ಕದಲ್ಲೇ ವಾಸಿಸುತ್ತಿದ್ದುದಾಗಿ, ಧಾರ್ಮಿಕ ಸೌಹಾರ್ದತೆ ಎಂಬುದು ಒಂದಲ್ಲ ಒಂದು ರೀತಿಯಲ್ಲಿ ತನಗೆ ತಾನೇ ಒಪ್ಪಿತವೂ, ಪ್ರಾಯೋಗಿಕವೂ ಆದುದಾಗಿತ್ತು. ಇದನ್ನು ಪ್ರಜೆಗಳೂ, ರಾಜರುಗಳೂ 'ದಕ್ಷಿಣದ ಸಾಮ್ರಾಜ್ಯ'ದಲ್ಲಿ ಪಾಲಿಸಿಕೊಂಡು ಬರುತ್ತಿದ್ದರು. ಹಾಗೆಯೇ ಇದು ಅತ್ಯಂತ ಮುಖ್ಯವಾದುದೇಕೆಂದರೆ ಫಾಹಿಯಾನನು ಬಹುಸಂಖ್ಯಾತ ಜನರು ಬೌದ್ಧಧರ್ಮವನ್ನು ವಿರೋಧಿಸುತ್ತಿದ್ದರೆಂದು ಸ್ಪಷ್ಟವಾಗಿಯೇ ಹೇಳುತ್ತಿದ್ದಾಗಲೂ ಇಂತಹ ಸಹನೆಯ ನಡುವೆಯೇ ಅದು ವ್ಯಕ್ತವಾಗುತ್ತಿತ್ತು ಎಂಬುದನ್ನೂ ಗಮನಿಸಬೇಕು.

೪. ಹೀಗೆ ಬೌದ್ಧಭಿಕ್ಕುಗಳು, ಬ್ರಾಹ್ಮಣರು ಮತ್ತು ಪಾಷಂಡಿಗಳು ಇವರೇ ಮೊದಲಾಗಿ, ರಚಿಸಿದ ಸಂಪುಟ - ಸಂಪುಟಗಳ ಸಾಹಿತ್ಯವು ಆ ಎಲ್ಲ ಧರ್ಮಗಳೂ ದಕ್ಷಿಣ ಸಾಮ್ರಾಜ್ಯದಲ್ಲಿ ಪ್ರಭಾವಶಾಲಿಯಾಗಿದ್ದವು ಎಂಬುದನ್ನು ಸ್ಪಷ್ಟಪಡಿಸುತ್ತದೆ.

೫. ಫಾಹಿಯಾನನು ಈ ಸಾಮ್ರಾಜ್ಯದ ಪ್ರಜೆಗಳ ಬಗೆಗೆ ಬರೆಯುತ್ತ ಅವರು ರಾಜಸೇವಾಸಕ್ತರೆಂದೆನ್ನುತ್ತಾನಲ್ಲದೆ, ಹಾಗೆ ತಮ್ಮ ಸೇವೆಗಳಿಗೆ ಅಧಿಕಾರಿಗಳಿಂದ ಪ್ರತಿಫಲ ವನ್ನೂ ಪಡೆಯುತ್ತಿದ್ದರು ಎಂದೆನ್ನುತ್ತಾನೆ. ಹಾಗೆಯೇ ಪ್ರವಾಸಿಗರು ನಿಯಮಿತ ವಾದ ಕಾಣಿಕೆಯನ್ನು ಮೊದಲಾಗಿಯೇ ರಾಜನಿಗೆ ಕೊಡಬೇಕಾಗಿರುತ್ತಿತ್ತು. ಎಂಬುದನ್ನು ಆತ ಹೇಳಿದ್ದಾನೆ. ಅದನ್ನು ಅತನ ಮಾತಿನಲ್ಲಿಯೇ ಹೇಳುವುದಾದರೆ, ಅಲ್ಲಿಗೆ ಹೋಗಬೇಕೆನ್ನು ವವರು ನಿರ್ದಿಷ್ಟ ಪಡಿಸಿದ ಹಣವನ್ನು ಮೊದಲಾಗಿಯೇ ಯಾರನ್ನಾದರೂ ಜತೆ ಮಾಡಿ ಕಳುಹಿಸುತ್ತಿದ್ದನು."

೬. ಫಾಹಿಯಾನನು ಮಾರ್ಗದರ್ಶಕರನ್ನು ನೇಮಿಸುತ್ತಿದ್ದುದು ಈ ಸಾಮ್ರಾಜ್ಯದ ಒಂದು ವಿಶಿಷ್ಟವಾದ ಸಂಪ್ರದಾಯವೆಂದೇ ಪರಿಗಣಿಸುತ್ತಾನೆ. ಇದಕ್ಕೆ ಸಂಬಂಧಿಸಿದಂತೆ ಆತ ನೀಡುವ

ವಿವರಗಳು ಹೀಗಿವೆ "ಈ ಸಾಮ್ರಾಜ್ಯದ ದಾರಿಗಳು ಅಪಾಯಕಾರಕವೂ, ದುರ್ಗಮವೂ ಹಾಗೂ ಸುಲಭವಾಗಿ ತಿಳಿಯಲಾರದವೂ ಆಗಿದೆ." ಎಂಬುದಾಗಿ ಆತನು ಬರೆಯುತ್ತ, ಚೀನಾದಿಂದ ಭಾರತಕ್ಕೆ ಬರುವಾಗ ಮಾರ್ಗ ಮಧ್ಯೆ ಉಂಟಾಗುವ ಸಂಕಷ್ಟಗಳನ್ನು ವಿವರಿಸುತ್ತಾನೆ. ಮುಂದುವರಿದು ಪರ್ವತಾವಳಿಗಳಿಂದ, ಆಳವಾದ ನದಿಗಳಿಂದ, ಅರಣ್ಯಗಳಿಂದ, ಕಳ್ಳಕಾಕರಿಂದ ಹಾಗೂ ಕ್ರೂರ ಮೃಗಗಳಿಂದ ನಿಬಿಡವಾದ ಈ ದೇಶದ ಮೇರೆಯ ಕುರಿತು ವಿವರಿಸುತ್ತಾನೆ. ಅಲ್ಲೇ ಆತನು ಮಾರ್ಗದ ಬಗೆಗೂ ಈ ಮೇಲಿನ ಮಾತುಗಳನ್ನು ಹೇಳಿರಬೇಕು ಎಂದೆನಿಸುತ್ತದೆ. ಏಕೆಂದರೆ ಮುಂದುವರಿದು ಆತನು, ಪ್ರವಾಸಿಗನು "ನಿರ್ದಿಷ್ಟ ಪಡಿಸಿದ ಹಣವನ್ನು ರಾಜನಿಗೆ ಕೊಡಬೇಕು" ಆ ಮೇಲೆಯೇ ಈ ಮಾರ್ಗವಾಗಿ ಪ್ರಯಾಣಿಸಬಹುದಾಗಿದೆ ಎಂದೆನ್ನುತ್ತಾನೆ. ಅನಂತರ, "ಇಲ್ಲದಿದ್ದರೆ ಆ ಮಾರ್ಗವಾಗಿ ಹೋಗಲಾಗುವುದಿಲ್ಲ" ಎನ್ನುತ್ತಾನೆ. ಇದರಿಂದಾಗಿ ಅದು ಆತನಿಗೆ ನಿಯಮಾನುಸಾರವಾಗಿ ವಿಧಿಸಿದ, ಆದರೆ ಪೂರ್ಣಪ್ರಮಾಣದಲ್ಲದ, ಕರವಾಗಿದ್ದು, ಅದರ ಮುಖೇನ ಆತನು ಶ್ರೀಲಂಕಾಕ್ಕೆ ದೇಶಕ್ಕೆ ಹೋಗಲು ಅನುಮತಿಸಲಾಗಿತ್ತು; ಹಾಗೆಯೇ ಹಿಮಾಲಯ ಪರ್ವತಾವಳಿಗಳ ಮೂಲಕ ಪ್ರಯಾಣ ಮಾಡುವಾಗ ಈಗಾಗಲೇ ಅನುಭವ ವಾಗಿದ್ದ ಕಷ್ಟನಷ್ಟಗಳಿಂದ ದಕ್ಷಿಣದಲ್ಲಿಯೂ ಅದೇ ರೀತಿಯ ಕಷ್ಟನಷ್ಟಗಳು ಎದುರಾಗಲಾಗಿ ಇವು ಕಡಿಮೆ ಪ್ರಮಾಣದವು ಎಂದು ಆತನ ಅಭಿಪ್ರಾಯವಾಗಿಬೇಕು. ಇದು ನನ್ನ ಮೊದಲ ಅಭಿಪ್ರಾಯ. ಅದು ಹೌದಾದರೆ, ಮೊದಲಾಗಿ ಕೊಡಬೇಕಾಗಿ ಬಂದ ಹಣವು ಪ್ರವಾಸಿಗನೊಬ್ಬ ಕೊಡಬೇಕಾಗಿರುವ ಒಂದಿಷ್ಟು ಹಣವಷ್ಟೇ ಅಲ್ಲ. ಬದಲಾಗಿ, ಅದು ದೊಡ್ಡ ಮೊತ್ತದ ಹಣವೇ ಆಗಿತ್ತು ಎಂಬುದಷ್ಟೇ ಅಲ್ಲದೆ, ಅದನ್ನು ಫಾಹಿಯಾನನು ಕೊಡುವುದಕ್ಕೆ ಸಾಧ್ಯವಾಗಿರಲಿಲ್ಲ. ಅಥವ ಫಾಹಿಯಾನನಿಗೆ ಅದನ್ನು ಕೊಡುವುದಕ್ಕೆ ಇಷ್ಟವಾಗಿರಲಿಲ್ಲ.

೨. ಅತ್ಯಂತ ನಿಷ್ಠಾವಂತ ಬೌದ್ಧಧರ್ಮಿಯವಾದ ಫಾಹಿಯಾನನು ಭಾರತದ ತನ್ನ ಪ್ರವಾಸದ ವೇಳೆಯಲ್ಲಿ ಈ ವಿಷಯದ ಬಗೆಗೆ ಎಲ್ಲವನ್ನೂ ಹೇಳಿದ್ದಾನೆ. ಆತನು ತನ್ನ ವೃತ್ತಿಯಲ್ಲಿ ನುರಿತವನಾಗಿ, ಅದರಿಂದ ನಿಜವಾಗಿಯೂ ಸಾಮ್ರಾಜ್ಯವೊಂದರಲ್ಲಿ ನೈಷ್ಠಿಕರಿಗೆ ಅವರದು ನಿಜವಾಗಿಯೂ ಧಾರ್ಮಿಕ ಉದ್ದೇಶವೇ ಆಗಿದ್ದರೆ ಸರಿಯಾದ ವ್ಯವಸ್ಥೆಯಿರುತ್ತಿರಲಿಲ್ಲ ಎಂದು ಹೇಳುವುದು ನನಗೆ ನಂಬುವುದಕ್ಕೆ ಆಗುವುದಿಲ್ಲ. ನಾವು ಈ ರೀತಿಯ ವ್ಯವಸ್ಥೆಯ ಬಗೆಗಿನ ವಿವರಗಳಿಂದ ಅದು ದಕ್ಷಿಣ ಭಾರತದಲ್ಲಿ ರೂಢಿಯಾಗಿದ್ದ ಒಂದು ಪದ್ಧತಿಯೆಂದೇ ತಿಳಿಯಬಹುದಾಗಿದೆ. ಹಾಗೆಯೇ ಯಾರಿಗಾಗಿ ಈ ವ್ಯವಸ್ಥೆಯನ್ನು ಮಾಡಲಾಗುತ್ತಿತ್ತೋ ಹಾಗೆಯೇ ಫಾಹಿಯಾನನು ಹೇಳುವ ರೀತಿಯಲ್ಲಿ ಅನ್ವಯ ವಾಗುತ್ತಿತ್ತೋ ಅದು ಅಂದಿನ ಕಾಲದಲ್ಲಿ ದಖ್ಖನ್‌ಗೆ ವ್ಯಾಪಾರದ ಉದ್ದೇಶಕ್ಕಾಗಿ ಬೆಲೆಬಾಳುವ ವಸ್ತುಗಳನ್ನು ಮಾರಾಟ ಮಾಡಲು ಪಶ್ಚಿಮದಿಂದ ಬರುತ್ತಿದ್ದ ವ್ಯಾಪಾರಿ ಪ್ರವಾಸಿಗರಿಗೆ ಸಂಬಂಧಿಸಿದುದಾಗಿತ್ತು. ಈ ಬೆಲೆ ಬಾಳುವ ವಸ್ತುಗಳಿಗಾಗಿ ಅವರು ತುಂಬ ಹಣವನ್ನು ಭರಿಸಬೇಕಾಗಿ ಬರುತ್ತಿತ್ತು. ಹಾಗೆಯೇ ಸಾಮ್ರಾಜ್ಯಕ್ಕೆ ಅವರಿಂದಾಗಿ ಬರುತ್ತಿದ್ದ

ಹೆಚ್ಚಿನ ವ್ಯಾಪಾರದಿಂದಾಗಿ ಅದರ ರಕ್ಷಣೆಗೆ ಸೂಕ್ತ ವ್ಯವಸ್ಥೆಯನ್ನು ಮಾಡಬೇಕಾಗುತ್ತಿತ್ತು. ಹಾಗಾದುದರಿಂದ ದಕ್ಷಿಣದ ಸಾಮ್ರಾಜ್ಯ ಶ್ರೀಮಂತವಾದ ವ್ಯಾಪಾರ ಮತ್ತು ಒಳನಾಡಿನ ವ್ಯಾಪಾರ ಮಾರ್ಗಗಳಿಗೂ ಆಗ ಪ್ರಸಿದ್ಧವಾಗಿಯೇ ಇತ್ತು ಎಂದು ನಾವು ಭಾವಿಸಬಹುದಾಗಿದೆ.

ಫಾಹಿಯಾನನು ದಕ್ಷಿಣದ ಸಾಮ್ರಾಜ್ಯದಲ್ಲಿ ಕಂಡುಬರುವುದಾಗಿ ಹೇಳುವ ಈ ರೀತಿಯ ರಾಜಕೀಯ, ಬೌದ್ಧಿಕ ಮತ್ತು ಧಾರ್ಮಿಕ ಪದ್ಧತಿಗಳು ಆ ಮೂಲಕ ಅಲ್ಲಿ ನಡೆದಿರಬಹುದಾದ ಅನೇಕ ಅಂತರ್ಸಂಬಂಧಗಳು, ವ್ಯವಸ್ಥೆಗಳೇ ಮೊದಲಾಗಿ ಪ್ರಾಚೀನ ಭಾರತದ ಕಾಲಘಟ್ಟದಲ್ಲಿಯೇ ದಕ್ಷಿಣ ಸಾಮ್ರಾಜ್ಯವು ಅತ್ಯುನ್ನತ ನಾಗರಿಕತೆಯನ್ನು ಮೆರೆದುದಾಗಿತ್ತು ಎಂಬುದನ್ನೇ ಸ್ಪಷ್ಟಪಡಿಸುತ್ತವೆ.

ಫಾಹಿಯಾನನು 'ರಾಜ್ಯದ ದೊರೆ' (The king of the country) ಎಂಬುದಾಗಿ ಹೇಳುತ್ತಾನೆ. ಇದನ್ನು ಗಮನಿಸಿದಾಗ ದಕ್ಷಿಣ ಭಾರತದ ಪೂರ್ವದ ದೊರೆ ಅಥವ ದೊರೆಗಳು ಬೌದ್ಧಧರ್ಮಕ್ಕೆ ಪ್ರೋತ್ಸಾಹ ಕೊಡುತ್ತಿದ್ದವರಷ್ಟೇ ವಿನಾ ಅದರ ಅನುಯಾಯಿಗಳಾಗಿರಲಿಲ್ಲ ಎಂಬುದಾಗಿ ತಿಳಿದುಬರುತ್ತದೆ:-

೧. ಬೌದ್ಧ ಭಿಕ್ಷುಗಳು ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತಿದ್ದರು ಎಂಬುದು ದೊರೆಗಳು ಬೌದ್ಧಧರ್ಮದ ವಿರೋಧಿಗಳು ಆಗಿರಲಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಬ್ರಾಹ್ಮಣರು ಮತ್ತು ಜೈನರು ಈಗಾಗಲೇ ಸಾಮ್ರಾಜ್ಯದಲ್ಲಿ ಹೆಚ್ಚು ಪ್ರಭಾವಶಾಲಿ ಗಳಾಗಿದ್ದರು. ಆದರೆ ಸಾಮ್ರಾಜ್ಯದ ಒಂದು ಭಾಗದಲ್ಲಿ ಬೌದ್ಧಧರ್ಮದ ವಿರೋಧಿ ಯಾದ ಒಂದು ಅಲ್ಪಸಂಖ್ಯಾತ ವರ್ಗವೂ ಇತ್ತು.

೨. ಈ ರೀತಿಯ ಧಾರ್ಮಿಕ ಸಹಿಷ್ಣುತೆಗೆ ಬಹುತೇಕವಾಗಿ ಬೌದ್ಧಧರ್ಮದ ಕಡೆಗೆ ಒಲವನ್ನು ಇರಿಸಿಕೊಂಡಿದ್ದ ರಾಜನೇ ಕಾರಣಕರ್ತನಾಗಿದ್ದನೇ ಹೊರತು, ಹೊಸ ಪಂಥಗಳಿಗೆ ಆಶ್ರಯಧಾತರಾಗಿದ್ದ ರಾಜರಲ್ಲ.

೩. ನಾವು ಆ ಕಾಲದ ಶಿಲ್ಪಕಲೆಗಳನ್ನು ಗಮನಿಸಿದಾಗ, ಅದು ಅತ್ಯಂತ ಬಲಶಾಲಿಯೂ, ಶ್ರೀಮಂತನೂ ಆದ ರಾಜನು ಮಾತ್ರವೇ ಕೈಗೊಳ್ಳಬಹುದಾದ ಕಾರ್ಯ ವೆಂದೆನಿಸುತ್ತದೆ. ಅಂತಹ ಪ್ರಬಲ ರಾಜನಿಗೆ ಮಾತ್ರವಲ್ಲದೇ, ರಾಜರ ಪರಂಪರೆಗೆ ಮಾತ್ರವೇ ಅಂತಹ ವೈಭವಯುತವಾದ ಕಲೆಯನ್ನು ಸಾಕ್ಷಾತ್ಕಾರ ಮಾಡುವುದಕ್ಕೆ ಸಾಧ್ಯ. ಹಾಗೆಯೇ ಅಂತಹ ರಾಜ ಅಥವ ರಾಜರು ಸಹಜವಾಗಿಯೇ ಧರ್ಮಸಹಿಷ್ಣುಗಳೂ ಆಗಿರಬೇಕಾಗುತ್ತದೆ.

ಇದೀಗ ನಾವು ದಕ್ಷಿಣ ಸಾಮ್ರಾಜ್ಯದ ವಿಸ್ತಾರವನ್ನು ಪರಿಗಣಿಸಬಹುದಾಗಿದೆ.

"ಫಾಹಿಯಾನನು ತಾನು ವರ್ಣಿಸುವ ಸಾಮ್ರಾಜ್ಯವು ದಕ್ಷಿಣಕ್ಕೆ ಎರಡು ನೂರು ಯೋಜನೆ ವಿಸ್ತೀರ್ಣತೆಯನ್ನು ಹೊಂದಿತ್ತು" ಎಂದೆನ್ನುತ್ತಾನೆ. ಮುಂದಿನ ವಿವರಗಳಲ್ಲಿ, ಆತನು ಪಾಟಲೀಪುತ್ರದಿಂದ ಗಂಗಾನದಿಯನ್ನುತ್ತರಿಸಿ, ಕಾಶೀ ಪಟ್ಟಣದ ವಾರಣಾಸಿಗೆ ಬರುತ್ತಾನೆ. ಹಾಗಾದುದರಿಂದ ಇನ್ನೂರು ಯೋಜನವೆನ್ನುವ ದಕ್ಷಿಣದ ಸಾಮ್ರಾಜ್ಯವು ಆತನು ವಾರಾಣಾಸಿಯಿಂದ ಹೊರಟಲ್ಲಿಂದ ಆರಂಭವಾಗುತ್ತದೆ ಎನ್ನುವುದನ್ನು ಗಮನಿಸ ಬೇಕು. ಇಲ್ಲಿ

ಫಾಹಿಯಾನನು 'ಯೋಜನ' ಎನ್ನುವ ಸಂಸ್ಕೃತ ಮಾಪನವನ್ನೇ ಪ್ರಯೋಗಿಸಿರುವುದಾದರೂ ಸಂಸ್ಕೃತದ ಲೆಕ್ಕಾಚಾರಕ್ಕೂ, ಚೀನೀಯರ 'ಯೋಜನ'ದ ಅಳತೆಗೂ ವ್ಯತ್ಯಾಸ ಕಂಡುಬರುತ್ತದೆ. ಆದುದರಿಂದ ಇನ್ನೂರು ಯೋಜನವೆಂದರೆ ಆ ಸಾಮ್ರಾಜ್ಯವು ವಾರಣಾಸಿ ಯಿಂದ ೯೦೦ ಮೈಲು ವಿಸ್ತಾರದ ಸಾಮ್ರಾಜ್ಯವೆಂದು ಪರಿಗಣಿಸಬೇಕು.

ಈಗ ನಮ್ಮೆದುರಿಗಿರುವ ಪ್ರಶ್ನೆಯು ಹಾಗಾದರೆ ವಾರಣಾಸಿಯಿಂದ ಎಲ್ಲಿಯವರೆಗಿನ ಸಾಮ್ರಾಜ್ಯವು ದಕ್ಷಿಣವೆಂದು ಪರಿಗಣಿತವಾಗುತ್ತದೆ ಎಂಬುದೇ ಆಗಿದೆ. ಆತನೇನೋ ವಾರಣಾಸಿಯಿಂದ ತನ್ನ ಪಯಣವನ್ನು ಆರಂಭಿಸುತ್ತಾನೆ. ಇದೀಗ ನಾವು ಆತನು ಸ್ಪಷ್ಟವಾಗಿಯೇ ವಾರಣಾಸಿಯಿಂದ ಆರಂಭಿಸಿ ೯೦೦ ಮೈಲು ವಿಸ್ತೀರ್ಣ ಎಲ್ಲಿವರೆಗಾ ಗುವುದೋ ಅಲ್ಲೇ ಅಥವ ಅತನು ವರ್ಣಿಸುವ ರಾಜಧಾನಿಯವರೆಗಿನ ಭೂಪ್ರದೇಶವೇ ಅಂತಹ ಮೇರೆಯಾಗಿರಬಹುದು ಎಂಬುದಾಗಿ ಗಮನಿಸಬಹುದು. ಇನ್ನೂ ನಮಗೆ ಒಂದು ಪ್ರಶ್ನೆ ಹಾಗೆಯೇ ಉಳಿಯುತ್ತದೆ. ಫಾಹಿಯಾನನು '೯೦೦ ಮೈಲು' ಎನ್ನುವ ವಿಸ್ತಾರವು ಎಲ್ಲಿಂದ ಎಲ್ಲಿವರೆಗೆ? 'ದಕ್ಷಿಣಕ್ಕೆ' ಎಂದರೆ ಏನರ್ಥ? ಆತನ ಅನೇಕ ವಿವರಗಳನ್ನು ಓದಿದಾಗ ನನಗೆ, ಬಹುಮಟ್ಟಿಗೆ ಅದು ಸರಿಯಾದ ವಿವರವೇ ಎಂದೆನಿಸುತ್ತದೆ. ಹಾಗಾದುದರಿಂದ ದಕ್ಷಿಣ-ದಕ್ಷಿಣ-ಪೂರ್ವ ಮತ್ತು ದಕ್ಷಿಣ-ದಕ್ಷಿಣ ಪಶ್ಚಿಮ ನಡುವೆ ಬರುವ ಯಾವುದೇ ಭೂಭಾಗವು 'ದಕ್ಷಿಣಕ್ಕೆ' ಎಂಬ ಸಾಮಾನ್ಯ ಅರ್ಥವನ್ನು ಪಡೆಯುತ್ತದೆ. ಹಾಗೆಯೇ ಭಾರತದ ನಕ್ಷೆಯಲ್ಲಿ ಈ ಭಾಗವನ್ನು ನಾನು '೯೦೦' ಮೈಲು ಎಂದು ಪರಿಗಣಿಸುತ್ತೇನೆ. ಈ ವಿಸ್ತಾರವನ್ನು ದಕ್ಷಿಣಾಭಿಮುಖವಾಗಿ ನಕ್ಷೆಯಲ್ಲಿ ಗುರುತಿಸಿದಾಗ, ಹಾಗೆಯೇ ಸ್ವಲ್ಪ ಪಶ್ಚಿಮದ ಕಡೆಗೂ - ಎಲ್ಲೆಯ ಕಾರಣ ಕ್ಕಾಗಿ- ವಿಸ್ತರಿಸಿದಾಗ ೯೦೦ ಮೈಲು ಎನ್ನುವುದು ನಿಜವಾಗಿಯೂ ಮದರಾಸಿನವರೆಗೆ ತಲುಪುತ್ತದೆ. ಹಾಗೆಯೇ ಮದರಾಸು ಪ್ರದೇಶವು ವಾರಣಾಸಿಯಿಂದ ೨೧/₂ ಡಿಗ್ರಿಯಷ್ಟು ಪಶ್ಚಿಮಕ್ಕೆ ಇರುವುದಾಗಿ, ಮದರಾಸಿನ ಸುತ್ತಮುತ್ತ ಈ ವಿಸ್ತಾರದಲ್ಲಿರುವ ಯಾವುದೇ ಭೂಪ್ರದೇಶವು ಫಾಹಿಯಾನನು ಹೇಳಿರುವ ವಿಸ್ತಾರಕ್ಕೆ ಸರಿಹೊಂದುತ್ತದೆ. ಹೀಗಿದ್ದರೂ, ದಕ್ಷಿಣಕ್ಕೆ ಮದರಾಸು ಭೂಪ್ರದೇಶವೇ ಅತ್ಯಂತ ಕಟ್ಟ ಕಡೆಯದೆಂದು ಫಾಹಿಯಾನನು ಹೇಳಿರುವನೆಂದು ನಂಬುವುದಾದರೂ ಫಾಹಿಯಾನನು ಬೇಕಾಬಿಟ್ಟಿಯಾಗಿ ಮಾರ್ಗವನ್ನು ಹೇಳಿರದೆ, ಅತ್ಯಂತ ಖಚಿತವಾಗಿಯೇ ನಡೆದು ಬಂದ ದಾರಿಯನ್ನು ಹೇಳಿರುತ್ತಾನೆ ಎಂಬುದನ್ನು ಗಮನಿಸಬೇಕಾಗುತ್ತದೆ. ಹಾಗೆಯೇ ಆತನು ದಕ್ಷಿಣದ ಮಾರ್ಗಗಳು ದುರ್ಗಮವೂ ಭಯಾನಕವೂ ತಿಳಿಯಲು ಅಸಾಧ್ಯವಾದುವೂ ಆಗಿವೆ ಎಂದು ಹೇಳುವಲ್ಲಿ ಆತನು ಒಳದಾರಿಯನ್ನೇ ಸೂಚಿಸುತ್ತಿದ್ದಾನೆ ಎಂಬುದನ್ನು ಗಮನಿಸಬೇಕಾಗುತ್ತದೆ. ಆಗ ನಾವು ಅಂತಹ ಒಳದಾರಿಯನ್ನು ಹಿಡಿದು ಮುಂದೆ ಸಾಗಿದರೆ ೯೦೦ ಮೈಲು ಎನ್ನುವ ಆ ವಿಸ್ತಾರವು ಮದರಾಸಿನಿಂದ ಉತ್ತರಕ್ಕೆ ಹೋಗುವುದಾಗಿರುತ್ತದೆ. ಈ ದೀರ್ಘವಾದ ವಿಸ್ತಾರದಲ್ಲಿ ೧/೪ ಭಾಗವಷ್ಟೇ ನಮ್ಮ ಅಳತೆಗೆ ಸರಿಹೊಂದುತ್ತದೆ. ಫಾಹಿಯಾನನು ಹೇಳುವ ಮಾರ್ಗವು ಅಂತಿಮವಾಗಿ ಕೃಷ್ಣಾನದಿಯ ಸುತ್ತಮುತ್ತಲ ಪ್ರದೇಶಕ್ಕೆ ಸೀಮಿತವಾಗುತ್ತದೆ.

ಹೀಗೆ ಫಾಹಿಯಾನನು ಹೇಳುವ ದೀರ್ಘ ವಿವರಗಳಿಂದ ನಾವು ಈ ತೀರ್ಮಾನಗಳಿಗೆ ಬರಬಹುದಾಗಿದೆ: ವಾರಣಾಸಿಯಿಂದ ದಕ್ಷಿಣಕ್ಕೆ ೬೦೦ ಮೈಲುಗಳ ಅಂತರದಲ್ಲಿ, ಅಂದರೆ, ಗೋದಾವರಿ ಮತ್ತುಪಾಲಾರ್ ನದಿಗಳ ತೀರಪ್ರದೇಶದಲ್ಲೆಲ್ಲೋ ಕ್ರಿ.ಶ.೪೦೦ ವರ್ಷಗಳ ಹಿಂದೆ ದಕ್ಷಿಣ ಸಾಮ್ರಾಜ್ಯದ ಈ ರಾಜಧಾನಿಯು ಶ್ರೀಮಂತವಾಗಿ ಕಂಗೊಳಿಸುತ್ತಿತ್ತು. ಅಂತಹ ಭವ್ಯವಾದ ಸಾಮ್ರಾಜ್ಯದಲ್ಲಿ ವಾಸ್ತು ಮತ್ತು ಶಿಲ್ಪ ತನ್ನ ಅತ್ಯುನ್ನತ ಹಂತವನ್ನು ತಲುಪಿಯಾಗಿತ್ತು. ಅಲ್ಲಿ ಧರ್ಮ, ತತ್ತ್ವಶಾಸ್ತ್ರ ಹಾಗೂ ಸಾಹಿತ್ಯವೇ ಮೊದಲಾದ ಜ್ಞಾನಶಾಖೆಗಳು ಬೌದ್ಧರು ಬ್ರಾಹ್ಮಣರು ಮತ್ತು ಇತರ ಧಾರ್ಮಿಕ ಪಂಥಾನುಯಾಯಿಗಳಿಂದ ಸದೃಢಗೊಂಡಿದ್ದವು. ಅಲ್ಲಿ ವ್ಯವಸ್ಥಿತವಾದ ನೀತಿ-ನಿಯಮಗಳಿಂದ ಆಂತರಿಕವಾದ ವ್ಯವಸ್ಥೆಯನ್ನು ಕಾಪಾಡಲಾಗುತ್ತಿತ್ತಲ್ಲದೆ, ವ್ಯಾಪಾರ ಮತ್ತು ವ್ಯಾಪಾರಸ್ಥರನ್ನು ಹಾಗೂ ಯಾತ್ರಿಕರನ್ನು ಕಾಪಾಡಲಾಗುತ್ತಿತ್ತು. ಇದರಿಂದ ಬೌದ್ಧವಾಸ್ತುಗಳಿಗೆ ರಕ್ಷಣೆಯೂ ದೊರೆಯಿತಲ್ಲದೆ, ಬೌದ್ಧಧರ್ಮ ಪಸರಿಸುವುದಕ್ಕೂ ಕಾರಣವಾಯಿತು.

ಇದೀಗ ನಾವು ಫಾಹಿಯಾನನ ಕಾಲದ ದಕ್ಷಿಣ ಭಾರತದ ಬಗೆಗೆ ಚರ್ಚಿಸಬಹುದಾಗಿದೆ. ನಾವೀಗ ಚರ್ಚಿಸಿರುವ ಭೂಪ್ರದೇಶವು ಗೋದಾವರಿ ಮತ್ತು ಕೃಷ್ಣಾನದಿಗಳ ನಡುವಿನ ಭಾಗವಾಗಿದ್ದು, ಅದು ಪ್ರಾಚೀನ 'ವೆಂಗಿ' ನಾಡೇ ಆಗಿತ್ತು. ಹಾಗೆಯೇ ಅದರ ದಕ್ಷಿಣದ ತುದಿ ಭಾಗವು ಕಾಂಚಿಯಿಂದ ೪೦ ಕಿ.ಮೀ ಅಂತರದಲ್ಲಿದೆ. ಈ ಕಾಂಚಿಯು ಪ್ರಾಚೀನ ಕಾಲದಿಂದಲೂ ಬೌದ್ಧರ ಮತ್ತು ಬ್ರಾಹ್ಮಣರ ನಿವಾಸ ಸ್ಥಾನವಾಗಿತ್ತಲ್ಲದೆ ದಕ್ಷಿಣ ಭಾರತದ ನಾಗರಿಕತೆಯ ಕೇಂದ್ರವೂ ಆಗಿತ್ತು.

ವೆಂಗಿ ಮತ್ತು ಕಾಂಚಿಗಳೆರಡೂ ಪಲ್ಲವರ ರಾಜ್ಯಧಾನಿಯ ಭಾಗಗಳೇ ಆಗಿದ್ದವು. ಇದಕ್ಕೆ ಶಾಸನಾಧಾರಗಳಿವೆ. ಅದಲ್ಲದೆ ಪಲ್ಲವರು, ಚೇರರು ಕದಂಬರು ಮತ್ತು ಚಾಲುಕ್ಯರಿಗೂ ಕೊಡುಕೊಳೆಗಳಿದ್ದುವು. ಪಲ್ಲವರ ದಾನಶಾಸನಗಳು ಫಾಹಿಯಾನನ ಕಾಲಕ್ಕೆ ಸಂಬಂಧಿಸಿದುವುಗಳೇ ಆಗಿವೆ. ಈ ಪ್ರಬಂಧದ ವ್ಯಾಪ್ತಿಯ ದೃಷ್ಟಿಯಿಂದ ಮುಖ್ಯವಾದ ಪ್ರಶ್ನೆಯಿದು: ಫಾಹಿಯಾನನು ಹೇಳುವ ಥ-ತ್ಸೇನ್ ಅಥವ ದಕ್ಷಿಣ ಎಂಬುದು ಗೋದಾವರಿ ಮತ್ತು ಕೃಷ್ಣಾನದಿಗಳ ನಾಡೇ ಅಥವಾ ಪಾಲಾರ್ ಮತ್ತು ಪೆನ್ನಾರ್‌ಗಳ ನಡುವಿನ ನಾಡೇ ಎಂಬುದು. ಏಕೆಂದರೆ ಈ ವಿಶಾಲವಾದ ಭೂಪ್ರದೇಶವು ಆಗ ಪಲ್ಲವರ ಆಳ್ವಿಕೆಗೆ ಒಳಗಾಗಿತ್ತು ಎಂಬುದನ್ನು ಗಮನಿಸಿಕೊಂಡು ಮುಂದುವರಿಯ ಬಹುದು.

ಇಲ್ಲಿಯ ರಾಜರು ಮತ್ತು ಅವರ ಆಳ್ವಿಕೆಗೆ ಸಂಬಂಧಿಸಿದಂತೆ, ಈ ವರೆಗೆ ನಾನು ಹೇಳಿರುವುದೆಲ್ಲ ಫಾಹಿಯಾನನ ನಿರೂಪಣೆಗೆ ಅನುಗುಣವಾಗಿಯೇ ಇದೆ:-

೧. ಚಾಲುಕ್ಯ ಸೈನ್ಯವು ೫ನೇ ಶತಮಾನದ ಸರಿಸುಮಾರಿಗೆ ನರ್ಮದೆಯನ್ನು ದಾಟುವ ಹೊತ್ತಿಗೆ ದಖ್ಖನ್ನಿನಲ್ಲಿಯ ರಾಜರು ಪರಮಾಧಿಕಾರವನ್ನು ಹೊಂದಿದವರಾಗಿದ್ದರು. ದಕ್ಷಿಣದ ಪ್ರಾಚೀನ ರಾಜಮನೆತನವಾದ ಚಾಲುಕ್ಯ ಪಲ್ಲವರು ಸೋಲಿಸಿದುದು ಮಾತ್ರವಲ್ಲದೆ ಅವರೀರ್ವರು ಶಾಂತಿಯಿಂದ ಬಾಳ್ವೆ ನಡೆಸುತ್ತಿದ್ದರು ಎಂಬುದಕ್ಕೆ ಪಲ್ಲವ ರಾಜಕುಮಾರಿ

ಯೊಬ್ಬಳನ್ನು ಚಾಲುಕ್ಯ ರಾಜನು ಮದುವೆಯಾದ ನಿದರ್ಶನವನ್ನು ನೀಡಬಹುದಾಗಿದೆ. ಇಲ್ಲಿಂದ ಸ್ವಲ್ಪ ಕಾಲದಲ್ಲಿಯೇ, ಬಹುಮಟ್ಟಿಗೆ ಫಾಹಿಯಾನನು ದಕ್ಷಿಣ ಭಾರತಕ್ಕೆ ಬರುವ ಕಾಲಕ್ಕಾಗಲೇ ಪಲ್ಲವರ ಆಳ್ವಿಕೆಯು ದಖ್ಖನ್ನಿನ ವಾಯವ್ಯ ಭಾಗದತ್ತ ಪಸರಿಸುತ್ತಿತ್ತು. ಅದೇ ಸಮಯದಲ್ಲಿ ಚೋಳ ಸಾಮ್ರಾಜ್ಯದ ಉತ್ತರದ ಸೀಮೆಯಿಂದ ಆರಂಭಿಸಿ ಒರಿಸ್ಸಾದ ದಕ್ಷಿಣದ ಸೀಮೆಯವರೆಗಿನ ಸಮುದ್ರಾಂಕಿತವಾದ ಇಡೀ ಭೂಮಂಡಲ ದಕ್ಷಿಣದ ರಾಜರ ಕೈವಶವಾಗಿತ್ತು. ವೆಂಗಿ ಮಂಡಳವು ಫಾಹಿಯಾನನು ಬಂದ ಅನಂತರವೂ ಎರಡು ಶತಮಾನಗಳ ಕಾಲ ಅವರ ಆಡಳಿತದಲ್ಲೇ ಇತ್ತಲ್ಲದೆ, ಆಮೇಲೆ ಅದು ಕುಜ್ಜ ವಿಷ್ಣುವರ್ಧನನ (ಚಾಳುಕ್ಯ ಚಕ್ರವರ್ತಿಯ ಹಿರಿಯ ಸಹೋದರ) ಆಳ್ವಿಕೆಗೆ ಒಳಗಾಯಿತು. ಹಾಗೆಯೇ ಕಾಂಚಿಯು ಅವರ ಪ್ರಬಲ ರಾಜಧಾನಿಯಾಗಿ ಹತ್ತನೆಯ ಶತಮಾನದವರೆಗೂ ಉಳಿಯಿತು. ಮುಂದೆ ಪಲ್ಲವರು ದುರ್ಬಲರಾಗುತ್ತ ಬರುತ್ತಿದ್ದಂತೆಯೇ ಚೋಳರು ಅದರ ಲಾಭಪಡೆಯುತ್ತಿರಲಾಗಿ ಅಲ್ಲಿ ಉಂಟಾದ ಅರಾಜಕತೆಯಿಂದ ಮುಂದೆ ಪಲ್ಲವರು ಫಾಹಿಯಾನನ ಯಾತ್ರೆಯ ಸಂದರ್ಭದಲ್ಲಿ ಅತ್ಯಂತ ಪ್ರವರ್ಧಮಾನರಾಗಿದ್ದರು ಅಂತಹ ಸಮರ್ಥ ಸಾಮ್ರಾಜ್ಯವನ್ನು ಅವರು ಸ್ಥಾಪಿಸಿರುದರಿಂದಲೇ ಅದು ಆ ಕಾಲಕ್ಕೆ ದಕ್ಷಿಣದ ಸಾಮ್ರಾಜ್ಯವೆಂದು ಹೆಸರು ಪಡೆದುದಾಗಿತ್ತು.

೩. ಅವರು ಮೂಲತಃ ಬೌದ್ಧರಾಗಿದ್ದರೇ ಇಲ್ಲವೇ ಎಂಬುದಲ್ಲ - ಒಟ್ಟಿನಲ್ಲಿ ಅವರು ಬೌದ್ಧವಾಸ್ತು ಶಿಲ್ಪಕ್ಕೆ ಪ್ರೋತ್ಸಾಹದಾಯಕರಾಗಿದ್ದರು. ಕೃಷ್ಣಾನದಿಯ ದಂಡೆಯ ಮೇಲಿರುವ ಅಮರಾವತಿಯಲ್ಲಿ ಕಟ್ಟಿರುವ ಅತ್ಯಂತ ಎತ್ತರದ ಬುದ್ಧನ ಮೂರ್ತಿಯು ಪಲ್ಲವರ ಶಿಲ್ಪಕಲಾ ಪ್ರೇಮಕ್ಕೆ ಅತ್ಯುತ್ತಮ ನಿದರ್ಶನವಾಗಿದೆ ಎಂದು ಶ್ರೀ ಫರ್ಗುಸನ್ ಅವರು ಹೇಳುತ್ತಾರೆ. ಅದು ಪಲ್ಲವರು ಸಾಮ್ರಾಜ್ಯದ ಮಧ್ಯಭಾಗದಲ್ಲಿರುವುದಾಗಿದ್ದು ಫಾಹಿಯಾನನ ಯಾತ್ರೆಯ ಕಾಲಕ್ಕೆ ಕೆತ್ತಲ್ಪಟ್ಟುದಾಗಿತ್ತು.

೪. ಹೊಯೆನ್‌ತ್ಸಾಂಗ್ ತನ್ನ ಯಾತ್ರೆಯುದ್ದಕ್ಕೂ ಹಂತದಲ್ಲಿರುವ ನಾಶವಾಗಿರುವ ಬೌದ್ಧವಾಸ್ತು ಶಿಲ್ಪದ ಬಗೆಗೆ ಹೇಳುತ್ತಾರೆ. ಹೀಗೆ ಜೀರ್ಣವಾಗಿರುವ ಅನೇಕ ಬೌದ್ಧ ವಾಸ್ತು ಶಿಲ್ಪಗಳು ಮತ್ತು ನವೀನವಾಗಿರುವ ವೈದಿಕ ದೇವಾಲಯಗಳನ್ನು ಅಲ್ಲಲ್ಲಿ ಗುರುತಿಸುತ್ತಾನೆ. ಅನಂತರದ ಕಾಲಘಟ್ಟದಲ್ಲಿ ಅವುಗಳು ಪಲ್ಲವರಿಂದ ವೈಷ್ಣವರಾದ ಚಾಲುಕ್ಯರ ಕೈಸೇರುತ್ತದೆ.

೫. ಫಾಹಿಯಾನನು ಕಂಡ ದಕ್ಷಿಣದ ಸಾಮ್ರಾಜ್ಯದಲ್ಲಿತ್ತೆಂದು ಹೇಳಲಾಗಿರುವ ಪಲ್ಲವರ ಕಾಲದ ವಾಸ್ತುಶಿಲ್ಪವನ್ನು ಪಲ್ಲವರ ರಾಜಧಾನಿಯಾದ ಕಾಂಚೀಪುರಂನಿಂದ ೩೫ ಕಿ.ಮೀ ದೂರದಲ್ಲಿರುವ ಮಹಾ ಮಲ್ಲಾಪುರಂನ 'ಮಹಾರಥ' ವೆಂದು ಗುರುತಿಸಬಹುದಾಗಿದೆ.

೬. ಈ ಎಲ್ಲ ನಿದರ್ಶನಗಳಿಂದ ಪಲ್ಲವರು ದಕ್ಷಿಣದ ಪ್ರಬಲ, ಶ್ರೀಮಂತ ಸಾಮ್ರಾಟರಾಗಿದ್ದರು ಎಂದು ಪರಿಗಣಿಸಬಹುದಾಗಿದೆ. ಸಾಗರೋತ್ತರವಾದ ವ್ಯಾಪಾರ ವ್ಯವಹಾರಗಳು ನಡೆಯುವ ಸ್ಥಳಗಳೆಲ್ಲವೂ ಅವರ ಅಧೀನವಲ್ಲಿದ್ದುವು. ಹಾಗೆಯೇ ಆಗ

ಗೊತ್ತಿದ್ದ ವಜ್ರದ ಗಣಿಗಳೆಲ್ಲವೂ ಅವರ ಸಾಮ್ರಾಜ್ಯದ ಅಧೀನದಲ್ಲಿಯೇ ಇದ್ದುವು. ಹಾಗೆಯೇ ಇಂತಹ ಬೆಲೆ ಬಾಳುವ ವಸ್ತುಗಳನ್ನು, ಮಾರಾಟ ಮಾಡುತ್ತಿದ್ದ ವ್ಯಾಪಾರಿಗಾಗಿ ರಕ್ಷಣೆಯೂ ಬೇಕಾಗುತ್ತಿದ್ದುದರಿಂದ ಅವರು ಫಾಹಿಯಾನನು ಹೇಳುವ ಹಾಗೆ ಸ್ವಲ್ಪಮಟ್ಟಿನ ಹಣವನ್ನು ಕೊಡಬೇಕಾಗಿ ಬರುತ್ತಿತ್ತು.

ಈ ಎಲ್ಲಾ ನಿದರ್ಶನಗಳಿಂದ ನಾವೀಗ ಫಾಹಿಯಾನನು ಹೇಳುವ ದಕ್ಷಿಣದ ಸಾಮ್ರಾಜ್ಯವೆನ್ನುವುದು ಕಾಂಚಿಯ ಪಲ್ಲವರ ಸಾಮ್ರಾಜ್ಯವೇ ಆಗಿತ್ತು ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

ಒಂದುವೇಳೆ ಈ ಪ್ರತ್ಯಭಿಜ್ಞೆಯು ನಿಜವಾದುದೇ ಆದರೆ ಆಗ ಕಳಚಿಹೋದ ಇತಿಹಾಸದ ಗೊಣಸನ್ನು ಮತ್ತೆ ನಾವು ಜೋಡಿಸಿದಂತಾಗುತ್ತದೆ. ಅಭಿಜಾತ ಭಾರತೀಯ ಕಾಲಘಟ್ಟ ಮತ್ತು ಬೌದ್ಧಧರ್ಮದ ಸಂಬಂಧಗಳು ಹಾಗೂ ನಾಣ್ಯಗಳ ಆಧಾರ ಅಂತೆಯೇ ಆದಿಯಿಂದ ಐದನೇ ಶತಮಾನದಿಂದೀಚೆ ಇವೆಲ್ಲವೂ ಸರ್ ವಾಲ್ಟರ್ ಎಲಿಯಟ್ಟನು ಸಂಪಾದಿಸಿದ ಚಾಲುಕ್ಯ ಶಾಸನಗಳ ವಿವರಗಳಿಂದ ನಮ್ಮ ಅರಿವಿಗೆ ನಿಲುಕುತ್ತದೆ. ಇದೀಗ ನಾವು ಅದರ ಮುಂದಿನ ಕಾಲಘಟ್ಟದ ಬಗೆಗೆ ಅಂದರೆ, ಪಲ್ಲವರ ಮೂಲದ ಬಗೆಗೆ ಚರ್ಚಿಸಬೇಕಾಗಿದೆ. ಅದು ಅಂತಹ ಕಳೆದುಹೋದ ಸಂಬಂಧವನ್ನು ಮತ್ತೆ ಜೋಡಿಸುವ ಪ್ರಯತ್ನವಾಗಬಹುದಾಗಿದೆ. ಇಂತಹ ಕಾಲಘಟ್ಟದ ಬಗೆಗೆ ತೊಲೆಮಿಯ (Ptoolemy) 'ಪೆರಿಪ್ಲಸ್' ಗ್ರಂಥದಲ್ಲಿಯೂ ಅನೇಕ ನಿದರ್ಶನಗಳಿವೆ. ಆ ಕಾಲದಲ್ಲಿಯೂ ವ್ಯಾಪಾರ ಮತ್ತು ವ್ಯವಹಾರಗಳನ್ನು ನೋಡಿಕೊಳ್ಳುವ ಸಲುವಾಗಿ ಬಲಿಷ್ಠವಾದ ಸ್ಥಳೀಯ ಸರಕಾರಗಳಿರುತ್ತಿದ್ದುದಕ್ಕೆ ಆಧಾರಗಳಿವೆ. ಹಾಗೆಯೇ ಅದು ಬೌದ್ಧವಾಸ್ತುಶಿಲ್ಪ ಚರಿತ್ರೆಯ ಬಗೆಗಿನ ವಿವರಗಳನ್ನು ನೀಡಬಹುದಾಗಿದೆ. ಹಾಗೆಯೇ ಅದು ಪ್ರಾಚೀನ ಭಾರತ ಮರೆತುಹೋದ ಸಾಮ್ರಾಜ್ಯವೊಂದರ ಮರುಸ್ಥಾಪನೆಯೂ ಆಗಬಲ್ಲದು.

೨

ಇತಿಹಾಸಕ್ಕೆ ಆಕರಗಳಾಗಿ ಬಳಸುವ ಗ್ರಂಥಗಳ ಬಗೆಗೆ ನಾವು ತಿಳಿದಿರಬೇಕಾದ ಸಂಗತಿಗಳಿವೆ. ಇಂದಿನ ಮಟ್ಟಿಗೆ ಇಂತಹ ಗ್ರಂಥಗಳೇ ಆ ಇತಿಹಾಸಕ್ಕೆ ಸಂಬಂಧಿಸಿದಂತೆ ಮೂಲ ಮಾಹಿತಿಗಳನ್ನು ನೀಡಬಲ್ಲುವುಗಳಾಗಿವೆ. ಅವುಗಳ ದಿನಾಂಕ ಹಾಗೂ ಹಳೆಯ ದಾಖಲೆಗಳೊಂದಿಗೆ ಅವುಗಳ ಸಂಬಂಧಗಳು ಹಾಗೆಯೇ ಅವುಗಳಲ್ಲಿ ಬರುವ ಕೆಲವೊಂದು ವಿವರಗಳ ಸತ್ಯಾಸತ್ಯತೆಗೆ ಸಂಬಂಧಿಸಿ ತುಂಬ ಆಕ್ಷೇಪಗಳನ್ನು ಎದುರಿಸಲೇ ಬೇಕಾಗಿದೆ. ಇಂದಿನ ರೂಪಗಳನ್ನು ಪಡೆಯುವ ಪೂರ್ವದಲ್ಲಿದ್ದ ಅವುಗಳ ವಸ್ತುಸ್ಥಿತಿಯ ಪ್ರಾಚೀನ ಪರಂಪರೆಗಳ ಪ್ರಾಚೀನ ದಾಖಲೆಗಳೆಂಬ ಕಾರಣಕ್ಕಷ್ಟೆ ಇಲ್ಲಿ ಅವುಗಳನ್ನು ನಾನು ಬಳಸುತ್ತಿದ್ದೇನೆ. ಹಾಗೆಯೇ "ಅವುಗಳ ಕರ್ತೃಗಳು ಬದುಕಿದ್ದ ಕಾಲದಲ್ಲಿ ಕೇಳಿದ್ದ ಮತ್ತು ನೋಡಿದ್ದ ದಖ್ಖನ್ನಿನ ಜನಗಳ ಗತಕಾಲದ ಇತಿಹಾಸವನ್ನು ಪೂರ್ಣವಾಗಿ ತಿರಸ್ಕರಿಸಿರಲಾರವು"

ಎಂಬುದಾಗಿಯೂ ಅವುಗಳ ಬಗೆಗೆ ನನಗೆ ನಂಬುಗೆಯಿದೆ. ಅವುಗಳನ್ನು ಶುದ್ಧಾಂಗವಾದ ಶೋಧನೆಗಳೆಂದು ಪರಿಗಣಿಸುವ ಬದಲು-ಹಾಗೆ ಪರಿಗಣಿಸಲು ಸಾಧ್ಯವೇ ಇಲ್ಲ-ಕೆಲವೊಂದು ಸತ್ಯ ಸಂಗತಿಗಳನ್ನು ಹೊರಗೆಡಹುವುದಕ್ಕಾಗಿ ಅವುಗಳನ್ನು ನಾನಿಲ್ಲಿ ಉಪಯೋಗಿಸಿ ಕೊಂಡಿದ್ದೇನೆ ಎಂದು ತಿಳಿದರೆ ಸಾಕು. ಹಾಗೆಯೇ ಅವುಗಳನ್ನು ಇಂದು ಎಷ್ಟು ನಂಬಬಹುದೋ ಅದಕ್ಕಿಂತಲೂ ಮಿಗಿಲಾಗಿ ನಾನು ನಂಬುತ್ತಿದ್ದೇನೆ ಎಂದೇನೂ ಭಾವಿಸ ಬೇಕಾಗಿಲ್ಲ.

ಶ್ರೀಲಂಕಾದ ಐತಿಹಾಸಿಕ ಗ್ರಂಥಗಳಲ್ಲಿ ಪ್ರಾಚೀನ ಕಾಲದಿಂದ ಆರಂಭಿಸಿ ಇಲ್ಲಿಯವರೆಗೆ ಸಿಗುವ ಮಾಹಿತಿಗಳ ಪ್ರಕಾರ ನಿರಂತರವಾದ ಹಾಗೂ ಸಲುಗೆಯಿಂದಿರುವ ಸಂಬಂಧವೊಂದು ದ್ವೀಪರಾಷ್ಟ್ರ ಮತ್ತು ಕಾಳಿಂಗ ರಾಜ್ಯದ ನಡುವೆ (ಭಾರತದ ಪೂರ್ವ ಕರಾವಳಿಯ ಮೇಲ್ಭಾಗ) ಇದ್ದಿತ್ತೆಂಬುದಾಗಿ ತಿಳಿದುಬರುತ್ತದೆ. ಬಹುಮಟ್ಟಿಗೆ ಇದೇ ರೀತಿಯ ಆದರೆ ವೈರತ್ವದ ಸಂಬಂಧವೂ ಸಹ ಚೋಳ ಮತ್ತು ಪಾಂಡ್ಯರೊಂದಿಗಿತ್ತಲ್ಲದೆ, ಅದು ಉಳಿದ ದಕ್ಷಿಣಾಭಿ ಮುಖವಾಗಿರುವ ಪೂರ್ವಕರಾವಳಿಯಲ್ಲೆಲ್ಲ ಕಾಣಿಸುತ್ತಿತ್ತು. ಶ್ರೀಲಂಕಾದ 'ಮಹಾ ಸಾಮ್ರಾಜ್ಯ'ವು ಮೂಲತಃ ಕಳಿಂಗ ರಾಜಮನೆತನದ ಸ್ತ್ರೀಮೂಲದಿಂದ ಕವಲೊಡೆದುದಾಗಿದೆ. ಹಾಗೆಯೇ ಡಾ. ಗೋಲ್ಡ್‌ಷ್‌ಮಿತ್ (Dr.goldshemidt) ಅವರು ಹೇಳುವಂತೆ, ಇತ್ತೀಚಿನವರೆಗೂ ಸಮರ್ಥರಾದ ಉತ್ತರಾಧಿಕಾರಿಗಳು ಇಲ್ಲವಾದಲ್ಲಿ ಸಿಂಹಳೀಯರು ಕಳಿಂಗ ರಾಜ ಮನೆತನದಿಂದ ಅಂತಹವರನ್ನು ಆಯ್ಕೆ ಮಾಡಿಕೊಳ್ಳಬಹುದಿತ್ತೆಂಬುದಾಗಿ ಶಾಸನಗಳಿಂದ ತಿಳಿದುಬರುತ್ತದೆ. ಇದಕ್ಕೆ ಸಿಂಹಳವು ಪಾರಂಪರಿಕವಾಗಿ ಆ ರಾಜ ಮನೆತನಕ್ಕೆ ಸೇರಿರುವುದೇ ಕಾರಣವಾಗಿತ್ತಲ್ಲದೆ ಅವರ ಆಳ್ವಿಕೆಯಲ್ಲಿ ರಾಜಧರ್ಮವು ಸುರಕ್ಷಿತವಾಗಿ ರುತ್ತದೆ ಎಂಬ ಮನೋಧರ್ಮವೂ ಕಾರಣ ವಾಗುತ್ತದೆ. ಹಾಗೆಯೇ ಈ ಗ್ರಂಥಗಳು ಬೌದ್ಧಧರ್ಮದ ಮುಖ್ಯಗ್ರಂಥಗಳೂ ಆಗಿವೆ. ಹಾಗಾದುದರಿಂದಲೇ ಅವು ಬೌದ್ಧಧರ್ಮದ ಪಸರಿಸುವಿಕೆಯ ಬಗೆಗೆ ವಿವರಿಸುತ್ತವೆ. ಹಾಗೆಯೇ ಬೌದ್ಧಧರ್ಮಕ್ಕೆ ಸಂಬಂಧಿಸಿದಂತೆ ಪ್ರೋತ್ಸಾಹ ನೀಡಿದ ಸ್ಥಳೀಯ ಅರಸರು ಹಾಗೂ ಅಂತಹ ಪ್ರಾಚೀನ ವಿವರಗಳು ಆ ಗ್ರಂಥಗಳಲ್ಲಿ ಕಂಡುಬರುತ್ತವೆ. ಸಹಜವಾಗಿಯೇ ಇಂತಹ ಗ್ರಂಥಗಳಲ್ಲಿ ಪ್ರಾಚೀನ ದಖ್ಖನ್ನಿನ ಬಗೆಗೆ ಏನಾದರೂ ವಿವರಗಳಿವೆಯೇ ಎಂದು ಕುತೂಹಲ ಉಂಟಾಗುತ್ತದೆ. ಈ ಗ್ರಂಥಗಳಲ್ಲಿರುವ ಭಾರತದ ಭಾಗಗಳಿಗೆ ಸಂಬಂಧಿಸಿದಂತೆ ಅನೇಕ ಅಸ್ಪಷ್ಟ ಪರೋಕ್ಷವಾಗಿ ಅಥವಾ ಅಪರೋಕ್ಷವಾಗಿ ಆಕಸ್ಮಿಕವಾಗಿ ಇಲ್ಲವೇ ಉದ್ದೇಶಪೂರ್ವಕವಾಗಿ ಕಾಲ್ಪನಿಕ ಸಂಗತಿಗಳು ಇರುತ್ತವೆಯಾಗಿ ನಿಸ್ಸಂದೇಹವಾಗಿ ಕ್ರಿ.ಶ.೭ನೇ ಶತಮಾನಕ್ಕಿಂತ ಪೂರ್ವದಲ್ಲಿಯೇ ಅಲ್ಲಿ ರಾಜಾಡಳಿತ ಇತ್ತೆಂಬುದನ್ನು ಅದಕ್ಕಾಗಿಯೇ ಆ ವೈಭವೀಕರಣವೂ ಸಹಜವೆಂಬುದನ್ನು ಸ್ಪಷ್ಟಪಡಿಸಬಲ್ಲುವು.

ಶ್ರೀಲಂಕಾಕ್ಕೆ ಸಂಬಂಧಿಸಿದಂತೆ ರಾಜಕೀಯ ಇತಿಹಾಸಕ್ಕೆ ಸೇರಿದ ಪ್ರಾಚೀನ ಸಂಗತಿಯೊಂದು ಈ ಗ್ರಂಥಗಳಲ್ಲಿ ಕಂಡುಬರುತ್ತದೆ. ಅದು ಮಹಾ ಸಾಮ್ರಾಜ್ಯದ

ಮೂಲಪುರುಷ ಮಹಾರಾಜ ವಿಜಯನು ತನ್ನ ಏಳುನೂರು ಮಂದಿ ಅನುಯಾಯಿಗಳೊಂದಿಗೆ ಶ್ರೀಲಂಕಾಕ್ಕೆ ಭೇಟಿ ನೀಡಿರುವು ದಾಗಿದೆ. ಬಂಗಾಳಕೊಲ್ಲಿಯ ಮೂಲಕ ಕ್ರಿ.ಶ.೫ ಅಥವ ೬ನೇ ಶತಮಾನದಲ್ಲಿ ಬುದ್ಧನು ಮರಣ ಹೊಂದಿದ ಕಾಲಕ್ಕನುಗುಣವಾಗಿ ಈ ಪ್ರಯಾಣವು ಘಟಿಸಿತೆಂಬುದಾಗಿ ನಂಬಲಾಗುತ್ತದೆ; ಹಾಗೆಯೇ ಅಲ್ಲಿ ಕಳಿಂಗದ ಬಗೆಗೆ ಹೀಗೆ ವಿವರಿಸಲಾಗಿದೆ: "ಹಿಂದೆ, ವಾಂಗೋ ಭೂಮಿಯ ಮೇಲೆ, ವಾಂಗೋ ರಾಜಧಾನಿಯಲ್ಲಿ ಒಬ್ಬ ವಾಂಗೋ ದೊರೆಯಿದ್ದ. ಕಳಿಂಗ ರಾಜನ ಮಗಳು ಆ ರಾಜ ಮನೆತನದ ಮಹಾರಾಣಿ ಯಾಗಿದ್ದಳು" ಇದು ವಿಜಯ ರಾಜನ ವಂಶವರ್ಣನೆಯನ್ನು ಮಾಡುವ ಪದ್ಯವಾಗಿದೆ. ಮುಂದೆ ಈ ಪದ್ಯವು ಈ ರೀತಿಯಾಗಿ ವಂಶವೃಕ್ಷವನ್ನು ಸೂಚಿತ್ತದೆ.




ವಿಜಯೊ ಸುವಿತ್ತೊ ಇತರ ೧೫ ಮಂದಿ ಅ ವಳಿಗಳು

ವಿಜಯನು ಶ್ರೀಲಂಕಾದಲ್ಲಿ ನೆಲೆನಿಂತನು. ಅದು ಬುದ್ಧನ ಮೊದಲ ಉತ್ತರಾಧಿಕಾರಿಯು ನಿರ್ವಾಣವನ್ನು ಪಡೆಯಲು ಲತಾ ಗೃಹದಲ್ಲಿ ಒರಗಿದ ಕಾಲವಾಗಿತ್ತು. ಅಂದರೆ ಈ ದಾಖಲೆಯ ಪ್ರಕಾರ ಕ್ರಿ.ಪೂ.೫೪೩ನೆಯ ವರ್ಷವಾಗುತ್ತದೆ; ಹಾಗಾದುದರಿಂದ ಕಳಿಂಗರಾಜನು ಕ್ರಿ.ಪೂ.೬ನೇ ಶತಮಾನಕ್ಕಿಂತ ಪೂರ್ವದವನೆಂದು ಈ ಆಧಾರಗಳಿಂದ ತಿಳಿದುಬರುತ್ತದೆ.

ಉಫಮನು ಬರೆದಿರುವ ಸಿಲೋನಿನ ಧಾರ್ಮಿಕ ಗ್ರಂಥಗಳಲ್ಲಿ ಹೆಚ್ಚಿನವು ಅನುವಾದವಾಗಿ ಅಪವ್ಯಾಖ್ಯಾನಕ್ಕೊಳಗಾಗಿವೆ. ಅನುವಾದವಾಗಿರುವ ಭಾಗಗಳಲ್ಲಿರುವ ಮೇಲಿನ ವಿವರಣೆಯು 'ಮಹಾವಂಸೆ' ಕೃತಿಯ ವಿವರಗಳಿಗೆ ಸರಿಹೊಂದುತ್ತವೆ.

ಆ ಕಾಲಕ್ಕೆ ಎಂದರೆ ಕ್ರಿ.ಪೂ.ಆರು ಅಥವ ಏಳನೆಯ ಶತಮಾನಕ್ಕಿಂತ ಪೂರ್ವದಲ್ಲಿ ಈ ದಾಖಲೆಯಿಂದ ಸ್ಪಷ್ಟವಾಗುವಂತೆ ಕಳಿಂಗದಲ್ಲಿ ಒಬ್ಬ ರಾಜನಿದ್ದ; ಹಾಗಾದುದರಿಂದ ರಾಜ್ಯವು ಇತ್ತು; ಹಾಗೆಯೇ ಕಳಿಂಗ ರಾಜನಿಗೆ ಇತರ ಭಾರತೀಯ ರಾಜರ ನಡುವೆ ತನ್ನದೇ ಆದ ಸ್ಥಾನವಿತ್ತು. ಅದರಿಂದಾಗಿಯೇ ಆತನು ಬಂಗಾಳದ ರಾಜನ ಮಗಳನ್ನು ಕೈಹಿಡಿಯುವುದು; ಆಕೆಯನ್ನು ಪಟ್ಟದರಾಣಿಯಾಗಿ ಮಾಡುವುದು. ಉಫಮನ (Upham) ಕಾವ್ಯದಲ್ಲಿ ಬರುವಂತೆ, ಈ ಕಳಿಂಗರಾಜನು ಅನೇಕ ರಾಜನ ಉತ್ತರಾಧಿಕಾರಿಯಾಗಿದ್ದಾನೆ:- "ಜಂಬೂ ದ್ವೀಪದಲ್ಲಿ ಕಳಿಂಗೊ ರಾಜ್ಯದಲ್ಲಿ, ಕಳಿಂಗ ರಾಜನ ಮಗಳೊಬ್ಬಳು ವಾಂಗೋ ರಾಜ್ಯದಲ್ಲಿ ವಾಂಗೋ ರಾಜನ ರಾಣಿಯಾಗಿ ಹೆಣ್ಣು ಮಗುವೊಂದಕ್ಕೆ ಜನ್ಮನೀಡಿದಳು".

ಶ್ರೀ ಆರ್.ಆಸ್.ಹಾರ್ಡಿಯವರು ತಮ್ಮ 'Manual of Budhism' ಕೃತಿಯಲ್ಲಿ ಅನೇಕ ಬೌದ್ಧಕತೆಗಳನ್ನು ಅನುವಾದ ಮಾಡಿದ್ದಾರೆ; ಈಗ ಭಾರತದಾದ್ಯಂತ ಇರುವ ಇಂತಹ

ಕತೆಗಳಿಂದ ತಿಳಿದುಬರುವಂತೆ, ಆಗಿನ ಕಾಲದಲ್ಲಿ ಗೌತಮಬುದ್ಧನಿಗಿಂತಲೂ ಮೊದಲು, ಈ ದೇಶದಲ್ಲಿ ಕಳಿಂಗ ಅರಸನು ಆಳುತ್ತಿದ್ದನು ಎಂಬ ಜನಾಭಿಪ್ರಾಯ ಇರುವಂತೆ ತೋರಿ ಬರುತ್ತದೆ; ಹಾಗೆಯೇ ಆ ರಾಜನಿಗಿಂತಲೂ ಪೂರ್ವದಲ್ಲಿಯೇ ದಖ್ಖನ್ನಿನ ನಾಗರಿಕತೆಯೂ ಊರ್ಜಿತವಾಗಿತ್ತೆಂಬುದೂ ಅವುಗಳಿಂದ ತಿಳಿಯುತ್ತದೆ.

ಶ್ರೀ ಹಾರ್ಡಿಯವರು ಸಂಗ್ರಹಿಸಿದ ಐತಿಹ್ಯಗಳ ಪ್ರಕಾರ ಒಂದು ವೇಳೆ ಬುದ್ಧನು ಕ್ರಿ.ಪೂ. ೫೬೦ರಲ್ಲಿ ಜನಿಸಿರುವನೆಂದಾದರೆ-ಬುದ್ಧನಿಗಿಂತ ಎರಡು ತಲೆಮಾರು ಹಿಂದೆ ಕಳಿಂಗದಲ್ಲಿ ಉಂಟಾದ ಬರಗಾಲವು ಕ್ರಿ.ಪೂ.ಸುಮಾರು ೬೨೦ಕ್ಕೆ ಸಂಭವಿಸಿರಬೇಕು. ಹಿಂದಿನ ಕಾಲದಲ್ಲಿ ಜಂಬೂ ದ್ವೀಪದಲ್ಲಿ ಜಯತೂರ್ ಎಂಬುದು ಪ್ರಧಾನ ನಗರವಾಗಿತ್ತು. ಆ ನಗರವನ್ನು ಸಂದ ಅಥವಾ ಸಂಜ ಹೆಸರಿನ ರಾಜನು ಆಳುತ್ತಿದ್ದನು; ಫುಸತಿಯು ಆತನ ಪಟ್ಟದ ರಾಣಿಯಾಗಿದ್ದಳು. ಆಕೆಯು ಮೊದಲು ದೇವಸೇಕರನ ಪತ್ನಿಯಾಗಿದ್ದಳು. ಹಾಗೆಯೇ ನಾಲ್ಕು ಅಸಂಖ್ಯಗಳು ಮತ್ತು ಒಂದು 'ಕಪ್ಪಕ್ಷ'ಗಳ ಬಳಿಕ ಆಕೆಯು ಬುದ್ಧನ ತಾಯಿ ಯಾದಳು. ಕಾಲಾನಂತರ ಅವರಿಗೆ ಮಗನೊಬ್ಬನು ಜನಿಸಿದನು. ಅವನಿಗೆ 'ವೆಸಂತ್ರ' ಎಂದು ನಾಮಕರಣ ಮಾಡಲಾಯಿತು. ಆತನ ತಾಯಿ ಈ ಹೆಸರಿನ ಬೀದಿಯಲ್ಲಿ ಹೋಗುತ್ತಿದ್ದಾಗ ಪ್ರಸವ ಮಾಡಿದುದರಿಂದಲೇ ಅವನಿಗೆ ಹಾಗೆ ನಾಮಕರಣವಾಗಲು ಕಾರಣ ವಾಯಿತು. ಈ ಪುತ್ರನು ಬೋಧಿಸತ್ವನೇ ಆಗಿದ್ದು ಮುಂದಿನ ಜನ್ಮದಲ್ಲಿ ಆತನು ಗೌತಮ ಬುದ್ಧನಾಗಿ ಜನಿಸಿದನು. ಜನಿಸಿದ ಕೂಡಲೇ ಆತನಿಗೆ ಮಾತು ಬರುತ್ತಿದ್ದುದರಿಂದ ಆತನಿಗೆ ಉಜ್ಜ್ವಲ ಭವಿಷ್ಯವಿದೆ ಎಂದು ಎಲ್ಲರೂ ತಿಳಿದರು. ಆತನು ಪ್ರಾಪ್ತವಯಸ್ಕನಾದಾಗ, ಅತನಿಗೆ ಚೇತಿಯ ಆರಸನ ಮಗಳಾದ ಮಾದ್ರೀದೇವಿಯೊಂದಿಗೆ ಮದುವೆಯಾಯಿತು; ಹಾಗೆಯೇ ಸಂದಾ ರಾಜನು ಅವನಿಗೆ ರಾಜ್ಯವನ್ನು ಒಪ್ಪಿಸಿದನು.

ಈ ಕಾಲದಲ್ಲಿ ಕಾಳಿಂಗದಲ್ಲಿ ಮಳೆಯಿಲ್ಲದೆ ಬರಗಾಲವುಂಟಾಯಿತು. ಆಗ ಬಿಳಿ ಆನೆಯನ್ನು ಹೊಂದಿರುವ ವೇಸಂತರನಿಗೆ ಮಳೆ ತರಿಸುವ ಸಾಮರ್ಥ್ಯಯಿದೆ ಎಂದು ತಿಳಿದುಬಂತು. ಆತನು ಎಂಟು ಬ್ರಾಹ್ಮಣರನ್ನು ಕಳುಹಿಸಿ ಆ ಆನೆಯನ್ನು ತರಲು ಹೇಳಿದನು. ಹಾಗೆ ಜಯತುರಾಕ್ಕೆ ದೂತರು, ಬಂದಾಗ ಅಲ್ಲಿ 'ಪೊಯ' ದಿನಾಚರಣೆಯನ್ನು ಆಚರಿಸಲಾಗುತ್ತಿತ್ತು. ರಾಜನು ಬಿಳಿ ಆನೆಯನ್ನೇರಿ ಧರ್ಮಾಚತ್ರಕ್ಕೆ ರಾಜಮಾರ್ಯಾದೆಯನ್ನು ಕೊಡಲು ಹೋಗುತ್ತಿದ್ದನು. ಆತನು ಪ್ರಸ್ನನಾಗಿ "ನೀನು ನನ್ನ ಕಣ್ಣನ್ನೋ, ಮಾಂಸವನ್ನೋ ಕೇಳಿದರೂ ಕೊಡುತ್ತಿದ್ದೆ. ಆದರೆ ನೀವು ಬಿಳಿ ಆನೆಯನ್ನು ಕೇಳಿದಿರಿ. ಅದರ ಬಲೆಯೇ ೨೪ ಲಕ್ಷ ವರಾಹ ಬೆಲೆಬಾಳುವುದಾಗಿದೆ. ಆದರೂ ನಾನು ಅದನ್ನು ಕೊಡುತ್ತಿದ್ದೇನೆ. ನಾನು ಇದರಿಂದ ಬುದ್ಧನಾಗಬಹುದು" ಎಂದು ಉದ್ಘರಿಸಿದನು. ಆದರೆ ಅದರ ಬಲೆಯೇ ೪ ಲಕ್ಷ ವರಾಹಗಳ ಬೆಲೆಬಾಳುತ್ತದೆ ಎಂದೂ ಹೇಳಿದನು. ಅದನ್ನು ಕೊಂಡುಕೊಂಡವನು ಬುದ್ಧನಾಗಬಹುದು!" ಎಂದು ಅವನು ಉದ್ಗರಿಸಿದನು.

ಅನಂತರ ಜಾತಕ ಕಥೆಗಳಲ್ಲಿ ಬರುವಂತೆ, ಬಿಳಿ ಆನೆಯನ್ನು ಚೇದಿ ಜನಗಳಿಗೆ

ಕಾಣಿಕೆಯಾಗಿ ನೀಡಲಾಯಿತು. ಹಾಗೆಯೇ ರಾಜ ವೇಸಂತರನನ್ನು ದೇಶಾಂತರಕ್ಕೆ ಕಳುಹಿಸಲಾಯಿತು; ಆನಂತರ ಆತನ ಉತ್ತಮ ಚಾರಿತ್ರ್ಯಕ್ಕಾಗಿ ಮತ್ತೆ ಮರಳಿ ರಾಜ್ಯಕ್ಕೆ ಕರೆಸಲಾಯಿತು. ಹಾಗೆಯೇ ಶ್ವೇತ ಗಜವನ್ನು ಕಾಳಿಂಗ ದೇಶಕ್ಕೆ ಅದರ ಕರೆತರಲಾಯಿತು. ಪರಿಣಾಮವಾಗಿ ಮತ್ತೆ ಮಳೆಯುಂಟಾಯಿತು. ದೇಶವು ಸುಭಿಕ್ಷವಾಯಿತು; ಹಾಗೆಯೇ ರಾಜಾ ವೇಸಂತರನು ಗೌತಮ ಬುದ್ಧನಾದನು.

ಕಾಳಿಂಗನ ದುರ್ಗಣಗಳಿಗೆ ಸಂಬಂಧಿಸಿದಂತೆ ದೇವತೆಗಳು ಸೇಡು ತೀರಿಸಿಕೊಂಡ ಇನ್ನೊಂದು ಕತೆಯು ತುಂಬ ಪ್ರಚಾರದಲ್ಲಿರುವುದು ಕಂಡುಬರುತ್ತದೆ. ಅದು ಹೀಗಿದೆ:- ಅದು ಸರಭಂಗ ಬೋಧಿಸತ್ವನು ಬಿಕ್ಕುಗಳ ನಾಯಕನಾಗಿದ್ದ ಸಮಯ. ಆಗ ಆತನ ಶಿಷ್ಯನಾದ ಕಿಸಾವಚನು ಗೋದಾವರಿ ತೀರದ ಗಿವುಲು ಪುಣ್ಯ ಸ್ಥಳಕ್ಕೆ ಹೋದನು. ಹಾಗೆಯೇ ಮುಂದುವರಿದು ಆತನು ದಂಡಕಿಯನ್ನುತ್ತರಿಸಿ ಕಾಳಿಂಗದ ಪಟ್ಟಣವಾದ ಕುಂಭಾವತಿ ಪಟ್ಟಣದಲ್ಲಿ ನೆಲೆಸಿದನು. ಒಂದು ದಿನ ಐನೂರು ಮಂದಿ ವಿಲಾಸಿನಿಯರು ನಗರದಲ್ಲಿ ಮೆರವಣಿಗೆ ಹೋಗುತ್ತಿದ್ದರು. ಇವರನ್ನು ನೋಡಲು ಜನ ನೂಕುನುಗ್ಗಲು ಮಾಡಲಾಗಿ ಇಡೀ ನಗರಕ್ಕೆ ನಗರವೇ ತುಂಬಿಕೊಂಡ ಹಾಗೆ ಆ ದೃಶ್ಯ ಕಂಡುಬರುತ್ತಿತ್ತು. ರಾಜನು ಈ ಮೆರವಣಿಗೆಯನ್ನು ಮೇಲುಪ್ಪರಿಗೆಯಿಂದ ನೋಡಿದನು. ಆತನಿಗೆ ಈ ಮೆರವಣಿಗೆಯು ನಗರದ ಸೌಂದರ್ಯವನ್ನು ಹಾಳುಮಾಡುತ್ತದೆ ಎಂದು ಕಂಡುಬಂತು. ಇವರು ಜನರನ್ನು ಮರಳು ಮಾಡುತ್ತಾರೆಂದು ರಾಜನಿಗೆ ಅನಿಸಿದುದರಿಂದ, ಅವರನ್ನು ಆಸ್ಥಾನದಿಂದ ಹೊರಹಾಕಲು ಆದೇಶಿಸಿದನು. ಒಂದು ದಿನ ವೇಶ್ಯಾಂಗನೆಯರು ಉಪವನದಲ್ಲಿ ಅಡ್ಡಾಡುತ್ತಿದ್ದಾಗ, ಸನ್ಯಾಸಿ ಕಿಸವಚನ ಮುಖವು ಕೂದಲಿನಿಂದ ತುಂಬಿ ಹೋಗಿತ್ತು. ಆತನ ಗಡ್ಡವು ಎದೆಯವರೆಗೆ ಇಳಿಬಿದ್ದಿತ್ತು. ಅವರು ಕುಣಿದು ಕೆಟ್ಟದೃಶ್ಯವೆಂಬಂತೆ ತಿಳಿದು, ತಮ್ಮ ಕಣ್ಣುಗಳನ್ನು ತೊಳೆದುಕೊಳ್ಳುವುದಕ್ಕೆ ನೀರು ಕೇಳಿದರಲ್ಲದೆ ಅವನ ಮೇಲೆ ಉಗುಳಿದರು. ಕಾಕತಾಳೀಯ ಎಂಬಂತೆ ಕೂಡಲೇ ಅವರನ್ನು ರಾಜಾಲಯಕ್ಕೆ ಸೇರಿಸಲಾಯಿತು. ಇದು ಅವರು ಬಿಕ್ಕೂವಿಗೆ ಮಾಡಿದ ಅವಮಾನಕ್ಕೆ ಪ್ರತಿಫಲವೆಂದೇ ನಂಬಲಾಯಿತು. ಅದೇ ವೇಳೆಗೆ ಪುರೋಹಿತನೂ ರಾಜಾಲಯದಿಂದ ಹೊರಹಾಕಲ್ಪಟ್ಟನು. ಪುರೋಹಿತನು ವೇಶ್ಯೆಯರಲ್ಲಿಗೆ ಹೋಗಿ ಅವರು ಹೇಗೆ ಮತ್ತೆ ಆಸ್ಥಾನಕ್ಕೆ ಸೇರಿರುವುದೆಂಬುದಾಗಿ ಕೇಳಿದನು. ಆಗ ಅವರು ಬಿಕ್ಕುವಿಗೆ ಉಗುಳಿದುದರ ಪರಿಣಾಮವೇ ಎಂದೆನ್ನಲು ಪುರೋಹಿತನೂ ಹಾಗೆಯೇ ಮಾಡಿದನು. ಆಗಲೂ ಕಾಕತಾಳೀಯ ಎಂಬಂತೆ ರಾಜನು ಆತನನ್ನು ಸರಿಯಾಗಿ ವಿಚಾರಿಸದೆ ಹಾಗೆ ಮಾಡಿದನೆಂದೂ, ಮತ್ತೀಗ ಆತನನ್ನು ಮರಳಿ ಆಸ್ಥಾನಕ್ಕೆ ಸೇರಿಸಿಕೊಳ್ಳಲಾಗುವುದೆಂದೂ ಹೇಳಿದನು. ಹೀಗೆ ರಾಜನೂ ಕೂಡ ಪರೋಕ್ಷವಾಗಿ ಬಿಕ್ಕುವಿಗೆ ಮಾಡಿದ ಅವಮಾನದಲ್ಲಿ ಪಾಲುದಾರನಾದನು. ಮುಂದೊಂದು ದಿನ ರಾಜ್ಯದ ಕೆಲವಡೆಗಳಲ್ಲಿ ದಂಗೆ ಕಾಣಿಸತೊಡಗಿತು. ರಾಜನು ಅದನ್ನು ಹತ್ತಿಕ್ಕಲು ಸೈನ್ಯವನ್ನು ಕಳುಹಿಸಿದನು. ಆಗ ಬ್ರಾಹ್ಮಣರು ರಾಜನಲ್ಲಿಗೆ ಹೋಗಿ ನೀನು ವೈರಿಗಳನ್ನು ಗೆಲ್ಲಬೇಕಾದರೆ ಉದ್ಯಾನದಲ್ಲಿರುವ

ಓರ್ವ ಭಿಕ್ಕುವಿನ ಮೇಲೆ ಉಗುಳ ಬೇಕು ಎಂದು ಹೇಳಿದರು. ರಾಜನು ಬ್ರಾಹ್ಮಣರ ಮಾತಿನಂತೆ ವೇಶ್ಯೆಯವರೊಂದಿಗೆ ಉದ್ಯಾನವನಕ್ಕೆ ಹೋದನು. ಅವರೆಲ್ಲರೂ ಹಿಂದೆ ಸನ್ಯಾಸಿಗೆ ಉಗುಳಿದವರೇ ಆಗಿದ್ದರು; ಹಾಗೆಯೇ ಈಗಾಗಲೇ ಉಗುಳಿದವರನ್ನು ಹೊರತುಪಡಿಸಿ ಬೇರೆ ಯಾರನ್ನೂ ಒಳಗೆ ಬಿಡಬಾರದೆಂದು ವೇಲಧಿಕಾರಿಗೆ ಆದೇಶಿಸಲಾಯಿತು. ಕಿಸವಚನಿಗೆ ಉಂಟಾಗುತ್ತಿರುವ ಈ ಅವಮಾನವನ್ನು ತಿಳಿದ ಕುಲೀನ ವ್ಯಕ್ತಿಯೊಬ್ಬ ಮಲಿನ ವಾಗಿದ್ದ ಅವನ ಮೈಯನ್ನು ತೊಳೆದು ಬೇರೆ ನೀಡಿದನು; ಆನಂತರ ರಾಜನು ಮಾಡಿದ ತಪ್ಪಿಗೆ ಅವನಿಗೆ ಯಾವ ಶಿಕ್ಷೆ ಕಾದಿದೆಯೋ ಎಂದು ಭಿಕ್ಕುವಿನಲ್ಲಿ ಕೇಳಿದನು. ಆಗ ಬಿಕ್ಕುವು ದೇವತೆಗಳು ಈ ಬಗೆಗೆ ಒಮ್ಮತವಾಗಿಲ್ಲವೆಂದು ಹೇಳಿದನು: ಕೆಲವರು ರಾಜನೋರ್ವನೇ ಶಿಕ್ಷಿತನಾಗಬೇಕೆಂದರೆ ಕೆಲವರು ರಾಜನಿಗೂ ಪ್ರಜೆಗಳಿಗೂ ಸಮವಾಗಿ ಶಿಕ್ಷೆಯಾಗ ಬೇಕೆಂದು ಹೇಳುತ್ತಾರೆ; ಇನ್ನು ಕೆಲವರು ಇಡೀ ರಾಜ್ಯವೇ ನಾಶವಾಗ ಬೇಕೆನ್ನುತ್ತಾರೆ. ಮುಂದುವರಿದು ಬಿಕ್ಕುವು ಒಂದು ವೇಳೆ ರಾಜನು ಕ್ಷಮೆಯನ್ನು ಕೇಳಿದ್ದೇ ಆದರೆ ಈಗ ತೋರಿ ಬರುತ್ತಿರುವ ಉತ್ಪಾತಗಳು ಕೊನೆಯಾಗಬಲ್ಲವು ಎಂದು ಬಿಕ್ಕುವಿಗೆ ಹೇಳಿದನು. ಹಾಗಾದುದರಿಂದ ಕುಲೀನನು ರಾಜನಲ್ಲಿಗೆ ಬಂದು ಪರಿಸ್ಥಿತಿಯನ್ನು ವಿವರಿಸಿದನು; ಆದರೆ ರಾಜನು ಅವನ ಉಪದೇಶವನ್ನು ಕೇಳದಿರಲಾಗಿ ಅವನು ಆಸ್ಥಾನವನ್ನು ತ್ಯಜಿಸಿದನು. ಆನಂತರ ಆತನು ಮತ್ತೆ ಬಿಕ್ಕುವಿರುವಲ್ಲಿಯೇ ಬಂದನು. ಆಗ ಬಿಕ್ಕುವು ಇರುವುದೆಲ್ಲವನ್ನೂ ಕಟ್ಟಿಕೊಂಡು ದೂರ ಹೋಗಲು ಹೇಳಿದನಲ್ಲದೆ, ಈ ನಗರವು ಇನ್ನು ಕೆಲವೇ ದಿನಗಳಲ್ಲಿ ನಾಶವಾಗುವುದಾಗಿಯೂ ಹೇಳಿದನು. ರಾಜನು ವೈರಿಗಳೊಂದಿಗೆ ಹೋರಾಡಿ ಜಯಶಾಲಿಯಾದನು; ಆಗ ಮಳೆ ಬರತೊಡಗಿತು. ಜನರು ಇದು ಬಿಕ್ಕುವಿಗೆ ರಾಜನು ಉಗುಳಿದುದರ ಪ್ರತಿಫಲವೆಂದು ಹರ್ಷಿಸಿದರು. ಆ ಮೇಲೆ ದೇವತೆಗಳು ಹೂ, ಹಣ ಹಾಗೂ ಚಿನ್ನದ ಮಳೆಯನ್ನು ಸುರಿಯಲಾರಂಭಿಸಿದರು. ಜನಗಳಿಗೆ ಇದರಿಂದ ಇನ್ನಷ್ಟು ಸಂತೋಷವಾಯಿತು. ಆದರೆ ಆನಂತರ ಆಯುಧಗಳ ಮಳೆ ಬೀಳಲಾರಂಭಿಸಿತು. ಇದರಿಂದ ಅವರು ಕತ್ತರಿಸಲ್ಪಟ್ಟರು. ಆನಂತರ ಕೆಂಡದ ಮಳೆ; ಆನಂತರ ಕಲ್ಲಿನ ಮಳೆ; ಆನಂತರ ಮರಳಿನ ಮಳೆ- ಹೀಗೆ ಎಲ್ಲ ರೀತಿಯ ಮಳೆ ಸುರಿದು ಎಲ್ಲ ನಾಶವಾಯಿತು. ಬಿಕ್ಕು, ಕುಲೀನ ವ್ಯಕ್ತಿ ಹಾಗೂ ತಂದೆ-ತಾಯಿಗಳ ಸೇವೆ ಮಾಡಿದ ಕೆಲವೊಂದು ಜನಗಳು ಮಾತ್ರವೇ ಈ ವಿಪ್ಲವದಲ್ಲಿ ಬದುಕಿ ಉಳಿದರು.

ಇದೇ ರೀತಿಯ ಇನ್ನೊಂದು ಕಥಾನಕವು ಹೀಗಿದೆ :- ಒಂದಾನೊಂದು ಕಾಲದಲ್ಲಿ ನಾಳಿಕೇರ ರಾಜನು ಕಾಳಿಂಗವನ್ನು ಆಳುತ್ತಿದ್ದನು. ಆ ವೇಳೆ ಐನೂರು ಮಂದಿ ಬ್ರಾಹ್ಮಣ ಸನ್ಯಾಸಿಗಳು ಹಿಮಾಲಯದಲ್ಲಿ ವಾಸವಾಗಿದ್ದರು. ಅಲ್ಲಿ ಅವರು ಹಣ್ಣು-ಹಂಪಲುಗಳನ್ನು ತಿಂದುಕೊಂಡು ನಾರುಡೆಯಲ್ಲಿ ವಾಸಿಸುತ್ತಿದ್ದರು. ಅವರು ಅಪರೂಪಕ್ಕೆ ಉಪ್ಪು ಇಲ್ಲವೇ ದವಸ-ಧಾನ್ಯಗಳಿ ಗೆಂದು ಹಳ್ಳಿಗಳಿಗೆ ಬರುತ್ತಿದ್ದರು. ಹಾಗೆ ಬಂದವರು ಕಾಳಿಂಗ ಪಟ್ಟಣಕ್ಕೂ ಬಂದರು. ಜನಗಳು ಅವರು ಕೇಳಿದುದನ್ನೆಲ್ಲ ಕೊಟ್ಟರು. ಬ್ರಾಹ್ಮಣರು ಅದಕ್ಕೆ ಪ್ರತಿಯಾಗಿ

'ಬನ' ಎಂದು ಹೇಳುತ್ತಿದ್ದರು. ಇದರಿಂದ ಜನ ಎಷ್ಟು ಪ್ರಭಾವಿತರಾದರೆಂದರೆ ಅವರನ್ನು ಅಲ್ಲೇ ಉಪವನದಲ್ಲಿ ವಾಸಮಾಡಿಕೊಂಡು 'ಬನ' ಎಂದು ಹೇಳುತ್ತಿರಬೇಕೆಂದು ವಿನಂತಿಸಿಕೊಂಡರು. ಅಲ್ಲಿ ಜಾತ್ರೆಯೇ ನಡೆಯಿತು. ಇದನ್ನು ನೋಡಿದ ರಾಜನು ಏನೆಂದು ವಿಚಾರಿಸಿದನು. ಪ್ರಜೆಗಳು ನಡೆದುದೆಲ್ಲವನ್ನು ವಿವರಿಸಿ ರಾಜನೂ ಅಲ್ಲಿಗೆ ಬರಬೇಕೆಂದು ವಿನಂತಿಸಿಕೊಂಡರು. ರಾಜನು ತಮ್ಮಲ್ಲಿಗೆ ಬರುತ್ತಾನೆಂಬುದನ್ನು ಅರಿತುಕೊಂಡ ಬ್ರಾಹ್ಮಣರು ತಮ್ಮಲ್ಲಿರುವ ಅತ್ಯಂತ ಬುದ್ಧಿವಂತನೊಬ್ಬನನ್ನು ರಾಜನೊಂದಿಗೆ ವ್ಯವಹರಿಸುವುದಕ್ಕೆ ಬಿಟ್ಟರು. 'ಬನ'ವೆನ್ನುವುದಕ್ಕೆ ಐದು ರೀತಿಯ ಪಾಪ ಮಾಡಿದವರು ಅನರ್ಹರೆಂದೂ, ಈ ಪಾಪಗಳನ್ನು ಮಾಡಿದವರು ಜಂತುಗಳಾಗಿ, ಹುಳುಗಳಾಗಿ ಅಥವಾ ಅಸುರರಾಗಿ ಜನಿಸುತ್ತಾರೆ. ಅಥವಾ ನರಕದಲ್ಲಿ ಅವರು ಸಾವಿರಾರು ವರ್ಷಗಳ ವರೆಗೆ ನರಳಬೇಕಾಗುತ್ತದೆ ಎಂದೂ ರಾಜನಿಗೂ ಅಂತಹ ಶಿಕ್ಷೆ ಯಾಗಲಿರುವುದು ಎಂದೂ ಆತನು ಹೇಳಿದನು. ಇದಕ್ಕೆ ಪ್ರತಿಯಾಗಿ ರಾಜನು ತಾನು ಪ್ರತೀಕಾರ ತೆಗೆದುಕೊಳ್ಳುವುದಾಗಿ ತೀರ್ಮಾನಿಸಿದನು. ಕೊನೆಯಲ್ಲಿ ಆತನು ಬ್ರಾಹ್ಮಣರನ್ನು ಭೋಜನಕ್ಕೆ ಆಹ್ವಾನಿಸಿದನು. ಆ ಬ್ರಾಹ್ಮಣರು ಊಟಕ್ಕೆಬರುವ ಮೊದಲೇ ಈ ರಾಜನು ತನ್ನ ಸೇವಕರಿಗೆ ಪಾತ್ರೆಗಳಲ್ಲೆಲ್ಲ ಮಲವನ್ನು ತುಂಬಿಸಿ ಬಾಳೆ ಎಲೆಗಳಿಂದ ಅವುಗಳನ್ನು ಮುಚ್ಚಬೇಕೆಂದು ಹೇಳಿದ್ದನು. ದಾರಿಯಲ್ಲಿ ಬರುತ್ತಿದ್ದಂತೆ ಬ್ರಾಹ್ಮಣರು ಭೋಜನ ವೇಳೆಯಲ್ಲಿ ತಾನು ಅತ್ಯಂತ ಜಾಗರೂಕವಾಗಿರಬೇಕೆಂದು ಮಾತಾಡಿಕೊಂಡರು. ಭೋಜನ ಸಿದ್ಧವಾದಾಗ ರಾಜನ ಅಪ್ಪಣೆಯ ಮೇರೆಗೆ ಪಾತ್ರೆಗಳ ಮುಚ್ಚಳಗಳನ್ನು ತೆಗೆಯಲಾಯಿತು. ಆ ದೃಶ್ಯ ಅತ್ಯಂತ ಅಸಹ್ಯವಾಗಿತ್ತು. ರಾಜನು ಅವರನ್ನು ಇನ್ನಷ್ಟು ಅವಮಾನ ಮಾಡುವುದಕ್ಕಾಗಿ, "ನಿಮಗೆ ಮನಬಂದಷ್ಟು ತಿನ್ನುವುದು, ನೀವು ಇಷ್ಟ ಪಡುವಷ್ಟನ್ನು ಮನೆಗೆ ಕೊಂಡುಹೋಗುವುದು, ಏಕೆಂದರೆ ಇದೆಲ್ಲವನ್ನೂ ನಿಮಗಾಗಿಯೇ ಮಾಡಿರುವುದು. ನೀವು ಜನರೆದುರು ನನ್ನನ್ನು ಅಪಮಾನ ಮಾಡಿದಿರಿ, ಅದಕ್ಕಾಗಿ ನಿಮಗೆ ಈ ಸನ್ಮಾನ" ಎಂದನು. ಹೀಗೆ ಹೇಳಿ ಆತನು ಅವರನ್ನು ತನ್ನ ಕೊಲೆಗಾರರಿಗೆ ಒಪ್ಪಿಸಿದನು. ಕೊಲೆಗಾರರ ನಿರ್ದೇಶನದಂತೆ ಬ್ರಾಹ್ಮಣರು ಪಾತ್ರೆಗಳನ್ನು ಭುಜದಲ್ಲಿರಿಸಿಕೊಂಡು ಮೆಟ್ಟಲಿಳಿಯುತ್ತಿರಲು ಮೊದಲೇ ಆ ಮೆಟ್ಟಲುಗಳು ಜಾರುತ್ತಿದ್ದು ದರಿಂದ ಜಾರಿಬಿದ್ದರು. ಅಲ್ಲಿ ಅವರನ್ನು ಕ್ರೂರ ನಾಯಿಗಳು ಬೆನ್ನಟ್ಟಿದುವು. ಅವುಗಳಿಂದಲೂ ತಪ್ಪಿಸಿಕೊಂಡು ಕೆಲವರು ಪೂರ್ವ ಯೋಜಿತವಾದ ಹೊಂಡಗಳಲ್ಲಿ ಬಿದ್ದು ಸತ್ತರು. ಹೀಗೆ ಐನೂರುಬ್ರಾಹ್ಮಣರೂ ಸನ್ಯಾಸಿಗಳೂ ಸಾವನ್ನಪ್ಪಿದರು; ಆದರೆ ಈ ಪಾಪಕ್ಕೆ ದೇವತೆಗಳು ವಿವಿಧ ಉತ್ಪಾತಗಳನ್ನುಂಟು ಮಾಡಿ ಆ ರಾಜ್ಯವನ್ನು ನಾಶಮಾಡಿದರು.

ದಖ್ಖನ್ ಪ್ರದೇಶವು ತುಂಬಾ ಹಿಂದಿನಿಂದಲೇ ನಾಗರಿಕತೆಯು ನೆಲೆಯಾಗಿತ್ತು ಎಂಬ ಅಭಿಪ್ರಾಯವು ಇಲ್ಲೆಲ್ಲ ರೂಢವಾಗಿರುವುದನ್ನು ಕಾಣಬಹುದು. ಇದನ್ನು ಪ್ರಾಚೀನ ಬ್ರಾಹ್ಮಣ ಲೇಖಕರು ಹಾಗೂ ಬೌದ್ಧರೂ ಸರಿಸಮವಾಗಿಯೇ ತಮ್ಮ ಬರವಣಿಗೆಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಪುರಾಣಗಳಲ್ಲಿ ಮತ್ತು ಮಹಾಕಾವ್ಯಗಳಲ್ಲಿ ಭಾರತದ ಇತರ ಭಾಗಗಳಂತೆಯೇ ದಖ್ಖನ್ನಿನ ವಿವರಣೆಯು ಕಂಡುಬರುತ್ತದೆ. ಹೀಗೆ ಪೌರಾಣಿಕ ಕಾಲದಿಂದ ಹಾಗೂ ಐತಿಹಾಸಿಕ ಕಾಲದಿಂದ ದಖ್ಖನ್ನಿನ ವಿವರಣೆಗಳು ಕಂಡುಬರುತ್ತಲೇ ಇವೆ. ಹೀಗೆ ದಕ್ಷಿಣಭಾರತದ ಬಗೆಗಿನ ಈ ಎಲ್ಲ ವಿವರಣೆಗಳಿಂದ ಇಲ್ಲಿ ರಾಜನ ಆಳ್ವಿಕೆ ಇತ್ತು ಎಂಬುದು ಸ್ಪಷ್ಟವಾಗುತ್ತದೆಯಲ್ಲದೆ ಇಲ್ಲಿ ಅನೇಕ ರಾಜ್ಯಗಳೂ ಇದ್ದವು ಎಂಬುದೂ ಸ್ಪಷ್ಟವಾಗುತ್ತದೆ. ಇದಕ್ಕೆ ದಂಡಕಾರಣ್ಯವು ಅಪವಾದವಾಗಿ ಕಂಡುಬರುತ್ತದೆ.

ಮಹಾಭಾರತದಲ್ಲಿ ದಖ್ಖನ್ನಿನ ಬಗೆಗೆ ವಿವರಣೆ ಕಡಿಮೆ ಎಂದೇ ಹೇಳಬೇಕು; ಆದರೂ ವಿದರ್ಭ ರಾಜ್ಯವು ತನ್ನ ಸಿರಿಸಂಪತ್ತಿನಿಂದಾಗಿ ಹಾಗೂ ಇತರ ನಾಗರಿಕ ಗುಣಲಕ್ಷಣಗಳಿಂದ ಪ್ರಸಿದ್ಧವಾಗಿತ್ತು. ದಮಯಂತಿಯ ಸ್ವಯಂವರದ ಸಂದರ್ಭದಲ್ಲಿ ಬರುವ ಈ ವರ್ಣನೆಗಳಿಂದ ಅದು ಸ್ಪಷ್ಟವಾಗುತ್ತದೆ :

ಆ ಶುಭ ಸಂದರ್ಭ ಒದಗಿ ಬರಲಿ, ಹುಣ್ಣಿಮೆಯ ದಿನ ಬರಲಿ ಆ ಕ್ಷಣ ಕೂಡಿ ಬರಲಿ;

ಭೀಮರಾಜನು ಭೂಮಿಯ ಎಲ್ಲ ರಾಜರಿಗೂ ಸ್ವಯಂವರದ ಕರೆಯೋಲೆಯನ್ನು ಕಳುಹಿಸಿದನು.

ಭೂಮಿಯ ಎಲ್ಲ ಅರಸರ ಹೃದಯದಲ್ಲಿಯೂ ಪ್ರೇಮಾಂಕುರವಾಗ ತೊಡಗಿತು.

ದಮಯಂತಿಯನ್ನು ಬಯಸಿ ಹಿತಶತ್ರುಗಳಾಗಿ ಎಲ್ಲ ರಾಜರೂ ಬರತೊಡಗಿದರು.

ಅವರು ಸ್ವರ್ಣ ಖಚಿತವಾದ ಒಡ್ಡೋಲಗ ಭವನಕ್ಕೆ ಹೊಳೆಯುವ ಮಹಾದ್ವಾರದ ಕಮಾನುಗಳ ಮೂಲಕ,

ಸಿಂಹಗಳು ಪರ್ವತವನ್ನು ಹೊಗುವಂತೆ ಪ್ರವೇಶಿಸಿದರು. ಅಲ್ಲಿ ಭೂಮಂಡಲದ ರಾಜಾಧಿರಾಜರು ಅವರವರಿಗೆ ಉಚಿತವಾದ ಆಸನಗಳಲ್ಲಿ ಮಂಡಿಸಿದ್ದರು.

ಅವರು ಪರಿಮಳ ಭರಿತವಾದ ಮಾಲೆಗಳನ್ನು ಧರಿಸಿದ್ದರು.

ಅವರ ಕಿವಿಗಳಲ್ಲಿ ಮಣಿಕುಂಡಲಗಳು ಶೋಭಿತವಾಗಿದ್ದವು.

ಅವರ ಕೈಗಳಲ್ಲಿ ಹರಿತವಾದ ಹೊಳೆಯುವ ಖಡ್ಗಗಳಿದ್ದುವು. ಕೆಲವು ಆಯುಧಗಳು ಐನೂರು ತಲೆಗಳಿರುವ ಸರ್ಪಗಳ ಹಾಗೆ ವಿಷಪೂರಿತವೂ ಕೂರಲಗುಳ್ಳವೂ ಆಗಿದ್ದುವು. ಹೊಳೆಯುವ ಮುಂಗುರುಳುಗಳು ಅಲುಗಾಡುತ್ತಿರಲು ತೀಡಿದ ಮೂಗಿನ ಹಾಗೂ ಹುಬ್ಬುಗಳುಳ್ಳ ಕಣ್ಣುಗಳ ರಾಜರು ಆಕಾಶದಲ್ಲಿ ಹೊಳೆಯುವ ನಕ್ಷತ್ರಗಳ ಹಾಗೆ ಕಂಗೊಳಿಸುತ್ತಿದ್ದರು. ಇಂತಹ ರಾಜಾಧಿರಾಜರಿಂದ ಭೋಗವತಿಯ ವಿಸ್ತಾರವಾದ ಸಭಾಮಂಟಪವು ತುಂಬಿ ತುಳುಕುತ್ತಿತ್ತು.

ವ್ಯಾಘ್ರಗಳಿಂದ ಪರ್ವತದ ಗುಹೆಗಳು ತುಂಬಿರುವ ಹಾಗೆ ವ್ಯಾಘ್ರಸಮ ಅರಸರೊಪ್ಪಿದರು. ದಮಯಂತಿಯು ತನ್ನ ಅನುಪಮವಾದ ಸೌಂದರ್ಯದಿಂದ ಕಂಗೊಳಿಸುತ್ತ ಅಂತಹ ಆಸ್ಥಾನಕ್ಕೆ ಪ್ರವೇಶಿಸಿದಳು. ಆಕೆಯ ಶರೀರ ಕಾಂತಿಯು ಎಲ್ಲರ ಕಣ್ಣುಗಳಲ್ಲಿಯೂ ಎಲ್ಲರ ಹೃದಯಗಳಲ್ಲಿಯೂ ಪ್ರತಿಫಲಿಸಿತು.

ಆಕೆಯ ಅಪ್ರತಿಮ ರೂಪವು ಗರ್ವಿಷ್ಠರಾದ ಎಲ್ಲ ರಾಜರ ಕಣ್ಮನಗಳನ್ನು ಸೆಳೆಯಿತು. ಅವರು ಆ ಕನ್ಯಾಮಣಿಯನ್ನು ನೋಡುತ್ತಿರಲಾಗಿ ಅಲ್ಲಿಯೇ ದೃಷ್ಟಿಗಳು ಕೀಲಿಸಿದವು, ಅವರು ಮೂಕ ಪ್ರೇಕ್ಷಕರಾದರು.

ರಾಮಾಯಣದ ಬಹುಭಾಗವು ದಖ್ಖನ್ನಿನಲ್ಲಿಯೇ ನಡೆಯುತ್ತದೆ. ಈ ಪ್ರಬಂಧಕ್ಕೆ ಸಂಬಂಧಿಸಿದಂತೆ ರಾಮಾಯಣದ ಸುಂದರ ಕಾಂಡದಲ್ಲಿ ಬರುವ ಈ ವಿವರಗಳನ್ನು ಗಮನಿಸಿದರೆ ಸಾಕಾಗುತ್ತದೆ. ಇಲ್ಲಿ ಸೀತಾನ್ವೇಷಣೆಗಾಗಿ ವಾನರ ಸೈನ್ಯವು ತುಂಗಭದ್ರಾ ನದಿಯ ತೀರದಿಂದ ಆರಂಭಿಸಿ, ಇಡೀ ಜಂಬೂದ್ವೀಪ ಸಹಿತವಾಗಿ ಶ್ರೀಲಂಕಾದವರೆಗೆ ಸಾಗುತ್ತದೆ. ಇಲ್ಲಿ ನಮಗೆ ತಿಳಿದುಬರುವಂತೆ ಈಗಾಗಲೇ ರಾಜ್ಯಭಾರವನ್ನು ಮಾಡುತ್ತಿರುವ ರಾಜರು ಇದ್ದರು. ಮೇಖಲರು, ಉತ್ಕಲರು, ದಶಾರ್ಣವರು, ವಿದರ್ಭರು, ಋಷಿಕರು, ಮಹಿಷಿಕರು, ಮತ್ಸ್ಯರು, ಕಾಳಿಂಗರು, ಕಾಶಿಕರು, ಆಂಧ್ರರು, ಮಂಧ್ರರು, ಚೋಳರು, ಪಾಂಡ್ಯರು ಮತ್ತು ಕೇರಳರೂ ಅಲ್ಲಿ ರಾಜ್ಯಭಾರ ಮಾಡುತ್ತಿದ್ದರು. ದಕ್ಷಿಣದ ನಗರಗಳಿಗೆ ಮುಕುಟಮಣಿಯಾಗಿ ಶೋಭಿತವಾದ ಭೋಗವತಿಯ ವರ್ಣನೆಯು ಹೀಗೆ ಅಲ್ಲಿ ಮುಂದುವರಿಯುತ್ತದೆ.

ಭೋಗವತಿಯ ಸಮೀಪದಲ್ಲಿ ಸರ್ಪಗಳ ವಾಸಸ್ಥಾನವು ಕಂಗೊಳಿಸುತ್ತದೆ.
ಅದು ಹೆದ್ದಾರಿಗಳಿಂದಲೂ, ಗೋಡೆಗಳಿಂದಲೂ, ನಿರ್ಭಯವಾಗಿ
ಕಾಳಸರ್ಪಗಳ ರಕ್ಷಣೆಯಿಂದ ರಕ್ಷಿತವಾಗಿದೆ.
ತೀಕ್ಷ್ಣವಾದ ಕಣ್ಣುಗಳುಳ್ಳ ಯುವಸರ್ಪಗಳು
ಹರಿತವಾದ ತಮ್ಮ ಹಲ್ಲುಗಳನ್ನು ಮಸೆಯುತ್ತ
ವೈಭವಯುತವಾದ ಒಡ್ಡೋಲಗ ಶಾಲೆಯಲ್ಲಿ
ಕಿರೀಟ ಧಾರಿಯಾದ ವಾಸುಕಿಯಿಂದ ಪರಿಪಾಲಿತರಾಗಿದ್ದಾರೆ.
ವಾಸುಕಿಯ ನಗರವನ್ನು ಚೆನ್ನಾಗಿ ಶೋಧಿಸಿರಿ
ನಗರ, ನಗ, ಕಂದರಗಳನ್ನು ಹುಡುಕಿರಿ
ಬಯಲು, ಮರ-ಮರಗಳನ್ನು ನಿಮ್ಮ ಎಚ್ಚರಿಕೆಯ ಕಣ್ಣುಗಳಿಂದ ಹುಡಿಕಿರಿ.

ಪುರಾಣದಲ್ಲಿಯೂ ಸಹ ರಾಮಾಯಣದಲ್ಲಿ ಹೇಳಲಾದ ಜನಗಳ ವಿವರಣೆಯು ಬರುತ್ತದೆ. ಹಾಗೆಯೇ ದಕ್ಷಿಣ ಭಾರತದಲ್ಲಿ ಅಂದು ಆಳುತ್ತಿದ್ದ ಇತರ ರಾಜ್ಯಗಳನ್ನೂ ಅದು ಹೆಸರಿಸುತ್ತದೆ. ದಖ್ಖನ್ನಿನಲ್ಲಿ ಈ ಜನಗಳು ಪ್ರಾಚೀನ ಕಾಲದಿಂದಲೇ ವಾಸಮಾಡುತ್ತಿದ್ದರು. ಕಾಳಿಂಗರು ಕಳಿಂಗದಿಂದ ಬಂದವರಾಗಿದ್ದು, ಅವರು ಬಾಲಿಯ ಐದು ಜನ ಮಕ್ಕಳಲ್ಲಿ ಒಂದು ಶಾಖೆಯಾಗಿದ್ದವರು. ಅದು ಚಂದ್ರವಂಶದ ಹತ್ತೊಂಬತ್ತನೆಯ ಶಾಖೆಯಾಗಿದೆ.

ಕಾಳಿದಾಸನ 'ರಘುವಂಶ' ಕಾವ್ಯದಲ್ಲಿ, ರಘು ದಿಗ್ವಿಜಯದ ಸಲುವಾಗಿ ಇಡೀ ಭಾರತದ ಮೇರೆಯನ್ನು ಸುತ್ತಾಡಿದುದರ ವಿವರಣೆಯು ಬರುತ್ತದೆ. ಆಗ ಪ್ರಾಸಂಗಿಕವಾಗಿ ಅಲ್ಲಿ ಅಸ್ತಿತ್ವ ದಲ್ಲಿದ್ದ ರಾಜ್ಯಗಳ ವಿವರವೂ ಆ ಕಾವ್ಯದಲ್ಲಿ ಬರುತ್ತದೆ.

ಆಯೋಧ್ಯೆಯಿಂದ ಆರಂಭಿಸಿ, ದಂಡನಾಯಕನ ಸೈನ್ಯವೊಂದು ಸಮುದ್ರಾಭಿಮುಖವಾಗಿ ಪೂರ್ವಕ್ಕೆ ಸಾಗುತ್ತದೆ. ಆತನು ಈ ಭಾಗಗಳನ್ನೆಲ್ಲ ಗೆದ್ದುಕೊಂಡ ಮೇಲೆ ಪೂರ್ವ ಕರಾವಳಿಯ ಗುಂಟ ಸಾಗಿ ದಕ್ಷಿಣಕ್ಕೆ ಬರುತ್ತಾನೆ. ಹಾಗೆ ಬರುವಾಗ ಒರಿಸ್ಸಾ (ಉತ್ಕಲ), ಕಾಳಿಂಗ, ಚೋಳ ಮತ್ತು ಪಾಂಡ್ಯ ರಾಜ್ಯಗಳನ್ನು ಹಾದುಬರುತ್ತಾನೆ. ಮತ್ತೆ ಉತ್ತರಾಭಿಮುಖವಾಗಿ ತಿರುಗಿ ಪಶ್ಚಿಮ ಕರಾವಳಿ ಗುಂಟ ಸಾಗಿ ಅಲ್ಲಿನ ಸಾಮ್ರಾಜ್ಯಗಳನ್ನು-ಕೇರಳ, ಕೊಡಗು, ತ್ರಿಕೂಟ ಗೆದ್ದು, ಪಾರಶಿಕ ಮತ್ತು ಯವನರನ್ನು ಸೋಲಿಸಿ ಸಿಂಧೂನದಿಯ ದಂಡೆಯಲ್ಲಿ ಸಾಗಿ ಹೂಣರನ್ನು ಸೋಲಿಸುತ್ತಾನೆ. ಸಿಂಧೂನದಿಯನ್ನು ಉತ್ತರಿಸುವಲ್ಲಿ ಆತನು ಕಾಂಭೋಜ ಸಾಮ್ರಾಜ್ಯವನ್ನು ಪ್ರವೇಶಿಸುತ್ತಾನೆ. ಆ ಸಾಮ್ರಾಜ್ಯವನ್ನು ವಶಪಡಿಸಿ ಕೊಂಡಾದಮೇಲೆ ಹಿಮಾಲಯ ಪರ್ವತಗಳತ್ತ ಸಾಗಿ ಅಲ್ಲಿಯ ಕಿರಾತಕರನ್ನು ಮತ್ತು ಉತ್ಸವ ಸಂಕೇತರನ್ನು ಸೋಲಿಸುತ್ತಾನೆ. ಮುಂದೆ ಆತ ಬ್ರಹ್ಮಪುತ್ರದ ಕಣಿವೆಗುಂಟ ಸಾಗಿ, ಪ್ರಾಗ್ಜ್ಯೋತಿಷವನ್ನು ಗೆಲ್ಲುತ್ತಾನೆ. ಅಂತಿಮವಾಗಿ ಕಾಮಪುರದ ಮೂಲಕ ಆತನು ತನ್ನ ಸಾಮ್ರಾಜ್ಯಕ್ಕೆ ಬರುತ್ತಾನೆ.

ರಘುವಂಶದಲ್ಲಿ ಇನ್ನೊಂದು ಕಡೆ ಇದಕ್ಕೆ ಸಂವಾದಿಯಾದ ಇನ್ನೊಂದು ವಿವರವು ಹೀಗೆ ಬರುತ್ತದೆ: ಅದು ಇಂದುಮತಿಯ ಸ್ವಯಂವರಕ್ಕೆ ಸಂಬಂಧಿಸಿದ ವಿವರವಾಗಿದೆ ಇಂದುಮತಿಯು ವಿದರ್ಭರಾಜನ ಮಗಳು. ವಾವೆಯಲ್ಲಿ ರಾಮನ ಅಜ್ಜಿ. ಅಂತೆಯೇ ಅದು ರಘುವಿನ ದಿಗ್ವಿಜಯದ ಕತೆಯೂ ಆಗಿದೆ. ಮಗಧ, ಅಂಗ, ಮಾಳವ, ಅನೂಪ ಮತ್ತು ಶೂರಸೇನ ಮೊದಲಾದ ರಾಜರನ್ನು ಆಕೆ ತಿರಸ್ಕರಿಸಿದಳು. ಆವಳು ಅವರೆಲ್ಲರನ್ನು ತಿರಸ್ಕರಿಸಿದಳು. ಆಮೇಲೆ ಅವನನ್ನು ಅನುಸರಿಸಿ ಕಾಳಿಂಗ ರಾಜನನ್ನು ತೋರಿಸಲಾಯಿತು. ಆ ರಾಜಾ ಮಹೇಂದ್ರವರ್ಮನ ಬಾಹುಗಳಲ್ಲಿ ಸಮುದ್ರ ಆಲೆಗಳ ಮೊರೆತದ ಹಾಗಿರುವ ದನುಷ್ಠಂಕಾರವನ್ನು ಮಾಡುವ ಧನುಸ್ಸಿನ ಅಚ್ಚುಗಳು ಮೂಡಿದ್ದವು. ಅವನನ್ನು ಇಂದುಮತಿಯು ತಿರಸ್ಕರಿಸಿದಳು. ಆಮೇಲೆ ಪಾಂಡ್ಯ ರಾಜನ ಸರದಿ. ಆತನ ಕೊರಳಿನಲ್ಲಿ ಹಳದಿ ಗಂಧದ ಎಲೆಗಳ ಮಾಲೆಗಳು ಶೋಭಿಸುತ್ತಿದ್ದುವು. ಆತನು ಸೂರ್ಯೋದಯದಲ್ಲಿ ಕಂಗೊಳಿಸುವ ಪರ್ವತಗಳ ರಾಜನಾದ ಹಿಮಮಂತನ ಹಾಗೆ ಕಾಣಿಸುತ್ತಿದ್ದನು. ಆದರೆ ರಾಜಕುಮಾರಿಯು ಆತನನ್ನು ಪರಿಗಣಿಸಲಿಲ್ಲ. ಆಕೆಯು ರಘುವಿನ ಮಗನ ಬಳಿಗೆ ಬಂದಾಗ ಆತನು ಅನುಮಾನಗೊಂಡನು. ಆದರೆ ಅದು ಆಕೆಯ ಬಲಗೈಯ ಚಲನೆಯಿಂದ ದೂರವಾಯಿತು..... ಹೀಗೆ ರಘುವಿನ ಮಗನಾದ ಅರ್ಜುನನನ್ನು ಇಂದುಮತಿಯು ವರಿಸಿದಳು. ರಾಜ ವಧೂ-ವರರು ವಿದರ್ಭ ನಗರಿಯ ಹೆದ್ದಾರಿಗಳಲ್ಲಿ ನಡೆತಂದರು. ಆಗ ನಗರದ ಬೀದಿಗಳನ್ನು ತಳಿರು-ತೋರಣಗಳಿಂದ ಅಲಂಕರಿಸಲಾಗಿತ್ತು. ಯುದ್ಧೋಚಿತವಾದ ಧ್ವಜಗಳ ಹಾರಾಡುವಿಕೆಯಿಂದ ನಗರದ ಬೀದಿಗಳಲ್ಲಿ ನೆರಳುಂಟಾಗಿತ್ತು. ಹೆಂಗಸರು ತಮ್ಮ ಮನೆಕೆಲಸಗಳನ್ನು ಬಿಟ್ಟು ಕಿಟಕಿಗಳ ಮರೆಯಲ್ಲಿ ನಿಂತಿದ್ದರು. ಅವರ ಕಣ್ಣುಗಳು ಭಾವುಕ ವಾಗಿದ್ದವು. ವಿದರ್ಭರಾಜನಾದ ಭೋಜರಾಜನು ಅಜಮಹಾರಾಜನನ್ನು ಆನೆಯಿಂದಿಳಿಸಿ, ಅರಮನೆಗೆ ಕರೆದುಕೊಂಡು ಹೋದನು. ಅವನನ್ನು ಉಚಿತವಾದ ಆಸನದಲ್ಲಿ ಕುಳ್ಳಿರಿಸಿ

ರತ್ನಖಚಿತವಾದ ಕಿರೀಟವನ್ನು ತಲೆಯ ಮೇಲಿರಿಸಿದನು. ಅರ್ಘ್ಯ-ಮಧುಪರ್ಕಗಳನ್ನಿತ್ತನು. ಒಂದು ಜತೆ ರೇಶ್ಮೆ ವಸ್ತ್ರಗಳನ್ನು ಧರಿಸಿಕೊಂಡು ಹುಣ್ಣಿಮೆಯಂದು ಅಲೆಗಳು ಸಮುದ್ರ ತೀರಕ್ಕೆ ಆಕರ್ಷಿತವಾಗುವಂತೆ ಅಜಮಹಾರಾಜನು ಇಂದುಮತಿಯ ಬಳಿಗೆ ಹೋದನು. ಆಮೇಲೆ ಭೋಜರಾಜನ ಪುರೋಹಿತನು ಅಗ್ನಿಗೆ ಹವ್ಯಕವ್ಯಗಳನ್ನು ಅರ್ಪಿಸಿ, ಪಾಣಿಗ್ರಹಣವನ್ನು ನೆರವೇರಿಸಿದನು. ವಿವಾಹಮಹೋತ್ಸವದ ಅನಂತರ ಮೂರು ದಿನಗಳವರೆಗೆ ಭೋಜರಾಜನು ಅಜನನ್ನು ಇರಿಸಿಕೊಂಡು ಆಮೇಲೆ ಅವನ ಸಾಮ್ರಾಜ್ಯಕ್ಕೆ ಕಳುಹಿಸಿಕೊಟ್ಟನು. ಅಜನನ್ನು ನೋಡುತ್ತಲೇ ತಿರಸ್ಕೃತರಾದ ರಾಜರು ವಧುವನ್ನು ಅಪಹರಿಸಲು ಅವನ ಮೇಲೆ ಮುಗಿಬಿದ್ದು ವೀರಾವೇಶದಿಂದ ಹೋರಾಡಿದರು. ಪುಂಖಾನು ಪುಂಖವಾಗಿ ಬಾಣ ಪ್ರಯೋಗ ಮಾಡಿದ ಅಜನು ಅವರೆಲ್ಲರನ್ನು ಬೆನ್ನಟ್ಟಿದನು. ಹೀಗೆ ಆತನು ನವವಧುವನ್ನು ಸುರಕ್ಷಿತವಾಗಿ ಕೋಸಲಕ್ಕೆ ಕರೆದೊಯ್ದನು.

ಇಲ್ಲೀಗ ಒಂದು ಪ್ರಶ್ನೆ ಬರಬಹುದು. ಪ್ರಾಚೀನ ದಖ್ಖನ್ ಭೂಪ್ರದೇಶವು ದಂಡಕಾರಣ್ಯದ ಭೂಭಾಗವೇ ಎಂದು ತಿಳಿಯುವುದಾದರೂ ಹೇಗೆ? ಎಂಬುದೇ ಆ ಪ್ರಶ್ನೆ. ಆದರೆ ಇಲ್ಲಿ ಅಂತಹ ಸಮಸ್ಯೆಯೇನೂ ಇಲ್ಲ. ಇಲ್ಲಿ ಸಮಸ್ಯೆಯಿರುವುದು ದಂಡಕಾರಣ್ಯವು ದಖ್ಖನ್ನಿನಲ್ಲೆಲ್ಲ ಪಸರಿಸಿತ್ತು ಎಂದು ತಿಳಿಯುವುದರಲ್ಲಿಯೇ. ರಾಮಾಯಣದಲ್ಲಿ ಬರುವ ದಂಡಕಾರಣ್ಯದ ವರ್ಣನೆಯು ಕೇವಲ ಕವಿಕಲ್ಪನೆಯ ಹುಮ್ಮಸ್ಸಿನಿಂದ ಮಾತ್ರವೇ ಅಲ್ಲದೆ, ವಾಸ್ತವ ಚಿತ್ರಣದ ಅರಿವಿನ ಹಿನ್ನೆಲೆ ಯಲ್ಲಿಯೂ ಮಾಡಿರುವುದಾಗಿದೆ ಎಂಬುದು ಅಲ್ಲಿಯ ವಿವರಗಳಿಂದ ತಿಳಿದುಬರುತ್ತದೆ. ಕವಿಯು ರಾಮನು ದಂಡಕಾರಣ್ಯದಲ್ಲಿ ಸಂಚರಿಸುವುದನ್ನು ವಿವರ ವಿವರವಾಗಿ ನಮಗೆ ವರ್ಣಿಸುತ್ತಾನೆ. ಅರಣ್ಯವು ಒಳಗೊಂಡಿದ್ದ ದಖನ್ನಿನ ಭಾಗವನ್ನು ವಿದರ್ಭದವರೂ ಆಳುತ್ತಿದ್ದರು. ಅಲ್ಲಿಗೆಲ್ಲ ಸೀತೆಯನ್ನು ಅರಸುವುದಕ್ಕೆ ವಾನರರನ್ನು ಕಳುಹಿಸಲಾಯಿತು. ಅದಲ್ಲದೆ, ದಂಡಕಾರಣ್ಯಕ್ಕೆ ಸಂಬಂಧಿಸಿದ ಮುಂದಿನ ವರ್ಣನೆಗಳ ಮೂಲಕ ಅದು ದಖ್ಖನ್ನಿನ ಕೆಲವೇ ಭಾಗಕ್ಕೆ ಮಾತ್ರವೇ ಸೀಮಿತವಾಗಿತ್ತು ಎಂಬುದಾಗಿಯೂ ತಿಳಿದುಬರುತ್ತದೆ. ಅಲ್ಲದೆ ಈಗ ಹೇಳಿದ ರಾಜ್ಯಗಳಿಂದ ಅದು ಸ್ವಲ್ಪಮಟ್ಟಿಗೆ ದೂರದಲ್ಲಿಯೇ ಇತ್ತು. ದಕ್ಷಿಣದಲ್ಲಿ ಹರಿಯುವ ಅನೇಕ ನದಿಗಳನ್ನು ವರ್ಣಿಸಿದ ಬಳಿಕ ಮುಂದಿನ ವಿವರವು ಹೀಗೆ ಬರುತ್ತದೆ :-

"ವಿದರ್ಭಾನೃಷಿಕಾಂಶ್ಚೈವ ರಮ್ಯಾನ್ ಮಾಹಿಷಕಾನಪಿ
ತಥಾಮತ್ಸ್ಯಕಾಳಿಂಗಾಂಶ್ಚ ಕಾಶಿಕಾಂಶ್ಚ ಸಮಂತತಃ
ಅನ್ವಿಶ್ಯ ದಂಡಕಾರಣ್ಯಂ ಸಪರ್ವತನದೀ ಗುಹಮ್
ನದೀಂ ಗೋದಾವರಿಶ್ಚೈವ ಸರ್ವಮೇವಾನುಪಶ್ಯತ
ತಥೈವಾಂಧ್ರಾಂಶ್ಚ ಪುಂಡ್ರಾಶ್ಚ ಚೋಳಪಾಂಡ್ಯನ್ ಸಕೇರಳಾನ್"

ಹೀಗೆ ದಂಡಕಾರಣ್ಯವು ಬೇರೆ ಬೇರೆ ರಾಜ್ಯಗಳಿಂದ ಬೇರ್ಪಟ್ಟಿರುವುದಾಗಿ, ಆ ರಾಜ್ಯಗಳೂ ಪರಸ್ಪರ ದೂರ-ದೂರದಲ್ಲಿಯೇ ಇದ್ದವು. ದಂಡಕಾರಣ್ಯಕ್ಕೆ ಇನ್ನಷ್ಟು ದೂರವಾಗಿದ್ದ ರಾಜ್ಯಗಳನ್ನು ಇನ್ನೊಂದು ವರ್ಗದ ರಾಜ್ಯಗಳನ್ನಾಗಿ ಪರಿಗಣಿಸಲಾಗಿತ್ತು.

ಕಾಳಿದಾಸನ 'ರಘುವಂಶ' ಕಾವ್ಯದಲ್ಲಿ ಭಾರತದ ಭೌಗೋಳಿಕ ವಿವರಗಳು ದಟ್ಟವಾಗಿ ಬರುತ್ತವೆ. ರಘುವಿನ ಮೊಮ್ಮಕ್ಕಳು ವನವಾಸಕ್ಕೆ ದಂಡಕಾರಣ್ಯಕ್ಕೆ ಬರುವಾಗಿನ ವಿವರಗಳು ತುಂಬ ಮನೋಜ್ಞವಾಗಿವೆ. ಆತನು ದಖ್ಖನ್ನಿನ ಬಲಿಷ್ಠ ಸಾಮ್ರಾಜ್ಯಗಳನ್ನು ವಿಶೇಷವಾಗಿ ವರ್ಣಿಸುತ್ತಾನಾದರೂ, ರಘು ಮತ್ತು ಇಂದುಮತಿಯರು ವಿಜಯೋತ್ಸವ ದೊಂದಿಗೆ ಬರುವಾಗ ಅಲ್ಲಿ ದಂಡಕಾರಣ್ಯದ ವಿವರವು ಪ್ರಾಸಂಗಿಕವಾಗಿ ಬರುತ್ತದೆ; ಅವರು ಹದಿನಾಲ್ಕು ವರ್ಷದ ವನವಾಸದಲ್ಲಿ ಹದಿಮೂರು ವರ್ಷವೂ ಅಲ್ಲಿದ್ದುದಾಗಿ ವರ್ಣಿತವಾಗಿದೆ. ಆ ಸಮಯದಲ್ಲಿ ದಂಡಕಾರಣ್ಯದ ಅಕ್ಕಪಕ್ಕದಲ್ಲಿರುವ ಯಾವ ರಾಜ್ಯಗಳಿಗೂ ಅವರು ಪ್ರವೇಶಿಸಿದ ವಿವರಗಳಿಲ್ಲ.

ಈ ಮೇಲಿನ ಎಲ್ಲ ವಿವರಗಳಿಂದ ತಿಳಿದು ಬರುವಂತೆ, ದಂಡಕಾರಣ್ಯವು ಅದರ ಮೇರೆಗಳು ಏನೇ ಇರಲಿ, ಅವು ಅಸ್ತಿತ್ವದಲ್ಲಿ ಇರಲಿ ಇಲ್ಲದಿರಲಿ ರಘು, ಅಜ, ದಶರಥ ಮತ್ತು ರಾಮರ ಆಳ್ವಿಕೆಯ ಕಾಲದಲ್ಲಿ ಇಡೀ ದಖ್ಖನ್ನಿನ ಭೂಪ್ರದೇಶವನ್ನು ಅದು ಆವರಿಸಿರಲಿಲ್ಲ. ಹಾಗೆಯೇ ಈ ಹಿಂದೆಯಾಗಲೀ ಅಥವ ಆ ವರ್ತಮಾನ ಕಾಲದಲ್ಲಾಗಲೀ ಅಷ್ಟೆಲ್ಲ ರಾಜ್ಯಗಳು ಸುತ್ತುಮುತ್ತು ಇರುವಾಗ ಅದು ಹಾಗೆ ಪಸರಿಸುವುದಕ್ಕೆ ಸಾಧ್ಯವೂ ಇಲ್ಲವೆಂಬುದನ್ನೂ ಗಮನಿಸಬೇಕು.

ಇದೀಗ ಅಲ್ಲಲ್ಲಿ ಉಲ್ಲೇಖಿಸಿದ ಬೇರೆ ಬೇರೆ ವಿವರಗಳಿಂದ ಈ ಪ್ರಬಂಧಕ್ಕೆ ಅನೇಕ ಆಧಾರಗಳು ಲಭ್ಯವಾದವು. ಹಿಂದೂ ಮತ್ತು ಬೌದ್ಧ ಮತೀಯ ಪ್ರಾಚೀನ ಇತಿಹಾಸ ಗ್ರಂಥಗಳು ಮತ್ತು ಪುರಾಣಗಳಲ್ಲಿ ಒಂದು ವಿಷಯದ ಬಗೆಗೆ ಒಮ್ಮತಾಭಿಪ್ರಾಯವಿದೆ. ಅದೇನೆಂದರೆ ತುಂಬಾ ಪ್ರಾಚೀನ ಕಾಲದಿಂದಲೇ ದಖ್ಖನ್ನಿನಲ್ಲಿ ಒಂದು ಸುವ್ಯವಸ್ಥಿತವಾದ ಸಾಮ್ರಾಜ್ಯವು ನೆಲೆಗೊಂಡಿತ್ತು. ಅದು ರಘು ಮಹಾರಾಜನ ಆಳ್ವಿಕೆಗೆ ಮೊದಲೆಂಬುದರ ಬಗೆಗಂತೂ ಒಂದು ಜನಜನಿತ ಅಭಿಪ್ರಾಯವಾಗಿ ಈ ಗ್ರಂಥಗಳಲ್ಲಿ ಅಧಿಕೃತವಾಗಿ ವರ್ಣಿತವಾಗಿದೆ. ಆ ಸಾಮ್ರಾಜ್ಯವು ವಂಶಪಾರಂಪರ್ಯವಾಗಿತ್ತು ಮತ್ತು ಸ್ವಯಂಪೂರ್ಣ ವಾಗಿತ್ತು. ಅಂದರೆ, ರಾಜ-ರಾಜರ ನಡುವೆಯೇ ವೈವಾಹಿಕ ಸಂಬಂಧಗಳು ನೆರವೇರುತ್ತಿದ್ದುದರಿಂದ ಅಲ್ಲಿ ವರ್ಣಸಂಕರಕ್ಕೆ ಆಸ್ಪದವಿರಲಿಲ್ಲ. ಹಾಗೆಯೇ ರಾಜ ಕನ್ಯೆಯರು-ಕೆಲವೊಂದು ನಿದರ್ಶನಗಳಲ್ಲಾದರೂ-ಇತರ ರಾಜ ಮನೆತನದ ರಾಜಕುಮಾರ ರನ್ನು ಸ್ವಯಂವರದ ಮೂಲಕ ಮದುವೆಯಾಗುತ್ತಿದ್ದರು. ಆ ಕಾಲದಲ್ಲಿ ದಖ್ಖನ್ ಸಾಮ್ರಾಜ್ಯವು ಪೂರ್ವಭಾಗದಲ್ಲಿ ಒರಿಸ್ಸಾ, ಕಳಿಂಗ, ಚೋಳ ಮತ್ತು ಪಾಂಡ್ಯ ರಾಜ್ಯಗಳನ್ನು ಒಳಗೊಂಡಿತ್ತು. ಹಾಗೆಯೇ ಪಶ್ಚಿಮದಲ್ಲಿ ವಿದರ್ಭ, ಋಷಿಕ, ಮತ್ಸ್ಯ, ಕೌಶಿಕ, ಆಂಧ್ರ, ಪುಂಡ್ರ, ಮಾಹಿಷಕ, ಕೇರಳ ಮೊದಲಾದ ಸಾಮ್ರಾಜ್ಯಗಳಿದ್ದುವು. ಕಳಿಂಗ ಸಾಮ್ರಾಜ್ಯವು ಅನೇಕ ಪ್ರಾಂತಗಳಾಗಿ ವಿಂಗಡನೆಯಾಗಿತ್ತಲ್ಲದೆ ಅವುಗಳಲ್ಲಿ ಕೆಲವೊಂದು ಪ್ರಾಂತಗಳು ಸಾಮ್ರಾಜ್ಯದ ವಿರುದ್ಧ ದಂಗೆಯೇಳುತ್ತಲೂ ಇದ್ದುವು. ಆದರೆ ರಾಜನಲ್ಲಿ ಅಂತಹ ದಂಗೆಗಳನ್ನು ದುರ್ಬಲಗೊಳಿಸುವಷ್ಟು ಸಾಮರ್ಥ್ಯವುಳ್ಳ ಸೈನ್ಯ ಸಂಗ್ರಹವಿತ್ತು. ಈ

ಸಾಮ್ರಾಜ್ಯದಲ್ಲಿ ನಗರಗಳು, ಪಟ್ಟಣಗಳು, ಗ್ರಾಮಗಳು, ದುರ್ಗಗಳು, ಗೋಪುರಗಳು ಇದ್ದುವು. ಹಾಗೆಯೇ ಕೆಲವೊಂದು ನಗರಗಳಲ್ಲಿ ತುಂಬ ವಿಶಾಲವಾದ ಹೆದ್ದಾರಿಗಳು ಇದ್ದುವು. ಕೆಲವೊಂದು ನಗರಗಳ ಹೆದ್ದಾರಿಗಳಿಗೆ ಆನೆ ಬಾಗಿಲುಗಳು ಮತ್ತು ಗೋಡೆಗಳಿದ್ದುವು. ಹಾಗೆಯೇ ರಾಜಧಾನಿಯ ನಗರಗಳಲ್ಲಿ ವಿಶಾಲವಾದ ಸ್ಥಳಗಳಿದ್ದು ಅವುಗಳ ಮೇಲಂತಸ್ತಿನಲ್ಲಿ ಸುಮಾರು ಐನೂರು ಜನಕ್ಕೆ ಸಾಕಾಗುವಷ್ಟು ದೊಡ್ಡದಾದ ಭೋಜನ ಶಾಲೆಗಳಿದ್ದುವು. ವಿಶಾಲವಾದ ಉಗ್ರಾಣಗಳಿದ್ದುವಾಗಿ ಅವುಗಳಿಗೆ ಚಿನ್ನದ ಕಂಬಗಳಿರುತ್ತಿದ್ದುವು. ಅವುಗಳಿಗೆ ನೆಲಮಾಳಿಗೆಯಿಂದ ಬರಲು ರತ್ನಖಚಿತವಾದ ಮೆಟ್ಟಿಲುಗಳಿದ್ದುವು; ರಾಜಮಂದಿರಗಳು ಮತ್ತು ನಾಗರಿಕರ ಮನೆಗಳಿಗೆ ರಾಜಬೀದಿಗೆ ಮುಖಮಾಡಿ ಕಿಟಕಿಗಳಿದ್ದುವು; ಆ ರಾಜಧಾನಿಯಲ್ಲಿ ಕುಲೀನರ ಸಂಸಾರಗಳಿದ್ದುವು; ಕೆಲವೊಂದು ಕುಲೀನ ವ್ಯಕ್ತಿಗಳು ಆಸ್ಥಾನದಲ್ಲಿ ಸ್ಥಾನಮಾನಗಳನ್ನು ಹೊಂದಿದವರಾಗಿದ್ದು, ಅವರ ಇಷ್ಟಾನುಸಾರ ಅವುಗಳಲ್ಲಿ ಮುಂದುವರಿಯಬಹುದಾಗಿತ್ತು. ಇಲ್ಲವೇ ಬಿಡಬಹುದಿತ್ತು; ಹಾಗೆಯೇ ಆಸ್ಥಾನದಲ್ಲಿ ಪುರೋಹಿತನು ಬ್ರಾಹ್ಮಣನೇ ಆಗಿದ್ದು, ಅವನು ರಾಜನ ಇಷ್ಟಾನುಸಾರ ನೇಮಕ ಗೊಳ್ಳುತ್ತಿದ್ದನು. ಅಂದರೆ ಯಾವುದೇ ಬ್ರಾಹ್ಮಣ ಇಷ್ಟಾನುಸಾರ ನೇಮಕಗೊಳ್ಳುತ್ತಿದ್ದನು. ಅಂದರೆ, ಯಾವುದೇ ಬ್ರಾಹ್ಮಣನನ್ನು ರಾಜನು ತನಗೆ ಸರಿಕಂಡಾಗ ಪುರೋಹಿತನಾಗಿ ನೇಮಿಸಿ ಕೊಳ್ಳಬಹುದಿತ್ತು, ಇಲ್ಲವೇ ಕೈಬಿಡಬಹುದಾಗಿತ್ತು. ಆತನು ರಾಜರ ಮದುವೆಗಳನ್ನು ಮಾಡಿಸುವವನಾಗಿದ್ದನು. ಅವನು ರಾಜನಿಗೆ ಸಲಹೆ-ಸೂಚನೆಗಳನ್ನು ನೀಡುತ್ತಿದ್ದನು; ಹಾಗೆಯೇ ಬ್ರಾಹ್ಮಣರನ್ನು ರಾಜನು ಬೇಹುಗಾರರನ್ನಾಗಿ ನೇಮಿಸುತ್ತಿದ್ದನು. ಆ ಆಸ್ಥಾನದಲ್ಲಿ ಉತ್ತಮವಾದ ಸ್ಥಾನಮಾನಗಳನ್ನು ಹೊಂದಿದ್ದ ಅನೇಕ ಮಂದಿ ನರ್ತಕಿಯರಿದ್ದರು. ಅವರ ಸೇವೆಗೆ ಅನೇಕ ಮಂದಿ ಸೇವಕರೂ ಇರುತ್ತಿದ್ದರು. ಅವರು ಕಾವಲುಗಾರರು, ಭಟರು ಹಾಗೂ ಕಾವಲು ನಾಯಿಗಳಿಂದ ರಕ್ಷಿತರಾಗಿರುತ್ತಿದ್ದರು. ರಾಜನಲ್ಲಿ ಬಲಶಾಲಿಗಳಾದ ಸೈನಿಕರಿದ್ದು ಅವರಲ್ಲಿ ವಿವಿಧ ರೀತಿಯ ಆಯುಧಗಳಿರುತ್ತಿದ್ದುವು. ಅದರಲ್ಲಿಯೂ ಕಳಿಂಗ ರಾಜನು ಆನೆಗಳನ್ನು ಪಳಗಿಸಿ ಯುದ್ಧಕ್ಕೆ ಬಿಡುವುದರಲ್ಲಿ ನಿಪುಣನಾಗಿದ್ದನು. ನಗರವು ನಗರ ರಕ್ಷಕ ಭಟರ ತಂಡಗಳಿಂದ ಸುರಕ್ಷಿತವಾಗಿರುತ್ತಿತ್ತು. ರಾಜ್ಯದ ನಾಗರಿಕರು ಹೊಲಗದ್ದೆ ಗಳನ್ನು ಮಾಡುತ್ತಿದ್ದರು. ಅವರು ವೀಳ್ಯದೆಲೆ, ತೆಂಗು,ಬಾಳೆ, ದ್ರಾಕ್ಷಿ ಹಾಗೂ ಸಾಂಬಾರ ಪದಾರ್ಥಗಳನ್ನು ಬೆಳೆಯುತ್ತಿದ್ದರು. ಅವರು ಬರಗಾಲ ಮತ್ತು ದುರ್ಭಿಕ್ಷದಿಂದ ನರಳುತ್ತಿದ್ದರು. ಕೆಲವು ಪ್ರಜೆಗಳು ವಾಣಿಜ್ಯ-ವ್ಯವಹಾರಗಳಲ್ಲಿ ತೊಡಗಿದ್ದರು. ಉಪ್ಪು, ಸಾಂಬಾರ ಮೊದಲಾದ ಅಗತ್ಯ ವಸ್ತುಗಳು ಹಳ್ಳಿಯ ಅಂಗಡಿಗಳಲ್ಲಿ ದೊರೆಯುತ್ತಿದ್ದುವು. ಅವುಗಳನ್ನು ಕೊಂಡುಕೊಳ್ಳಲು ಅವರು ಹಣವನ್ನು ಬಳಸುತ್ತಿದ್ದರು. ಅವರು ಬೇಯಿಸಿದ ಆಹಾರಗಳನ್ನು ಪಾತ್ರೆಗಳಲ್ಲಿ ಬಡಿಸುತ್ತಿದ್ದರಲ್ಲದೆ ಬಾಳೆಯೆಲೆಯಲ್ಲಿ ಊಟ ಮಾಡುತ್ತಿದ್ದರು. ಅವರು ಅಡುಗೆಯಲ್ಲಿ ಸಾಂಬಾರ ಪದಾರ್ಥಗಳನ್ನು ಬಳಸುತ್ತಿದ್ದರು. ಹಾಗೆಯೇ ದ್ರಾಕ್ಷಿ ಮತ್ತು ತೆಂಗಿನ ಮದ್ಯವನ್ನು ಅವರು ಕುಡಿಯುತ್ತಿದ್ದರು. ಅವರು ಮನೆ ಕಟ್ಟುವುದರಲ್ಲಿ

ಮತ್ತು ಗೃಹಾಲಂಕಾರಗಳಲ್ಲಿ ನಿಪುಣರಾಗಿದ್ದರು. ಅಂತೆಯೇ ಆಭರಣ ತಯಾರಿ, ನಾಣ್ಯ ಟಂಕಿಸುವುದು, ಲೋಹದ ಕಲೆ ಹಾಗೂ ಇತರ ಕಲೆಗಳನ್ನು ಬಲ್ಲವರಾಗಿದ್ದರು. ಅವರಿಗೆ ಆನೆಗಳನ್ನು ಪಳಗಿಸಿ ಯುದ್ಧ ಮತ್ತು ನಿತ್ಯೋಪಯೋಗಿ ಕೆಲಸಗಳಲ್ಲಿ ಬಳಸಿಕೊಳ್ಳುವುದಕ್ಕೆ ತಿಳಿದಿತ್ತು. ಅವರು ತಮ್ಮ ವಿರಾಮದ ವೇಳೆಯಲ್ಲಿ ಧಾರ್ಮಿಕ ಪ್ರವಚನ ಮತ್ತು ನಾಟಕಾದಿ ಕಲೆಗಳಲ್ಲಿ ಬಹುಸಂಖ್ಯೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಆಗಾಗ ರಾಜರೂ ಸಹ ಅಂತಹ ಮನೋರಂಜನೆ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದುದೂ ಉಂಟು. ಅವರಿಗೆ ಅರಮನೆಯ ಆಭರಣಗಳ ಸಂಪತ್ತು ಕಲೆಗಳಿಗಾಗಿ ಲಭ್ಯವಾಗುತ್ತಿತ್ತು. ಅವರು ಪರಸ್ಪರರನ್ನು ತಮ್ಮ ಮನೆಗಳಿಗೆ ಬರಮಾಡಿಕೊಳ್ಳುತ್ತಿದ್ದರು. ಮದುವೆಗಳ ಸಂದರ್ಭದಲ್ಲಿ ದಾರಿಯಲ್ಲಿ ಮೆರವಣಿಗೆಗಳು ನೆರವೇರುತ್ತಿದ್ದವು. ದೊಡ್ಡ ದೊಡ್ಡ ಸಮಾರಂಭಗಳಲ್ಲಿ ಅವರು ಸಾರ್ವಜನಿಕ ಹೆದ್ದಾರಿಗಳನ್ನು ಶೃಂಗರಿಸುತ್ತಿದ್ದರು. ಅವರು ಬೀದಿಗಳನ್ನು ತಳಿರು ತೋರಣಗಳಿಂದ ಶೃಂಗರಿಸಿ ಸೈನಿಕ ಧ್ವಜಗಳನ್ನು ನೆಡುತ್ತಿದ್ದುದರಿಂದ ಅದು ನೆರಳಿಗೂ ಉಪಯುಕ್ತವಾಗುತ್ತಿತ್ತು. ಅವರು ತಮ್ಮನ್ನು ತಾವು ಹೂಮಾಲೆಗಳಿಂದ, ಕಿವಿಯೋಲೆಗಳಿಂದ, ಚಿನ್ನದ ಸರಗಳಿಂದ ಶೃಂಗರಿಸಿಕೊಳ್ಳುತ್ತಿದ್ದರು. ರಾಜರ ಆಭರಣಗಳು ಮುತ್ತು-ರತ್ನಗಳಿಂದ ತಯಾರಿಸಿದವುಗಳಾಗಿದ್ದುವು. ಅವರ ಉಡುಗೆ ತೊಡುಗೆಗಳಲ್ಲಿ ರೇಶ್ಮೆ ವಸ್ತ್ರಗಳೂ ಸೇರಿದ್ದುವು. ಮದುವೆ ಸಮಾರಂಭಗಳಲ್ಲಿ ಕುಟುಂಬ ಪುರೋಹಿತನಿಂದ ಪೂಜೆ ನೆರವೇರುತ್ತಿತ್ತು. ಆಮೇಲೆ ನೆರೆದ ಕುಲಬಾಂಧವರಿಂದ ಇತರ ವಿಧಿಗಳು ನೆರವೇರುತ್ತಿದ್ದುವು. ಇದರೊಂದಿಗೆ ಹೀನಕುಲದವರನ್ನು ಮಾತ್ರವಲ್ಲದೆ, ಬ್ರಾಹ್ಮಣರನ್ನು ಸಹ ತಮಾಷೆ ಮಾಡುವುದೂ ನಡೆದೇ ಇರುತ್ತಿತ್ತು. ಜನರ ನೈತಿಕ ಮೌಲ್ಯಗಳನ್ನು ಕದಡುವವರಿಗೆ ಶಿಕ್ಷೆಯನ್ನು ವಿಧಿಸುವ ಮಟ್ಟಿಗೆ ಅಂದಿನ ಬೌದ್ಧಿಕತೆಯು ಉನ್ನತಿಕೆಯನ್ನು ತಲುಪಿತ್ತು; ಸಭ್ಯತೆ, ಸೌಹಾರ್ದತೆ, ಗೌರವ, ತ್ಯಾಗ-ಬಲಿದಾನಗಳನ್ನು ಸ್ಮರಿಸುವುದು, ದುರ್ಜನರ ಸಂಗವನ್ನು ತ್ಯಜಿಸುವುದು, ಸಂಗೀತ-ಸಾಹಿತ್ಯವೇ ಮೊದಲಾದ ಕಲೆಗಳಲ್ಲಿ ಪಾಲ್ಗೊಳ್ಳುವುದು ಧಾರ್ಮಿಕ ಕಾರ್ಯಕ್ರಮಗಳ ಪ್ರದರ್ಶನ ಹಾಗೂ ಅವುಗಳನ್ನು ಆಲಿಸುವುದು ಮೊದಲಾದ ಉತ್ತಮ ಸಂಸ್ಕಾರಗಳನ್ನು ಅವರು ಹೊಂದಿದ್ದರು. ಆಗಿನ ಕಾಲದಲ್ಲಿ ವೇದೋಕ್ತವಾದ ದೇವರ ಪೂಜೆಯು ನಡೆಯುತ್ತಿತ್ತು. ಅದರಂತೆ ದೇವೇಂದ್ರನಿಗೆ ಅಗ್ರಪೂಜೆಯು ಸಲ್ಲುತ್ತಿತ್ತು. ಅಗ್ನಿಗೆ ಹವಿಸ್ಸನ್ನು ಅರ್ಪಿಸಲಾಗುತ್ತಿತ್ತು. ಜನರಿಗೆ ಆತ್ಮ, ಮುಕ್ತಿ, ಪಾಪ-ಪುಣ್ಯ, ಸ್ವರ್ಗ-ನರಕಗಳ ಕಲ್ಪನೆ ಇರುತ್ತಿದ್ದು ದರಿಂದ ಇಂತಹ ಪೂಜೆ, ಯಜ್ಞ ಮೊದಲಾದ ವೇದೋಕ್ತ ಕಾರ್ಯಗಳು ನಡೆಯುತ್ತಿದ್ದುವು. ಅಂತಿಮವಾಗಿ, ದಖ್ಖನ್ನಿನಲ್ಲಿ ಪ್ರಾಚೀನ ಕಾಲದಲ್ಲಿಯೇ ಬ್ರಾಹ್ಮಣರಿದ್ದರು. ಅವರಲ್ಲಿ ಕೆಲವರು ರಾಜ್ಯದ ಆಗುಹೋಗುಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದವರಾಗಿ, ಆಸ್ಥಾನದ ರಾಜಕೀಯದಲ್ಲಿಯೂ ಹೊರಗಿನ ಧಾರ್ಮಿಕ ಕಾರ್ಯಗಳಲ್ಲಿಯೂ ಭಾಗಿಗಳಾಗುತ್ತಿದ್ದರು. ಇನ್ನು ಕೆಲವರು ತಮಗೆ ತಾವೇ ಧ್ಯಾನ, ತಪಸ್ಸು ಮೊದಲಾದ ಸಾಧನೆಗಳಲ್ಲಿ ತೊಡಗಿರುತ್ತಿದ್ದರು. ಕೆಲವರು ಅರಣ್ಯಗಳಲ್ಲಿ ಆಶ್ರಮಗಳನ್ನು ಕಟ್ಟಿಕೊಂಡಿದ್ದರೆ, ಇನ್ನು ಕೆಲವರು

ಅಭಿಚಾರಿಕ ಪ್ರಯೋಗಗಳಲ್ಲಿ ನಿರತರಾಗಿದ್ದು ಇವರಿಗೆ ಔತ್ತರೇಯ ಭಾರತದ ಯೋಗಿಗಳಿಗೂ ಸಂಬಂಧಗಳಿರುತ್ತಿದ್ದುವು. ಆಮೂಲಕ ಊರಿಂದೂರಿಗೆ ಭಿಕ್ಷಾಟನೆ ಮಾಡುತ್ತ ಅವರು ಧರ್ಮಪ್ರಚಾರದಲ್ಲಿ ನಿರತರಾಗಿದ್ದರು.

ಇದೀಗ ಪ್ರಾಚೀನ ದಖ್ಖನ್ನಿನ ನಾಗರಿಕತೆಯ ಚಿತ್ರಣವಾಯಿತು. ಪ್ರಾಚೀನ ಹಿಂದೂ ಮತ್ತು ಬೌದ್ಧಗ್ರಂಥಗಳಲ್ಲಿ ವರ್ಣಿತವಾಗಿರುವ ಈ ವಿವರಣೆಯು. ಅನೇಕ ಶತಮಾನಗಳಿಂದ ಜನಜನಿತವಾಗಿ ಉಳಿದುಕೊಂಡು ಬಂದಿದೆ. ಈಗ ನಾವು ಇಂತಹ ಘಟನೆಗಳಿಗೆ ಸಂಬಂಧಿಸಿದ ಕಾಲಮಾನದ ಬಗೆಗಷ್ಟೇ ಚರ್ಚೆ ಮಾಡುವುದಕ್ಕೆ ಉಳಿದಿದೆ. ಶ್ರೀಲಂಕಾದ ಅರಸನು ಕಳಿಂಗದ ಅರಸನನ್ನು ಪಲ್ಲಟಗೊಳಿಸಿ, ಬಂಗಾಳದ ರಾಜಕನ್ಯೆಯನ್ನು ಮದುವೆಯಾಗಿ ಸಾಮ್ರಾಜ್ಯವನ್ನು ಉತ್ತರೋತ್ತರ ವಾಗಿ ಮಾಡಿದ ಕಾಲಘಟ್ಟವನ್ನು ನಾವು ಕ್ರಿ.ಪೂ.ಸು. ಆರು ಅಥವ ಏಳನೆಯ ಶತಮಾನವೆಂದು ತರ್ಕಿಸಬಹುದಾಗಿದೆ. ಈಗ ಹೇಳಿದ ವಿವರಗಳು ರಘು ಮಹಾರಾಜನ ಆಳ್ವಿಕೆಯ ಕಾಲಕ್ಕೆ ಸಂಬಂಧಿಸಿದುವುಗಳಾಗಿದ್ದು, ಇದಕ್ಕಿಂತಲೂ ಪೂರ್ವದವುಗಳೇ ಆಗುತ್ತವೆ. ರಘು ಮಹಾರಾಜನ ಕಾಲವನ್ನು ಆತನ ಮೊಮ್ಮಗನಾದ ರಾಮನ ಆಳ್ವಿಕೆಯ ಕಾಲಗಣನೆಯಿಂದ ಗುರುತಿಸಬಹುದಾಗಿದೆ. ರಾಮನ ಜೀವತಾವಧಿಯನ್ನು ಕ್ರಿ.ಪೂ.೨೦೨೯ರ ಕಾಲಘಟ್ಟದಿಂದೀಚೆಗೆ ಗುರುತಿಸಬಹುದು. ಶ್ರೀಯುತ ಬೆನಟ್ಲೆ (Bentley) ಅವರು ತಮ್ಮ 'Historical View of Hindu Astronomy' ಎಂಬ ಲೇಖನದಲ್ಲಿ ಕ್ರಿ.ಪೂ.೯೬೧ನೇ ಏಪ್ರಿಲ್ ತಿಂಗಳ ೯ನೇ ದಿನಾಂಕ ದಂದು ರಾಮನು ಜನಿಸಿರುವುದಾಗಿ ತಿಳಿಸುತ್ತಾರೆ. ಹಾಗೆಯೇ ಇದಕ್ಕಿಂತ ಪ್ರಾಚೀನವಾದ ಕಾಲ ಗಣನೆಯನ್ನು ಈ ವಿಷಯದಲ್ಲಿ ಕೊಡುವಂತಿಲ್ಲ. ಒಂದು ತಲೆಮಾರಿಗೆ ಸುಮಾರು ೨೫ ವರ್ಷಗಳ ಅಂತರವನ್ನು ನಿಗದಿ ಪಡಿಸುವುದಾದರೆ, ಹಾಗಾದಾಗ ರಘು ಮಹಾರಾಜನ ಕಾಲವನ್ನು ಒಂದು ಶತಮಾನ ಹಿಂದಕ್ಕೆ ಕೊಂಡೊಯ್ಯಬಹುದು. ಆಗ ಅದು ಕ್ರಿ.ಪೂ.೧೦೩೫ನೆಯ ವರ್ಷವಾಗುತ್ತದೆ. ಇದು ರಘು ಮಹಾರಾಜನು ದಖ್ಖನ್ನಿಗೆ ಕಾಲಿರಿಸಿದ ಅತೀ ಪ್ರಾಚೀನ ಕಾಲಘಟ್ಟವಾಗುತ್ತದೆ. ಇದೀಗ ನಾವು ಮುಂದಿನ ಬೆಳವಣಿಗೆಗೆ ಒಂದಷ್ಟು ಕಾಲಾವಕಾಶವನ್ನು ಕಲ್ಪಿಸಬೇಕಾಗುತ್ತದೆ. ಆದುದರಿಂದ ಇದೀಗ ನಾವು ಈ ತೀರ್ಮಾನಕ್ಕೆ ಬರಬಹುದಾಗಿದೆ :- ದಖ್ಖನ್ ಭೂಪ್ರದೇಶದಲ್ಲಿ ಶತಮಾನಕ್ಕಿಂತಲೂ ಮೊದಲೇ ಉನ್ನತ ಮಟ್ಟದ ನಾಗರಿಕತೆಯು ಬೆಳೆದು ನಿಂತಿತ್ತು. ಒಂದು ವೇಳೆ ಈ ತೀರ್ಮಾನವು ಯಾರಿಗಾದರೂ ಅಚ್ಚರಿಯನ್ನುಂಟು ಮಾಡಿದ್ದಲ್ಲಿ ಇನ್ನು ಒಂದು ನಂಬಲರ್ಹ ಪುರಾವೆಯನ್ನು ಒದಗಿಸಬಹುದು. ಅದೇನೆಂದರೆ, ರಾಜಾಹಿರಮ್ ಮತ್ತು ರಾಜಾ ಸೊಲೋಮನ್ ದಖ್ಖನ್ನ್ ಕರಾವಳಿಯಿಂದ ತನ್ನ ವ್ಯಾಪಾರವನ್ನು ಪ್ರಾರಂಭಿಸಿದನಷ್ಟೇ. ಆಗ ಆತನ ವ್ಯಾಪಾರಿಗಳು ಕೆಲವು ಅಪರೂಪದ ಸಾಂಬಾರು ಪದಾರ್ಥಗಳನ್ನು ಈಜಿಪ್ಟ್‌ಗೆ ಕೊಂಡೊಯ್ದಿರುವ ಸಾಧ್ಯತೆ ತುಂಬಾ ಇದೆ. ಅವುಗಳು ದಖ್ಖನ್ನಿನ ತೋಟಗಳಲ್ಲಿ ಬೆಳೆದವುಗಳೇ ಆಗಿವೆ.*

---

* ದ್ರಾವಿಡ ಅಧ್ಯಯನ ಸಂಚಿಕೆಯಿಂದ ಆರಂಭವಾದ ಈ ಅನುವಾದವು ಇಲ್ಲಿಗೆ ಮುಗಿಯಿತು. ಇದು ದ್ರಾವಿಡ ಅಧ್ಯಯನದ ಮೊದಲ ಸಂಚಿಕೆಯಲ್ಲಿ ಪ್ರಕಟವಾದ 'ದ್ರಾವಿಡ-ಡೆಕ್ಕನ್-ದಕ್ಷಿಣ ಭಾರತ' ಎಂಬ ನನ್ನ ಲೇಖನಕ್ಕೆ ಇನ್ನಷ್ಟು ಖಚಿತ ಆಧಾರಗಳನ್ನು ನೀಡುವ ವಿದ್ವತ್ ಲೇಖನವಾಗಿದೆ. ಆ ಲೇಖನದಲ್ಲಿ ಪ್ರಾಚೀನ ಕಾಲದಲ್ಲಿ 'ದಖ್ಖನ್' ಮತ್ತು 'ದಕ್ಷಿಣ ಭಾರತ' ಎಂಬ ಪದಗಳು ಇಡಿಯ ದಕ್ಷಿಣಪಥಕ್ಕೆ ಪರ್ಯಾಯವಾಗಿ ಪ್ರಯೋಗವಾಗುತ್ತವೆ ಎಂದು ನಾನು ಪ್ರತಿಪಾದಿಸಿದ್ದೆ. ಆ ಸಂಬಂಧ ಅನೇಕ ಪುರಾವೆಗಳನ್ನು ಲೇಖನದುದ್ದಕ್ಕೆ ನೀಡಿದ್ದೆ. ಇದೀಗ ಪ್ರಾಚೀನ ಸಂಶೋಧಕರ ಅಭಿಪ್ರಾಯವನ್ನು ಇಲ್ಲಿ ಹೆಚ್ಚುವರಿಯಾಗಿ ನೀಡಿದಂತಾಯಿತು.

ಎರಡು ಸಂಚಿಕೆಗಳಲ್ಲಿ ಅನುವಾದಗೊಂಡ ಈ ಲೇಖನವು ವಿದ್ವತ್ ಪೂರ್ಣವಾಗಿದೆ. ಭಾರತದ ಇತಿಹಾಸವೆಂದರೆ ಉತ್ತರ ಭಾರತದ ಇತಿಹಾಸವೆಂದೇ ನಂಬುತ್ತಿದ್ದ ಕಾಲದಲ್ಲಿ ಅದನ್ನು ಪಲ್ಲಟ ಮಾಡುವುದಕ್ಕೆ 'Oriental Research' ಪತ್ರಿಕೆಯ ೧೮ನೆಯ ಸಂಚಿಕೆಯಲ್ಲಿ ೧೮೭೯ರಲ್ಲಿ ಈ ಲೇಖನವನ್ನು ಪ್ರಕಟಿಸಲಾಗಿತ್ತು. ಆಗಿನ್ನೂ ಭಾರತೀಯ ಪ್ರಾಚೀನ ಗ್ರಂಥಗಳು ಈ ಪ್ರಮಾಣದಲ್ಲಿ ಇಂಗ್ಲಿಷ್‌ಗೆ ಅನುವಾದವಾಗಿರಲಿಲ್ಲ. ಹಾಗಿದ್ದರೂ ಸಿಗುವ ಮಾಹಿತಿಗಳೆಲ್ಲವನ್ನೂ ಸಂಗ್ರಹಿಸಿ ವಿಷಯ ನಿರೂಪಣೆ ಮಾಡಿದ ಲೇಖನವಿದು. ದಕ್ಷಿಣ ಭಾರತಕ್ಕೆ ಸಂಬಂಧಿಸಿದ ಕೆಲವೊಂದು ಇಂಗ್ಲಿಷ್ ಮತ್ತು ಕನ್ನಡ ಗ್ರಂಥಗಳಲ್ಲಿಯೂ ಸಹ ಈ ಅಪೂರ್ವವಾದ ಲೇಖನವನ್ನು ಗಮನಿಸಿದಂತೆ ಕಂಡುಬರುವುದಿಲ್ಲ. ಐತಿಹಾಸಿಕ ವಿಶ್ಲೇಷಣೆಗೆ ಮಾತ್ರವಲ್ಲ ದಕ್ಷಿಣ ಭಾರತದ ಬಗೆಗಿನ ಮೊತ್ತ ಮೊದಲ ಅಧಿಕೃತ ಲೇಖನ ಎಂಬ ಕಾರಣಕ್ಕಾಗಿಯೂ ಇದಕ್ಕೆ ಐತಿಹಾಸಿಕ ಮಹತ್ತ್ವವಿದೆ.

**ಅನುವಾದಕ**

೧೧

# ವೇಮನ ಮತ್ತು ಇತರ ಅನುಭಾವಿಗಳು

*ತೆಲುಗು ಮೂಲ : ರಾಳ್ಳಪಲ್ಲಿ ಅನಂತಕೃಷ್ಣ ಶರ್ಮ*

**ಅನುವಾದ : ಸಿ. ವೆಂಕಟೇಶ**

ಧರ್ಮ, ರಾಜ್ಯ ಮುಂತಾದ ಯಾವುದೇ ವಿಷಯಗಳಿಗೆ ಸಮಾಜದಲ್ಲಿ ತೊಂದರೆ ಉಂಟಾದಾಗ ಅವುಗಳನ್ನುದ್ಧರಿಸಿ ಸುಧಾರಣೆ ಮಾಡಲು ಒಬ್ಬನು ಹುಟ್ಟಿಬಂದರೆ ಸಾಕಾಗುವುದಿಲ್ಲ. ಆತನೆಂತಹ ಮಹಾಪುರುಷನಾದರೂ ಕೂಡ ಮನುಷ್ಯನೇ ಆಗಿರುವುದರಿಂದ ಮಾನವ ಸಹಜವಾದಂತಹ ನಿರ್ಬಂಧಗಳಿಗೆ, ಮಿತಿಗಳಿಗೆ ಒಳಗಾಗಲೇಬೇಕು. ಅದರಲ್ಲೂ ಬೇರೆ ಬೇರೆ ಜಾತಿ, ಭಾಷೆಗಳಿಂದ ಕೂಡಿರುವ ಹಿಂದೂ ಸಮಾಜವನ್ನು ಒಬ್ಬನು ನಿರ್ವಹಿಸುವುದೆಂತು? ಆದಕ್ಕಾಗಿ ಪ್ರಯತ್ನಿಸುವುದೇ ಅಸಾಧ್ಯ. ಆದ್ದರಿಂದ ಇಂತಹ ಸಂದರ್ಭಗಳಲ್ಲಿ ಸುಧಾರಣಾ ಮನೋಭಾವದಿಂದ ಕೂಡಿದ ಅನೇಕರು ಹುಟ್ಟಿಕೊಳ್ಳುತ್ತಾರೆ. ನಮ್ಮಲ್ಲಿ ಸಂಭವಿಸಿರುವ ರಾಜಕೀಯ ಕ್ಷೋಭೆಯಿಂದ ನಮ್ಮನ್ನು ಪಾರುಮಾಡಲು ಎಷ್ಟು ಮಂದಿ ಸುಧಾರಕರು ಅವತರಿಸಿದ್ದಾರೆಂಬುದನ್ನು ಕಾಣಬಹುದು. ಹಾಗೆಯೇ ವೈದಿಕ ಧರ್ಮವನ್ನು ಇತರ ಧರ್ಮಗಳನ್ನು ಬೇರೆಬೇರೆಯಾಗಿ ಸ್ಥಾಪಿಸಿದ ಆಚಾರ್ಯರ ತರುವಾಯ, ಮನುಷ್ಯ ಸಹಜವಾದ ಸುಖಾಕಾಂಕ್ಷೆ, ಸ್ವಾರ್ಥಪರತೆ ಮುಂತಾದ ಗುಣಗಳಿಂದ, ಆಯಾ ಮತಧರ್ಮಗಳಿಗೆ ಸೇರಿದವರು ಪಾರಮಾರ್ಥಿಕ ದೃಷ್ಟಿಯನ್ನು ಬಹಳವರೆಗೆ ಕಳೆದುಕೊಂಡು, ಬಹಿರಾಡಂಬರಗಳಲ್ಲಿ ಮಾತ್ರ ಜಾಗೃತರಾಗಿ ವರ್ತಿಸುತ್ತಾ, ಅಜ್ಞಾನಕ್ಕೆ ಅಕಾರ್ಯಗಳಿಗೆ ಧರ್ಮವನ್ನು ಒಂದು ಸಾಧನವನ್ನಾಗಿ ಮಾಡಿಕೊಳ್ಳಲಾಗಿ, ಜನಸಾಮಾನ್ಯರನ್ನು ಇಂತಹ ವ್ಯವಸ್ಥೆಯಿಂದ ತಪ್ಪಿಸಿ ಸನ್ಮಾರ್ಗಕ್ಕೆಳೆಯಲೆಂದು ಪ್ರಯತ್ನಿಸಿದ ವೇಮನನಂಥವರು ಹಿಂದೂ ಸಮಾಜದಲ್ಲಿ ಅನೇಕರು ಉದಯಿಸಿದ್ದಾರೆ. ಇವರು ತೋರಿದ್ದೇ ಸನ್ಮಾರ್ಗವಲ್ಲದಿರಬಹುದು. ಆದರೆ ಅಂದಿನ ಸಮಾಜ ಬಹುತೇಕ ಇದ್ದುದು ಮಾತ್ರ ಒಳ್ಳೆಯ ಮಾರ್ಗದಲ್ಲಿ ಅಲ್ಲವೇ ಅಲ್ಲ. ತತ್ತ್ವ, ನೀತಿ, ಧರ್ಮ ಮುಂತಾದ ವಿಷಯಗಳನ್ನು ತಮ್ಮ ಮನಸ್ಸಾಕ್ಷಿಯಿಂದಲೂ, ಅನುಭವದಿಂದಲೂ ನಿರ್ಣಯಿಸುವ ಬದಲು, ತಮ್ಮ ಹಿರಿಯರ ಮಾತುಗಳನ್ನು ಕೇಳಿಯೋ

ಅಥವಾ ಅವರ ಹಿರಿಯರು ಬರೆದ ಗ್ರಂಥಗಳನ್ನು ಓದಿಯೋ ನಿರ್ಣಯಿಸಿಕೊಳ್ಳುವ ಸ್ಥಿತಿಗೆ ತಲುಪಿದ ಸಮಾಜದ ಬದುಕು ಬೊಂಬೆಯಾಟದಂತಹುದೇ ಹೊರತು ಶಕ್ತಿಯುತವಾದ ಪದಾರ್ಥವಾಗಲಾರದು. ಹಾಗಾದರೆ, ಎಲ್ಲರೂ ತಮ್ಮಷ್ಟಕ್ಕೆ ತಾವೇ ಮೇಲಿನ ವಿಷಯಗಳನ್ನು ನಿರ್ಣಯಿಸಿಕೊಳ್ಳುವುದು ಸಾಧ್ಯವೆ? ನ್ಯಾಯವೆ? ಎಂದು ಕೇಳಬಹುದು. ಎಲ್ಲದಕ್ಕೂ ಇತರರನ್ನೇ ನಂಬಿಕೊಳ್ಳುವುದು ಎಷ್ಟು ನ್ಯಾಯವೋ ಇದೂ ಅಷ್ಟೇ. ಎರಡೂ ಕೂಡ ಅನುಚಿತವಾದವುಗಳೇ. ನಮ್ಮ ಅನುಭವಗಳನ್ನಷ್ಟೆ ನಂಬಿಕೊಳ್ಳುವುದರಿಂದ ನಮ್ಮ ಅಜ್ಞಾನವು ನಮ್ಮನ್ನು ಎಷ್ಟು ಹಾಳುಮಾಡುವುದೋ, ಇತರರನ್ನು ನಂಬಿಕೊಂಡಾಗ ಅವರ ಅಜ್ಞಾನವೂ ನಮಗೆ ಅಷ್ಟೇ ಕೇಡನ್ನು ಉಂಟುಮಾಡುತ್ತದೆ. ಮನುಷ್ಯ ಯಾವ ವಿಷಯದಲ್ಲಿಯೂ ಪೂರ್ಣ ಸ್ವತಂತ್ರನೂ ಅಲ್ಲ; ಹಾಗೇ ಪರತಂತ್ರನೂ ಅಲ್ಲ; ಮಧ್ಯಮವರ್ತಿ ಇಲ್ಲದಿದ್ದರೆ ಬದುಕು ಸಾಗುವುದಿಲ್ಲ. ಆದ್ದರಿಂದಲೆ -

"ನಿನವಲೆ ನೆವ್ವರು ಚೆಪ್ಪಿನ
ವಿನಿನಂತನೆ ವೇಗಪಡಕ ವಿವರಿಂಪವಲೆನ್
ಕನಿ ಕಲ್ಲ ನಿಜಮುದೆಲಿಸಿನ
ಮನುಜುಡೇ ಪೋ ನೀತಿಪರುಡು ಮಹಿಲೋ ಸುಮತಿ."

ಎಂಬಂತೆ ಅನ್ಯರ ಧರ್ಮವನ್ನು, ಅವರು ಎಂಥವರಾದರೂ ಕೂಡ, ತನ್ನ ವಿಮರ್ಶೆಯ ಒರೆಗೆ ಹಚ್ಚಿ ನೋಡಬೇಕು. ಹಾಗಲ್ಲದೆ ವೇದಗಳು ಒಬ್ಬರು ಬರೆಯದೆ ಅವಷ್ಟಕ್ಕೆ ಅವೇ ಹುಟ್ಟಿದವೆಂದೂ, ಅವುಗಳಲ್ಲೆಲ್ಲ ಒಂದೇ ವಿಷಯವನ್ನು ಪ್ರತಿಪಾದಿಸಲಾಗಿದೆಯೆಂದೂ, ಅದಕ್ಕೆ ಪ್ರತಿಬಿಂಬ ಪಂಚಮವೇದವು ಮಹಾಭಾರತವೆಂದೂ, ಅದರ ಸಾರವೇ ಭಗವದ್ಗೀತೆಯೆಂದೂ, ಅದನ್ನು ಹಿಂಡಿ ತೆಗೆದ ಸಾರವೇ ನಮ್ಮ ಮತಾಚಾರ್ಯರ ಭಾಷ್ಯೆ ಎಂದೂ, ಅದಕ್ಕೆ ನಮ್ಮ ತಾತನವರು ಬರೆದ ವ್ಯಾಖ್ಯಾನವೆ ಸರಿಯಾದುದೆಂತಲೂ-ಕಣ್ಣು ಮುಚ್ಚಿಕೊಂಡು, ತಲೆತಗ್ಗಿಸಿಕೊಂಡು, ಇರುವ ವಿವೇಚನಾಶಕ್ತಿಗೆಲ್ಲ ಎಳ್ಳು ನೀರು ಬಿಟ್ಟಿರುವುದು ಆ ಶಕ್ತಿಯನ್ನು ಕೊಟ್ಟ ಭಗವಂತನಿಗೆ ಮಾಡುವ ಮಹಾಪಚಾರವಾಗುತ್ತದೆ. ಹೀಗೆ ಮಹಾಪುರುಷರಾದ ಧಾರ್ಮಿಕರವತರಿಸಿ ಅತ್ಯಂತ ಸೂಕ್ಷ್ಮದೃಷ್ಟಿಯಿಂದ ತತ್ತ್ವಗಳನ್ನು ಚರ್ಚಿಸಿ ತಾವು ಕಂಡುಕೊಂಡ ಸಿದ್ಧಾಂತವನ್ನು ಸ್ಥಾಪಿಸಲಾಗಿ, ಅವರ ಮಹತ್ವವನ್ನು ಕಂಡು ವಿಸ್ಮಿತರಾದ ಆನಂತರದವರು, ಇದಕ್ಕಿಂತಲೂ ಹೆಚ್ಚಿನದೇನೂ ತಮಗೆ ತಿಳಿಯದೆಂದು ದೀನರಾಗಿ, ತಮ್ಮ ಸರ್ವಸ್ವವನ್ನು ಅವರಿಗೆ ಧಾರೆಯೆರೆದು, ತಮಗಿಂತಲೂ ಅಜ್ಞಾನದಲ್ಲಿರುವವರು ತಮ್ಮ ವಿಷಯದಲ್ಲಿಯೂ ಹೀಗೇ ವಿಧೇಯತೆಯಿಂದ ವರ್ತಿಸಬೇಕೆಂದು ಬೋಧಿಸುತ್ತಾ, ಸ್ವತಂತ್ರ ಆಲೋಚನೆಗಳನ್ನು ಈ ರೀತಿಯಾಗಿ ನಾಶಮಾಡಿಕೊಳ್ಳುತ್ತಿರಲಾಗಿ, ಅವರನ್ನೆಲ್ಲ ಇಂತಹ ನಿದ್ರೆಯಿಂದ ಎಬ್ಬಿಸಿ, ಅವರಲ್ಲಿ ಸ್ವತಂತ್ರವಾದ ವಿಮರ್ಶಾ ಪ್ರಜ್ಞೆಯನ್ನುಂಟು ಮಾಡುವ ಸಲುವಾಗಿ, ಕೆಲವರು ಹುಟ್ಟಿಕೊಳ್ಳದೆ ವಿಧಿಯಿಲ್ಲ. ಅಂಥವರಲ್ಲಿ ವೇಮನ ಆಂಧ್ರದವರಲ್ಲಿ ಮುಖ್ಯವಾದವನೆಂದು ತಿಳಿದುಕೊಂಡಿದ್ದೇವಲ್ಲವೆ, ಇಂತಹ

ಇನ್ನಷ್ಟು ಜನರನ್ನು ಕುರಿತು ಇಲ್ಲಿ ಸಂಕ್ಷಿಪ್ತವಾಗಿ ಹೇಳಬಯಸುತ್ತೇನೆ. ಇಂತಹವರಲ್ಲಿ ವೇಮನನ ನಂತರ ಎಲ್ಲರಿಗಿಂತ ಮೊದಲು ನಾವು ತಿಳಿದುಕೊಳ್ಳ ಬೇಕಾದವನೆಂದರೆ:

**ಸರ್ವಜ್ಞಮೂರ್ತಿ**

ಇದಕ್ಕೆ ಎರಡು ಕಾರಣಗಳಿವೆ. ವೇಮನನಿಗೆ ಈತ ಅಚ್ಚ ಪ್ರತಿಬಿಂಬದಂತಿರುವುದು ಒಂದು. ಕನ್ನಡದವನಾಗಿರುವುದು ಮತ್ತೊಂದು. ಮೊದಲಿನಿಂದಲೂ ತೆಲುಗಿನವರಿಗೆ ಕನ್ನಡದವರಷ್ಟು ಸಮೀಪಬಂಧುಗಳು ಇನ್ಯಾರೂ ಇಲ್ಲ. ರಾಜ್ಯಗಳೆರಡೂ ಬಹುತೇಕ ಒಂದಕ್ಕೊಂದು ಅಂಟಿ ಕೊಂಡಿರುವುದಷ್ಟೇ ಅಲ್ಲದೆ, ಎರಡೂ ಜನಾಂಗದವರು ಒಬ್ಬರನ್ನೊಬ್ಬರು ಆಳುತ್ತಲೂ, ಒಬ್ಬನೇ ರಾಜನಿಗೆ ಒಳಪಟ್ಟಿದ್ದೂ, ಧರ್ಮಪ್ರಚಾರ, (ವಾಙ್ಮಯ) ಸಾಹಿತ್ಯ ರಚನೆ ಮುಂತಾದ ವಿಷಯಗಳಲ್ಲಿ ಒಬ್ಬರಿಗೊಬ್ಬರು ನೆರವಾಗಿದ್ದಾರೆ. ಆದ್ದರಿಂದಲೆ, ಈ ಇಬ್ಬರ ಮಾರ್ಗಗಳು ಬಹುತೇಕ ಒಂದೇ ರೀತಿಯಾಗಿವೆ. ಹಾಗಿದ್ದ ಮೇಲೆ ನಮ್ಮನ್ನು ಕುರಿತು ಅವರೂ, ಅವರನ್ನು ಕುರಿತು ನಾವೂ ತಿಳಿದುಕೊಳ್ಳಬೇಕೆನ್ನುವುದು ಮುಖ್ಯ ಧರ್ಮವೆಂದು ಬೇರೆ ಹೇಳಬೇಕಾಗಿಲ್ಲ.

ವೇಮನನ ಚರಿತ್ರೆಯ ಬಗ್ಗೆ ಎಷ್ಟೊಂದು ಗೊಂದಲಗಳಿವೆಯೋ ಈತನ ಬಗ್ಗೆಯೂ ಅಷ್ಟಿವೆ. 'ಬಸವರಸು' ಎಂಬ ಆರಾಧ್ಯ ಬ್ರಾಹ್ಮಣನಿಗೂ, ಅಂಬಲೂರು ಎಂಬ ಗ್ರಾಮದ ಕುಂಬಾರ ವಿಧವೆಯಾದ 'ಮಾಳಿ' ಎಂಬಾಕೆಗೂ ಈತ ಜನಿಸಿದಂತೆ ಕಥೆ; ಕಥೆಯಷ್ಟೇ ಅಲ್ಲ, ಆತನ ಹೆಸರಲ್ಲಿ ಪದ್ಯಗಳೂ ಇವೆ.[೨] ಆದರೆ ಈತ ಚಿಕ್ಕಂದಿನಿಂದಲೂ ಹೆತ್ತವರನ್ನು ಲೆಕ್ಕಿಸದೆ, ತಾನು ಪರಮೇಶ್ವರನ ವರದಿಂದ ಜನಿಸಿದವನೆಂದೂ,ಹಿಂದೆ ಕೈಲಾಸದಲ್ಲಿ ಈಶ್ವರನ ಸೇವಕನಾದ ಪುಷ್ಪದತ್ತ ನೆಂಬುವನಾಗಿದ್ದೆನೆಂದು ಹೇಳಿಕೊಂಡಿದ್ದಾನೆ.[೩] ವೇಮನನಿಗೆ ಸಂಕರ ಜನ್ಮದ ಇಂತಹ ಕಥೆ ಇಲ್ಲದಿದ್ದರೂ ಕೂಡ ಆತನಿಗೂ ಕ್ರಮವಾಗಿ ಹೆತ್ತವರ ಮೇಲಿನ ಅಭಿಮಾನ ನಶಿಸಿತು.

"ತಾಯಿ ತಂದೆಯಲ್ಲಿ ದಯೆತೋರದಾ ಪುತ್ರ
ಜನ್ಮವೆತ್ತಲೊಂದೆ ಸತ್ತರೊಂದೆ..." (೧೮೫೩)

ಎಂದು ಬರೆದರೂ, ಕೊನೆಗೆ

"ಆ ತಾಯಿಯೇ ಗೌರಿಯು ತಂದೆಯೇ ಶಂಭುವು
ಪ್ರಮಥಗಣವು ಅಖಿಲ ಬಂಧು ಬಳಗ.
ತಾನು ಹುಟ್ಟಿದ ಮನೆ ತನಗೆ ಕೈಲಾಸವು....." (೧-೪೩)

ವೇಮನನ ಕಾಲವೆಷ್ಟೋ ಮೇಲು; ಸರ್ವಜ್ಞನದಿನ್ನೂ ಗೊಂದಲ. ಒಂದು ಪದ್ಯದಲ್ಲಿ ಬಸವೇಶ್ವರನ ಶಿಷ್ಯನೆಂದಿದೆ. (೯೪೫) ಇನ್ನೊಂದು ಪದ್ಯದಲ್ಲಿ ಇಂಗ್ಲಿಷರು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡ ವಿಷಯವಿದೆ! (೧೦೦೧) ಹೀಗಾಗಿ ಹನ್ನೆರಡನೆಯ ಶತಮಾನದಿಂದ

ಹದಿನೆಂಟನೆ ಶತಮಾನದವರೆಗೂ ಈತನ ಜೀವಿತ ಕಾಲವೆಂದಾಗುತ್ತದೆ! ಈತನ್ನು ಕುರಿತು ಬಹಳಷ್ಟು ಸಂಶೋಧನೆ ಮಾಡಿ ಪದ್ಯಗಳನ್ನು ಪ್ರಕಟಿಸಿರುವ ಉತ್ತಂಗಿ ಚೆನ್ನಪ್ಪನವರು ಹದಿನಾರನೆಯ ಶತಮಾನದವನಿರಬೇಕೆಂದು ಊಹೆಮಾಡಿದ್ದಾರೆ.[೪] ಆದರೆ ಇದು ಕೂಡಾ ಆಧಾರಗಳಿಲ್ಲದ ಚರಿತ್ರೆಕಾರರ ಊಹೆಯಂತಹುದಷ್ಟೆ ಅಲ್ಲದೆ, ಹೆಚ್ಚು ನಂಬಲರ್ಹ ವಾದುದಂತೂ ಅಲ್ಲ.

ಈತ ಹೆತ್ತವರನ್ನು ತಿರಸ್ಕರಿಸಿದನೆಂದಿದೆ. ಅದಕ್ಕೆ ಕಾರಣ ಬರೀ ಧೌರ್ತ್ಯವಾಗಿರಲಾರದು. ಈತನ ಜನ್ಮ ವಿಚಾರವನ್ನು ತಿಳಿದುಕೊಂಡು ಜನರು ಅಪಹಾಸ್ಯ ಮಾಡಲಾಗಿ ತಾನು ಸಾಮಾನ್ಯ ಮನುಷ್ಯ ಮಾತ್ರನಲ್ಲವೆಂಬುದಾಗಿ ಅವರಿಗೀತ ಪ್ರತಿರೋಧವನ್ನು ವ್ಯಕ್ತಪಡಿಸಿದ್ದಾನೆ. 'ಶೂದ್ರಪ್ರಜ್ಞಲು' 'ಕಾಪು ಕವಿತ್ವಮುಲು' ನಮ್ಮಲ್ಲಿ ಪ್ರಾಂತ್ಯಮಾತುಗಳೇ ಅಲ್ಲದೆ. ಹೀಗೆ ಜಾತಿಯ ಹೆಸರಲ್ಲಿ ವ್ಯಕ್ತಿಯನ್ನು ತಿರಸ್ಕರಿಸುವವರ ಮೇಲೆ ಈತ ಕತ್ತಿಮಸೆಯುವನಾದ್ದರಿಂದಲೇ ಹೀಗೆನ್ನುತ್ತಾನೆ. :

"ಮುತ್ತು ನೀರಲಿ ಹುಟ್ಟಿ ಹತ್ತು ಸಾವಿರ ಹಡಗು ;
ಹತ್ತು ಚಿಪ್ಪೊಂದು ಹಣಮಿಲ್ಲ; ತಾಯ್ತಂದೆ
ಎತ್ತಣವರೆಂದ ಸರ್ವಜ್ಞ." (೧೧೧೨)

(ನೀರಲ್ಲಿ ಹುಟ್ಟಿದ ಮುತ್ತಿಗೆ ಹತ್ತು ಸಾವಿರ ಬೆಲೆ. ಆದರೆ ಕಪ್ಪೆ ಚಿಪ್ಪುಗಳು ಹತ್ತು ಇದ್ದರೂ ಒಂದು ನಾಣ್ಯದ ಬೆಲೆ ಅವಕ್ಕಿಲ್ಲ. ಹೆತ್ತವರೊಂದು ಲೆಕ್ಕವೆ? ಎಂದಿದ್ದಾನೆ ಸರ್ವಜ್ಞ.)

ವೇಮನನ ಹಾಗೆಯೇ ಈತನಿಗೂ ತನ್ನ ಸಾಮರ್ಥ್ಯದ ಬಗ್ಗೆ ವಿಶ್ವಾಸ ಹೆಚ್ಚು. ಈತನಿಗಿರುವ ಸರ್ವಜ್ಞನೆಂಬ ಹೆಸರು ಕೂಡ ಹೆತ್ತವರು ಇಟ್ಟ ಹೆಸರಾಗಿ ಕಂಡುಬರುವುದಿಲ್ಲ. ಸರ್ವಜ್ಞನೆಂಬ ಬಿರುದುಳ್ಳವರು ನೇಕರಿದ್ದಾರಾದರೂ, ಅದೇ ಹೆಸರಾಗಿರುವವರನ್ನು ಇದುವರೆಗೆ ನಾನು ಕಂಡಿಲ್ಲ. ಇನ್ನು ಈತ ಪಂಡಿತನೇನೂ ಅಲ್ಲವಾದ್ದರಿಂದ, ಈತನ ಪ್ರತಿಭೆಯನ್ನು ಮೆಚ್ಚಿ ಯಾವ ಪ್ರಭುವೂ ಕೂಡ ಯಾವ ಕಾಲದಲ್ಲೂ ಈ ಬಿರುದನ್ನು ಕೊಟ್ಟಿರಲಾರನು. ಆದ್ದರಿಂದ ಯಾರೋ ಈತನ ಧೂರ್ತ ಮಾತುಗಳನ್ನು ಆಲಿಸಿ 'ಇವನೇನು ಸರ್ವಜ್ಞನೆ?' ಎಂದು ಆಕ್ಷೇಪಿಸಿದ್ದಿರಬಹುದು. 'ಯಾಕಾಗಬಾರದು' ಎಂದು ಆ ಹೆಸರನ್ನೇ ಈತ ಉಳಿಸಿಕೊಂಡು ಪದ್ಯಗಳನ್ನು ರಚಿಸಿ ಅವರ ಮುಖದ ಮೇಲೆ ಎಸೆದಿರಬಹುದು! ಇದೇ ನಿಜವೆಂದಾದರೆ ತಾನು ಹುಟ್ಟಿದ ಜಾತಿ ಮತ್ತು ಹೆಸರನ್ನು ಬದಲಾಯಿಸಿ ಕೊಳ್ಳಲು ಇಷ್ಟಪಡದ ವೇಮನನಿಗಿಂತಲೂ ಸಂಘ ತಿರಸ್ಕಾರದಲ್ಲಿ ಈತ ಒಂದು ಹೆಜ್ಜೆ ಮುಂದೆ ಇಟ್ಟಿದ್ದಾನೆಂದು ಹೇಳಬಹುದು.

ವೇಮನನ ಹಾಗೆಯೇ ಈತ ಕೂಡ ಬಹಳ ಉದ್ರಿಕ್ತ ಸ್ವಭಾವವುಳ್ಳವನು. ಓದು ಬರಹಗಳ ನಿರ್ಬಂಧಕ್ಕೊಳಪಟ್ಟವನಲ್ಲ. ಸಹಜವಾದ ಪದ ಕವಿತಾಶಕ್ತಿಯನ್ನುಳ್ಳವನು. ಹಾಸ್ಯಪ್ರಿಯನು. 'ನಕ್ಕುನಗಿಸುವಾನುಡಿಲೇಸು' ಎಂದು ನಿರ್ಧರಿಸಿದವನು (೧೨೩೬) ಹಾಗೆಯೇ ನಕ್ಕು

ನಗಿಸುತ್ತಿದ್ದವನು. ಆದ್ದರಿಂದಲೇ ಇಹಲೋಕ ಸೌಖ್ಯವನ್ನು ವೇಮನನಿಗಿಂತಲೂ ಹೆಚ್ಚು ಪ್ರೀತಿಯಿಂದ ತೃಪ್ತಿಯಿಂದ ಅನುಭವಿಸಿದವನು. ವೇಮನನಲ್ಲಿ ಚಿಕ್ಕಂದಿನಿಂದಲೂ ಆತ್ಮತೃಪ್ತಿಯೆಂಬ ಧರ್ಮವು ಮಿತಿಮೀರಿಯಿದೆ. ಈತನಲ್ಲೂ ಇದೆಯಾದರೂ ಅಷ್ಟು ಪ್ರಮಾಣದಲ್ಲಿಲ್ಲ. ಅಂದರೆ, ಈತ ದೊಡ್ಡ ಶ್ರೀಮಂತನೆಂದೇನೂ ಅಲ್ಲ. ತೃಪ್ತಿಮನೋ ಧರ್ಮವೇ ಹೊರತು ವಸ್ತು ಧರ್ಮವದಲ್ಲ. ವೇಮನನಂತೆಯೇ ಈತನಿಗೂ ತುಪ್ಪ,ಹಾಲು ಮೊಸರು, ತೊವ್ವೆ ಮುಂತಾದ ಸಾಮಾನ್ಯ ಪದಾರ್ಥಗಳ ಮೇಲಷ್ಟೇ ಅಲ್ಲದೆ, ವಡೆಗಳು, ಹೋಳಿಗೆ, ಕಜ್ಜಾಯ ಮೊದಲಾದ ವಿಶೇಷವಾದ ತಿನಿಸುಗಳ ಮೇಲೆಯೂ ಆದರವಿತ್ತಾದರೂ, ಜೋಳ, ರಾಗಿ ಮುಂತಾದ ಧಾನ್ಯಗಳ ಮೇಲೆಯೂ ಅಭಿಮಾನವಿತ್ತು. ಈತನ ಸಂಸಾರ ಲಕ್ಷಣವೇನೆಂದರೆ ಬೆಚ್ಚನೆಯ ಮನೆ, ವೆಚ್ಚಕ್ಕೆ ಹೊನ್ನು, ಎರಡು ಎತ್ತುಗಳು, ಐವರು ಗಂಡುಮಕ್ಕಳು (?) ಬತ್ತಿಹೋಗದ ಹಸುಗಳು, ಚೆನ್ನಾಗಿ ಕೆಲಸ ಮಾಡುವ ಸೊಸೆ, ಒಬ್ಬ ಮುದಿಯಜ್ಜಿ,ತನ್ನ ಇಚ್ಚೆಯನ್ನರಿತ ಗುಣವತಿಯಾದ ಹೆಂಡತಿ ಇವು ಇವೆಯೆಂದಾದರೆ 'ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ' (೨೬೭). ಹೀಗಾಗಿ ಈತ ವೇಮನನಿಗಿಂತಲೂ ಬುದ್ಧಿವಂತನಾಗಿದ್ದು ಏಕಪತ್ನೀವ್ರತವನ್ನು ಮರ್ಯಾದೆಯಿಂದ ಪಾಲಿಸುತ್ತಾ ಬದುಕಿದವನೆಂದು ಊಹಿಸಬಹುದು. ಆತನಂತೆಯೇ ಈತನು ಕೂಡಾ ಜಾರಸ್ತ್ರೀಯರು, ವೇಶ್ಯೆಯರು ಮೊದಲಾದವರಿಗೆ ಒಳಗಾಗಿದ್ದವನೇ ಅಲ್ಲದೆ, ಆ ಪ್ರಪಂಚದಲ್ಲಿ ಆತನಿಗಿಂತ ಒಂದು ಕೈ ಹೆಚ್ಚಾಗಿಯೇ ಹೋರಾಟ ಮಾಡಿದ್ದಾನೆ ಎಂಬುದನ್ನು ಹೇಳಬೇಕಾಗಿದೆ. ಎಂತಹವರು ಜಾರಸ್ತ್ರೀಯರು ಎಂಬ ವಿಷಯವನ್ನು ತಿಳಿಯಪಡಿಸುವದಕ್ಕಾಗಿಯೇ ಈತ ಅನೇಕ ಪದ್ಯಗಳನ್ನು ಬರೆದಿದ್ದಾನೆ (೧೬೬೪-೧೭೭೧) ಸ್ತ್ರೀವಶೀಕರಣಕ್ಕೆ ಯಾವ ಬೇರು ಮೂಲಿಕೆಗಳ ಅಗತ್ಯವಿಲ್ಲವಂತೆ.ಚಿನ್ನದ ಬೇರಿನಿಂದ ಅವರು ತಪ್ಪದೆ ಸ್ವಾಧೀನವಾಗುವರಂತೆ! (೧೬೨೮) ಹೀಗೆಯೇ ವೇಶ್ಯೆಯರನ್ನು ಕುರಿತೂ ಹಲವಾರು ಪದ್ಯಗಳನ್ನೀತ ಬರೆದಿರುವನು (೨೮೯) ಅವರ ವಿಷಯದಲ್ಲಿ ಒಂದೂ ಒಳ್ಳೆಯ ಮಾತನ್ನು ಬರೆಯದಿರುವುದಷ್ಟೇ ಅಲ್ಲ, ಬದಲಿಗೆ ಬರೀ ಮಾತುಗಳಿಂದಲೇ ಅವರನ್ನು ಮರುಳು ಮಾಡಿ ಹಣ ಕೊಡದೆ ಮೋಸ ಮಾಡುವವನೇ ಜಾಣನೆಂದು ಒಂದು ಕಡೆ ಹೇಳಿದ್ದಾನೆ! (೧೭೬೬) ಆದರೆ ಈವರ್ತನೆ ಅನುಚಿತವಾದುದೆಂದೂ ಈತನಿಗೆ ಗೊತ್ತು. ಇತರರಿಗೆ ಹಾಗೆಯೇ ಬೋಧಿಸಿದ್ದಾನೆ. ನಿಜವಾದ ಸುಖ ಯಾವುದೆಂದರೆ -

"ಜೋಳದಾ ಬೋನಾಗಿ ಮೇಲೆ ಕೆನೆ ಮೊಸರಾಗಿ
ವೇಳೆಗೆ ಬರುವ ಸತಿಯಾಗೆ, ಸೂಳೆಯನು
ಕೋಳದಿಕ್ಕೆಂದ ಸರ್ವಜ್ಞ" (೧೫೫೯)

ಜೋಳದ ಊಟ, ಕೆನೆ ಮೊಸರು, ಸಮಯಕ್ಕೆ ಬರುವ ಸತಿ -ಇವು ಇದ್ದರೆ ವೇಶ್ಯೆಯನ್ನು ಹೊರಗಿಡು-ಎಂದು ಅರ್ಥ. ಇವು ಇಲ್ಲದಿರುವಾಗ ವೇಶ್ಯೆ ಉಪಯೋಗಕ್ಕೆ ಬರುವಳೆಂದು ಇದರ ತಾತ್ಪರ್ಯ

ಇಂತಹ ತೃಪ್ತಿಕರವಾದ ಭಾವನೆಯುಳ್ಳವನಾದ್ದರಿಂದಲೇ, ವೇಮನನಂತೆ ಪದೇ ಪದೇ ಬ್ರಹ್ಮನನ್ನು ದೂಷಿಸದೆ, ನಮ್ಮ ಅರಿವಿಗೆ ಮೀರಿದ ವಿಷಯಗಳನ್ನು ಕುರಿತು ಚಿಂತಿಸಿ, ನಮಗೆ ಸಾಧ್ಯವಾಗದಂತಹ ಕಾರ್ಯಗಳನ್ನು ಸಾಧಿಸಲು ಯತ್ನಿಸಿ, ಅವಸ್ಥೆ ಪಡುವುದಕ್ಕಿಂತಲೂ 'ಶಿವತೋರಿದಂತಿಹುದೇ ಲೇಸು ಸರ್ವಜ್ಞ' ಎಂಬ ಭಾವನೆಯಿಂದ ಇದ್ದನು.(೮೧೫)

"ಬಂದೀತು ರೋಗ ನಿನಗೆಂದು ಅಂಜಿಕೆ ಬೇಡ,
ಬಂದುದನು ಉಂಡು ಸುಖಿಸುತ್ತ, ರೋಗ ಬಂ
ದಂದಿಗೆದ್ದೇಳು ಸರ್ವಜ್ಞ." (೪೮೩)

(ರೋಗ ಬಂದೀತೇನೋ ಎಂಬ ಭಯಬೇಡ. ಬಂದುದನು ಉಂಡು ಸುಖವಾಗಿರು. ರೋಗ ಬಂದಾಗ ಎದ್ದು ಹೊರಡು.)

ಅಂದರೆ, ಈತ ಶಾಂತಮೂರ್ತಿಯಾಗಿ, ಸದ್ದಿಲ್ಲದೆ, ಅನೇಕರ ಹಾಗೆ ಸಪ್ಪೆ ಬದುಕನ್ನು ನಡೆಸಿದವನೆಂದು ಅಲ್ಲ.ವೇಮನನಂತೆಯೇ ಈತನನ್ನು ರೇಗಿಸುವುದೆಂದರೆ ಭೇರಿಯನ್ನು ಬಾರಿಸಿದಂತೆಯೇ. ಮಾತುಗಳ ತೀಕ್ಷ್ಣತೆಯಲ್ಲಿ ಇಬ್ಬರೂ ಇನ್ನೊಬ್ಬರಿಗಿಂತ ಕಡಿಮೆಯಿಲ್ಲ. ಇಬ್ಬರ ಬೈಗುಳಗಳೂ ಅತ್ಯಂತ ಕಹಿಯಾದವೆ. ಆದರೆ ವೇಮನನಿಗಿಂತ ಈತನಲ್ಲಿ ನೆಮ್ಮದಿ, ಉದಾಸೀನತೆ ಕೊಂಚ ಹೆಚ್ಚಾಗಿ ಕಂಡುಬರುತ್ತದೆ. ಆದ್ದರಿಂದಲೆ, ವೇಮನನಿಗಿದ್ದಷ್ಟು ಅಸಹ್ಯ ಭಾವನೆ ಪ್ರಪಂಚದ ಮೇಲೆ ಈತನಿಗಿರಲಿಲ್ಲ.

ವೇಮನನ ಹಾಗೆಯೇ ಈತನಿಗೂ ಸಂಗೀತದಲ್ಲಿ ಅಭಿರುಚಿಯಿತ್ತು. ಆತನಿಗಿಂತಲೂ ಕೊಂಚ ಹೆಚ್ಚಾಗಿಯೇ ಪ್ರವೇಶವಿತ್ತೇನೋ. ತಂತಿವಾದ್ಯ ಒಳ್ಳೆಯದೆಂದೂ ಅದರಲ್ಲೂ ವೀಣೆ ಉತ್ತಮ ವೆಂದು ಈತ ತಿಳಿದಿದ್ದ. (೧೦೨೯) ವೇಮನನಿಗೆ ಪ್ರಿಯವಾದ ಆಟವೆಲದಿ ಗಿಂತಲೂ ಈತನ ತ್ರಿಪದಿ ಸಂಗೀತದಲ್ಲಿ ಹೆಚ್ಚು ಉಪಯುಕ್ತವಾದ ಸ್ಥಿರವಾದ ಲಯಗತಿ ಯಳ್ಳದ್ದು. ಇದನ್ನು ಪದ್ಯವೆನ್ನುವುದಕ್ಕಿಂತಲೂ ಹಾಡು ಎನ್ನುವುದೇ ಮೇಲು. ಏಕನಾದವು ವೇಮನನಿಗಿಂತ ಈತನಿಗೇ ಹೆಚ್ಚು ಉಪಯುಕ್ತ. ಈ ತ್ರಿಪದಿಯಲ್ಲಿ ಪದ್ಯಗಳಲ್ಲಿನ ಹಾಗೆ, ಗುರು ಗುರುವಾಗಿಯೂ ಲಘು ಲಘುವಾಗಿಯೂ ಉಚ್ಚರಿಸಿದರೆ ಸಾಲದು! ತಾಳದ ನಡಿಗೆಗೆ ತಕ್ಕಂತೆ ಎರಡನ್ನೂ ಸ್ವಲ್ಪ ಬದಲಿಸಿ ಸರಿಮಾಡಿಕೊಳ್ಳಬೇಕು. ಸಂಗೀತಗಾರರಿಗೆ ಈತನ ಉಪದೇಶವೊಂದು ಬಹಳ ಉಪಯುಕ್ತ ಕರವಾಗಿದೆ. -

"ಅರ್ಥವಿಲ್ಲದ ಹಾಡು ವ್ಯರ್ಥಸಾಸಿರವಿದ್ದು,
ಅರ್ತಿಯಿಂ ಕತ್ತೆಯರಚಿದದರಲ್ಲಿ
ಅರ್ಥವುಂಟೆಂದ ಸರ್ವಜ್ಞ". (೧೨೦೮)

(ಅರ್ಥವಿಲ್ಲದ ಹಾಡುಗಳು ಸಾವಿರವಿದ್ದರೂ ವ್ಯರ್ಥವೆ. ಮನಸ್ಸಿಟ್ಟು ಕತ್ತೆ ಅರಚಿದರೂ ಅದಕ್ಕೆ ಅರ್ಥವಿರುತ್ತದೆ.) ಅರ್ಥವಿಲ್ಲದ ಹಾಡು ಅದಕ್ಕಿಂತಲೂ ಕಡೆ ಎಂಬ ಭಾವ. ವೇಮನನಿಗೆ ತೋಡಿ ರಾಗದ ಬಗ್ಗೆ ಬಹಳ ಪ್ರೀತಿ. ಈತ ನಾಟಿರಾಗವು ಮೇಲು ಎನ್ನುತ್ತಾನೆ (೨೬೯) ತೋಡಿಯ ಹಾಗೇ ಇದರಲ್ಲೂ ಅಸಹ್ಯ, ಹಠ, ಅತೃಪ್ತಿ, ಸ್ವಾತಂತ್ರ್ಯ ಮೊದಲಾದ

ಭಾವಗಳನ್ನು ತೋರಿಸಬಹುದಾದರೂ, ದೈನ್ಯತೆಯನ್ನು ಅದರಲ್ಲಿಯ ಹಾಗೆ ಇದರಲ್ಲಿ ಅಷ್ಟೊಂದು ಸ್ಪಷ್ಟವಾಗಿ ತೋರಿಸಲು ಸಾಧ್ಯವಿಲ್ಲ. ಮನುಷ್ಯನಾಗಿ, ಅಸಹಾಯಕನಾಗಿ, ಅಜ್ಞಾನಿಯಾಗಿ ಹುಟ್ಟಿರುವೆನಲ್ಲ ಎಂಬ ದುಃಖವು ವೇಮನನಿಗಿದೆ, ಅದು ನಿಜವೆ ಆದರೂ ಅದರ ಬಗ್ಗೆ ದುಃಖಿಸಿದರೂ ಕೂಡ ದೇಹವು ಕೃಶವಾಗುವುದಷ್ಟೇ ಹೊರತು ಇನ್ನೇನೂ ಪ್ರಯೋಜನವಿಲ್ಲವಾದ್ದರಿಂದ ಇರುವಷ್ಟು ದಿನ ಕೈಲಾದಷ್ಟು ಕೆಲಸ ಮಾಡಿ ತನಗೂ ಇತರರಿಗೂ ಕೂಡ ಸಹಜವಾಗಿ ಬದುಕುವುದು ಉತ್ತಮವೆಂಬ ಭಾವನೆ ಸರ್ವಜ್ಞನದು. ನಾಟಿರಾಗದಲ್ಲಿ ಧೀರಗುಣವನ್ನು ಸೊಗಸಾಗಿ ತೋರಿಸಬಹುದು.

ಹೀಗಾಗಿ ಯುದ್ಧ ಸಮಯದಲ್ಲಿ ಶೌರ್ಯ, ಪ್ರಾಣಕ್ಕೆ ಲೆಕ್ಕಿಸದಿರುವುದು ಇತ್ಯಾದಿ ಗುಣಗಳನ್ನು ಈತ ಬಹಳ ಪ್ರಶಂಸಿಸಿದ್ದಾನೆ. "ಅಮ್ಮನಾಡಿರಿಯುವದು ಬೊಮ್ಮನಾದಡೆಯೇನೊ"? (೬೨೯)- ಬ್ರಹ್ಮನೇ ಎದುರಾದರೇನು? ತನ್ನ ಬಿರುದನ್ನು ಹೇಳಿ ತಿವಿಯಬೇಕು - ಎಂಬುದು ಈತನ ಅಭಿಪ್ರಾಯ. ಜಾತಿ ವೀರರು ನಾವಭೀತಿಗಂಜು ಳಿವರೆ? (೬೨೮)- ಜಾತಿವೀರರು ಸಾವಿಗೆ ಹೆದರಿ ಹಿಂಜರಿಯುವುದಿಲ್ಲ ಎಂತಲೂ 'ಮುರಿದು ಬಂದಾಗ ತರಿಯದಾ ಕತ್ತಿಯ, ನರೆದು ಮುಕ್ಕುವನೆ'! (೬೭೫ )- ಸರಿಯಾದ ಸಮಯದಲ್ಲಿ ಕಡಿಯಲಾಗದ ಕತ್ತಿ ಇರುವುದು ಅರಿದು ಕುಡಿಯಲಿಕ್ಕಾ?' ಎಂದೂ ಈತ ಅತಿ ತೀವ್ರವಾಗಿ ನುಡಿಯುವನು.

ಪರಬಲವನ್ನು ಕಂಡು ಪ್ರಾಣರಕ್ಷಣೆಗಾಗಿ
ಓಡಿಹೋಗುವ ಹೆದರುಪುಕ್ಕಲು ಮನುಷ್ಯ,
ಯಮನು ಮುನಿದರೆ ಯಾರಡ್ಡಿ ಅದಕೆ.?..... (೨೪೩೨)

ಎಂದು ವೇಮನ ಕೂಡ ಹೇಳಿದ್ದಾನೆ. ಆದರೆ ಈ ವಿಧವಾದ ಶೌರ್ಯದ ಬಗ್ಗೆ ಆತನಿಗಷ್ಟು ಹಿಡಿತ ಕಂಡುಬರುವುದಿಲ್ಲ.

ಹೀಗೆ ಶೌರ್ಯ ಹಾಗೂ ಸಂಸಾರ ಸುಖದಲ್ಲಿ ಆಸಕ್ತಿಯುಳ್ಳವನಾದ್ದರಿಂದಲೇ ಈತ ಅದನ್ನು ತೀರಿಸಿಕೊಳ್ಳಲು ಕೆಲವು ಕಾಲ ರಾಜಸೇವೆ ಮಾಡಿರುವಂತಿದೆ. ವೇಮನನೂ ಮಾಡಿರಬಹುದೆಂದು ಊಹಿಸಿದ್ದೇವಾದರೂ ಈತನದು ಬಹಳ ಕಾಲ ಇದ್ದಿರಲಾರದು. ಈ ವಿಷಯದಲ್ಲಿ ಈತನಿಗೆ ಇದ್ದಷ್ಟು ಅನುಭವ ಆತನಿಗಿಲ್ಲ. ಆ ಕೆಂಡವನ್ನು ಬಹಳ ಕಾಲ ಹಿಡಿದಿಟ್ಟುಕೊಳ್ಳುವಂತಹ ಅರಸ ಆ ಕಾಲದಲ್ಲೇ ಅಲ್ಲ ಯಾವ ಕಾಲದಲ್ಲಿಯೂ ಇರಲು ಸಾಧ್ಯವಿಲ್ಲ. ದ್ರವ್ಯಾರ್ಜನೆಗಾಗಿ ಕೆಲವು ದಿನಗಳು ಹಾಗೆ ಕೆಲಸ ಮಾಡಿಕೊಂಡಿದ್ದು ಬಹುಬೇಗ ಸಾಕಾಗಿ -

ಎಷ್ಟು ಸೇವೆ ಮಾಡಿಯಾವ ಪಾಡು ಪಟ್ಟರೂ
ಅರಸುತನವನ್ನು ನಂಬಬಾರದು !
ಹಾವಿನೊಂದಿಗಿನ ಸ್ನೇಹ ಹತ್ತು ಸಾವಿರ ಪಾಲು ವಾಸಿ. (೬೩೮)

ಎಂದು ಅರಿತು ಆ ಪೀಡೆಯಿಂದ ಬಿಡುಗಡೆ ಹೊಂದಿದನು. ಸರ್ವಜ್ಞ ಹಾಗಲ್ಲದೆ,

ರಾಜರ ಚಿತ್ತವೃತ್ತಿಯನ್ನಾಶ್ರಯಿಸಿ ನಡೆದುಕೊಂಡು, ಅವರ ಮಂತ್ರಿಗಳ ಮರ್ಜಿಗನು ಗುಣವಾಗಿದ್ದು ಕೊಂಡು, ಸಭೆಗಳಲ್ಲಿ ಉಳಿದ ಹಿರಿಯರ ಬಗ್ಗೆ ವಿನಯವಿಧೇಯತೆಗಳನ್ನು ತೋರಿ ಗೌರವಿಸುತ್ತಿದ್ದನು. (೬೪೫ - ೬೬೦). 'ಸ್ವಾಮಿ ಕಾರ್ಯಕ್ಕೆ ಮಡಿಯಲೇಬೇಕು' (೭೦೬) ಎಂದು ಸಂಕಲ್ಪಿಸಿ ನಿರ್ವಂಚನೆಯಿಂದ ಅವರಿಗಾಗಿ ದುಡಿದಿದ್ದಾನೆ. ಆದರೆ, ಜಾರತನ, ಚೋರತನ, ಅಸತ್ಯ ಮುಂತಾದ ದುರ್ಗುಣಗಳನ್ನು ಅವರಲ್ಲಿ ಕಂಡು, ಅದರ ಫಲವನ್ನನುಭವಿಸಿ ಅಸಹ್ಯಪಟ್ಟು ಕೊಂಡಿದ್ದಾನೆ. ಕೊನೆಗೆ 'ಬಿನ್ನಪವ ಕೇಳದರಸಿ ನೋಲಗದಿಂದ ಸನ್ಯಾಸಲೇಸು' (೬೯೦) ಎಂಬ ನಿರ್ಣಯಕ್ಕೆ ಬಂದನು.

ಮೊದಲಿನಿಂದಲೂ ಈತನು ಕೂಡಾ ಬಸವೇಶ್ವರ ಪ್ರತಿಪಾದಿತವಾದ ಲಿಂಗ ಧಾರಿ ವೀರಶೈವ ಧರ್ಮಕ್ಕೆ ಸೇರಿದವನು. ಹೀಗಾಗಿ ಈತನಿಗೆ ಬಯಸಿದಾಗ ಸನ್ಯಾಸವನ್ನು ಕೊಡುವಂತಹ ಶಿವಯೋಗಿಗಳಿಗೆ ಇಲ್ಲಿ ಬರವಿರಲಿಲ್ಲ. ಇಂತಹವರಲ್ಲಿ ಯಾರೋ ಒಬ್ಬರು ಈತನನ್ನು ಜಂಗಮನನ್ನಾಗಿ ಮಾಡಿ ಯೋಗಮಾರ್ಗವನ್ನುಪದೇಶಿಸಿದ್ದಾರೆಂದು ತೋರುತ್ತದೆ. ಆದರೆ ಈ ಯೋಗಸಾಧನೆಗೆ ಮುನ್ನ ಈತನಿಗೆ ಸಾಮಾನ್ಯವಾಗಿ ಎಲ್ಲರ ಹಾಗೆಯೇ, ಬಹಿರಂಗ ವೇಷಗಳ ಬಗ್ಗೆ ನಂಬಿಕೆಯಿತ್ತು. ವಿಭೂತಿರುದ್ರಾಕ್ಷಿಗಳನ್ನು ಧರಿಸಿದವನಿಗೆ ಪಾಪವು ಬಯಲಾಗಿ ಇದ್ದ ಕಡೆಗೆ ಶಿವನು ಬರುವನೆಂದು ಈತ ತಿಳಿದಿದ್ದ (೯೯). ಲಿಂಗವಿಲ್ಲದೆ ಏನೂ ತಿನ್ನಬಾರದು (೧೦೪). ತಾನು ಉಣ್ಣುವ ವಸ್ತುಗಳೆಲ್ಲವನ್ನು ಮೊದಲು ಶಿವಾರ್ಪಣೆ ಮಾಡಿ ನಂತರ ಉಣ್ಣಬೇಕು (೧೦೭) ಜಂಗಮರು ಸಾಕ್ಷಾತ್ ಶಿವಸ್ವರೂಪಿಗಳು. 'ತಿರುದು ತಂದಾದರೂ ಕರೆದು ಜಂಗಮಕಿಕ್ಕು' (೫೪೯) ಎಂಬುದು ಈತನ ಬೋಧೆ. ಔದಾರ್ಯ ವಿಷಯದಲ್ಲಿ ವೇಮನನ ಹಾಗೆಯೇ ಈತನೂ ಅತಿವಾದಿಯಾಗಿ 'ತಿರುಪೆ ಎತ್ತಿಯೋ ಪೀಡಿಸಿಯೋ ಕಳುವು ಮಾಡಿಯೋ ತಂದು ಕರೆದು ದಾನಮಾಡು' (೫೫೦) ಎಂದು ಹೇಳಿದ್ದರೂ, ದಾನಪಾತ್ರ ವಿಷಯದಲ್ಲಿ ಆತನಿಗಿರುವಷ್ಟು ವಿಶಾಲದೃಷ್ಟಿ ಈತನಿಗಿದ್ದಂತೆ ಕಂಡುಬರುವುದಿಲ್ಲ. ಈತನ ಧರ್ಮದಲ್ಲಿ ಎಲ್ಲರಿಗೆ ಕೊಡುವುದಕ್ಕಿಂತಲೂ ಶಿವಭಕ್ತರಿಗೆ ಕೊಡುವ ದಾನವೇ ಶ್ರೇಷ್ಠ (೫೫೧-೫೫೩). ಆದರೆ ಗತಿಯಿಲ್ಲದ ಕೈಲಾಗದವರೇನು ದಾವ ಮಾಡುವರು? ಈತನ ಉತ್ತರ, ಜಂಗಮರು ತಂದ ಅಕ್ಕಿಯಿಂದ ಅಡುಗೆ ಮಾಡಿಕೊಡುವುದು, ಉಳಿದು ಕೊಳ್ಳಲು ಅವರಿಗೆ ವಸತಿ ವ್ಯವಸ್ಥೆ ಮಾಡುವುದು, ಕುಡಿಯುವುದಕ್ಕೆ ನೀರು ಒದಗಿಸುವುದು? (೫೫೪) ಇಷ್ಟನ್ನು ಕೂಡ ಮಾಡಲಾಗದ ಬಡವರು ಇರುವುದಿಲ್ಲವಲ್ಲ.

ಹೀಗೆ ಈತನಿಗೆ ವೇಮನನಿಗಿಂತಲೂ ಶಿವಪಕ್ಷಪಾತ, ಇತರ ದೇವರುಗಳ ಬಗ್ಗೆ ಅನಾದರ ಕೊಂಚ ಹೆಚ್ಚಾಗಿತ್ತು. ನರಸಿಂಹನ ಅವತಾರ ದೊಡ್ಡ ವಿಚಿತ್ರವೇ ಆದರೂ ಶರಭನು ಉಗುರಿನಿಂದ ಕೊಲ್ಲುವಾಗ ವಿಷ್ಣುಮೂರ್ತಿ ನರಿಯ ಹಾಗಾದನು (೧೭೫.) ಹೀಗಾಗಿ ಹತ್ತು ಅವತಾರಗಳೆತ್ತಿ ಎತ್ತು, ಎಮ್ಮೆಗಳನ್ನು ಕಾಯ್ದು ಪಾಂಡವರ ಸೇವಕನಾದ ಹರಿ ಎಂತಹ ದೇವರು? ಎಂದು ಈತ ಪ್ರಶ್ನಿಸಿದ್ದಾನೆ. (೧೭೪) ಆದರೆ ಯೋಗಸಾಧನೆಯನ್ನು ಕೈಗೊಂಡಮೇಲೆ ಅದರಿಂದ ಉಂಟಾಗುವ ಚಿತ್ರ ವಿಚಿತ್ರವಾದ ಅನುಭವಗಳನ್ನು ಗಮನಿಸಿ,

ಬ್ರಹ್ಮ ಸಾಕ್ಷಾತ್ಕಾರ ಸೌಖ್ಯವನ್ನು ಅನುಭವಿಸಲು ಪ್ರಾರಂಭಿಸಿದ ಕೊಡಲೆ ಈತನಿಗೆ ಬಹಿರಂಗವನ್ನು ಕುರಿತ ಭಾವನೆಗಳೆಲ್ಲವು ವೇಮನನಿಗಾದಂತೆಯೆ ನಶಿಸಿಹೋದವು. ಈ ವಿಗ್ರಹ ಪೂಜೆಗಳು, ಈ ವೇದವಾದಗಳು, ಈ ಜಾತಿ ಭೇದಗಳು ಮೊದಲಾದವುಗಳೆಲ್ಲ ತತ್ತ್ವನಿರ್ಣಯದಲ್ಲಿ ಏನೇನೂ ಕೆಲಸಕ್ಕೆ ಬಾರವು ಎಂದು ತಿಳಿದನು. "ಚೆಡು ರಾಳ್ಳಕು ವಟ್ಟಿ ಪೂಜ ಚೇಯಕು ವೇಮಾ (೨೩೭೨) ಎಂದು ಹೇಳಿದ್ದರೂ ಆತನಂತೆಯೇ ಈತನಿಗೂ, ದೇವಳದಲ್ಲಿನ ಶಿವಲಿಂಗ ಮಸಾಲೆ ಅರೆಯುವುದಕೆ ಉಪಯೋಗಿಸಬಹುದಾದ ಗುಂಡೇ ಹೊರತು ಬೇರೇನಲ್ಲವೆಂದು ಅನ್ನಿಸಿತು. ಸಂಬಾರವರೆವ ಬಲುಕಲ್ಲು ಹರನೆಂದು ನಂಬುವವರಾರು ಸರ್ವಜ್ಞ" (೧೬೫) ಎಷ್ಟು ವೇದಗಳಿದ್ದೂ ಏನು ಫಲವಿದೆ? ಅನುಭವಿಯ ವೇದವೇ ವೇದ (೮೧೬) ಮತ್ತೆ "ನಾಲ್ಕು ವೇದಗಳು ನಾಲ್ಕು ಮೊಲೆಗಳು ನಾದವೇ ನೂರೆಹಾಲು ಇದನ್ನು ಸಾಧಿಸುವ ಶಕ್ತಿ ಶಿವಯೋಗಿಗಲ್ಲದೆ ಇನ್ನಾರಿಗೂ ಇಲ್ಲ (೪೨೮) ವೇಮನನು ಕೂಡಾ ವೇದಸಾರಮೆಲ್ಲ ವೇಮನ ಯೆರುಗುನು (೩೬೦೭) ಎಂದಿದ್ದಾನೆ. ಯೋಗಿಗಳೆಲ್ಲ ಹೀಗೆಯೇ ಹೇಳಿದ್ದಾರೆ.

ಮಥಿತ್ವಾ ಚತುರೋವೇದಾನ್ ಸರ್ವಶಾಸ್ತ್ರಾಣಿ ಚೈವಹಿ
ಸಾರಸ್ತು ಯೋಗಿಭಿಃ ಪೀತಸ್ತಕ್ರಂ ಪಿಬತಿ ಪಣ್ಡಿತಃ

(ಜ್ಞಾನಸಂಕಲಿನೀ ತಂತ್ರ, ೫೦)

(ಎಲ್ಲ ವೇದ ಶಾಸ್ತ್ರಗಳನ್ನು ಮಥಿಸಿ ಯೋಗಿಗಳು ಸಾರವನ್ನು ಕುಡಿಯುವರು. ಪಂಡಿತನು ಬರೀ ಮಜ್ಜಿಗೆಯನ್ನು ಕುಡಿಯುವನು.) ಆದ್ದರಿಂದ ಜ್ಞಾನಿಯಾದವನಿಗೆ ವಾದದ ಅಗತ್ಯವಿಲ್ಲ. ಮತ್ತು ಬ್ರಹ್ಮಜ್ಞಾನವುಳ್ಳವನು ಸುಮ್ಮನಿರಬೇಕೇ ಹೊರತು ಅದನ್ನು ಕುರಿತು ಚರ್ಚಿಸುವುದು, ಕದಿಯಲು ಹೋದವನು ಕೆಮ್ಮಿದ ಹಾಗಾಗುತ್ತದೆ (೩೨೪) ಎಂದು ವೇಮನ ಹೇಳಿದ್ದಾನೆ. (೩೩೪೦). ಯಜ್ಞಯಾಗಾದಿಗಳ ಬಗ್ಗೆ ಆತನಿಗೆಂತಹ ದ್ವೇಷವೋ ಈತನಿಗೂ ಅಷ್ಟೇ. ಒಂದು ಮೇಕೆಯನ್ನು ಕೊಂದು ತಿಂದವನು ಸ್ವರ್ಗಕ್ಕೆ ಹೋಗಬಹುದೆಂದಾದರೆ ಯಾವಾಗಲೂ ಮೇಕೆಗಳನ್ನು ಲೆಕ್ಕವಿಲ್ಲದ ಕೊಂದು ತಿನ್ನುವ ಕಟುಕನು ದೇವೇಂದ್ರನೆ ಆಗಬೇಕಲ್ಲ? ಎಂಬುದು ಈತನ ಪ್ರಶ್ನೆ (೮೪೭). ಇನ್ನು ವೇಮನನ ಹಾಗೇ ಜಾತಿಭೇದಗಳನ್ನು ಕುರಿತು ದಂಡೆತ್ತಿದ ಬಸವಣ್ಣನ ಧರ್ಮವನ್ನು ಅರಿತಿದ್ದ ಈತನಿಗೆ ಪರಬ್ರಹ್ಮಾನುಭವವೂ ಜೊತೆಯಾಗಿ, ಈತನನ್ನು ಅವುಗಳಿಗೆ ಪರಮ ಶತ್ರುವನ್ನಾಗಿ ಮಾಡಿತು. ಎಲ್ಲರಿಗಿಂತಲೂ ಹೆಚ್ಚು ಮೇಲು ಎನ್ನಲಾದ ಬ್ರಾಹ್ಮಣರ ಬಗ್ಗೆ ದ್ವೇಷವೂ,ಕೀಳು ಎನ್ನಲಾಗಿರುವ ಚಂಡಾಲರ ಬಗ್ಗೆ ಕನಿಕರವೂ ಉಂಟಾಯಿತು. ಬ್ರಾಹ್ಮಣರು ಧರ್ಮಚ್ಯುತರಾದರೆಂದೇ ಈತನಿಗೂ ವೇಮನನ ಹಾಗೆ ಅವರ ಮೇಲೆ ಸಿಟ್ಟು.ಯೋಗ ಧ್ಯಾನಗಳನ್ನರಿಯದೆ ಬ್ರಾಹ್ಮಣರು ಭೋಗಿಗಳಾಗಿ ಬಿಟ್ಟಿದ್ದಾರೆಂಬುದು ಈತನ ಆರೋಪ (೮೨೫). ತಾಯಿ ಶೂದ್ರಳು ತಾನು ಹೇಗೆ ಬ್ರಾಹ್ಮಣ? (೧೪೭೬) ಎಂದು ಕೇಳಿದ ವೇಮನನಂತೆಯೇ, ಸಂಸ್ಕಾರ ಜನಿವಾರಗಳು ಅವು ಇಲ್ಲದ ತಾಯಿ ಹೆಂಡತಿ ಮೊದಲಾದವರೊಂದಿಗೆ ಕೂಡಿದ್ದರೂ, ಶೂದ್ರರನ್ನು ಮುಟ್ಟಿಸಿಕೊಳ್ಳದೆ

ಅವರಿಗಿಂತಲೂ ತಾನು ಹೆಚ್ಚು ಎನ್ನುವಂತಹ ಬ್ರಾಹ್ಮಣನದು ಎಂತಹ ಬ್ರಾಹ್ಮಣತ್ವವೆಂದು ಕೇಳುವನು (೮೨೭) . ಅವರನ್ನು ನಂಬಿ ಯಾರು ಬದುಕಿದ್ದಾರೆಂದು ಆತನಂತೆಯೇ ಈತನೂ ಆಕ್ರೋಶಿಸಿದ್ದಾನೆ.! (೯೦೪) ಆದರೆ ನೀತಿಯನ್ನರಿತ ಬ್ರಾಹ್ಮಣನು ಲೋಕಕ್ಕೆ ಜ್ಯೋತಿಯಂತ ಹವನೆಂದು ನಿರ್ವಂಚನೆಯಿಂದ ಹೇಳಿದ್ದಾನೆ (೮೮೮). ಆದ್ದರಿಂದ ಜನ್ಮಸಿದ್ಧವಾದ ಮೇಲುಕೀಳುಗಳನ್ನು ಮಾನ್ಯ ಮಾಡಬಾರದು. ಒಂದೇ ಭೂಮಿಯ ಮೇಲೆ ನಡೆದು, ಒಂದೇ ನೀರನ್ನು ಕುಡಿದು, ಒಂದೇ ಅಗ್ನಿಯಲ್ಲೇ ಎಲ್ಲರೂ ಉರಿದು ಹೋಗುತ್ತಲಿರಲು, ನಡುವೆ ಕುಲಗೋತ್ರಗಳೆಲ್ಲಿಂದ ಬಂದವು? (೮೬೪) ಸ್ವರ್ಗದಲ್ಲಿ ಹೊಲಗೇರಿಯಿಲ್ಲವೆಂತಲೂ, ದೇವರಿಗೆ ಕುಲಭೇದವಿಲ್ಲವೆಂದೂ, ಸ್ಪಷ್ಟವಾಗಿ ಹೇಳಿದ್ದಾನೆ.

ಇನ್ನು ನನ್ನ ದೇವರೆಂಥವನು? ಆತ ಜಗಕ್ಕೆಲ್ಲ ಒಬ್ಬನೆ ಪ್ರಭುವು (೧೫೦) ಆತನು ಶಿವ. ನಿರಾಕಾರ (೯೫) ಸರ್ವವ್ಯಾಪಿ ಹಾಲಿನಲ್ಲಿ ತುಪ್ಪದ ಹಾಗೆ, ನೀರಿನಲ್ಲಿ ಬೆಂಕಿಯ ಹಾಗೆ ಎಲ್ಲದರಲ್ಲೂ ಇರುವನು (೨೭೫) ನೀನಿರುವಲ್ಲಿಯೇ ನಿನ್ನಲ್ಲಿಯೆ ಇರುವನು (೨೭೬). ಅದು ಹೇಗೆ ಸಾಧ್ಯವೆಂದು ಯಾರಾದರೂ ಪ್ರಶ್ನಿಸಿದರೆ :

“ಸಣ್ಣನೆಯ ಮಳಲೊಳಗೆ ನುಣ್ಣನೆಯ ಶಿಲೆಯೊಳಗೆ
ಬಣ್ಣಿಸಿ ಬರೆದ ಪಠದೊಳಗೆ, ಇರುವಾತ
ತನ್ನಲ್ಲಿ ಯಿರನೆ ಸರ್ವಜ್ಞ”? (೨೮೦)

ಎಂದು ಈತ ತಿರುಗಿ ಪ್ರಶ್ನಿಸುತ್ತಾನೆ. ಯೋಗ ಸಮಾಧಿಯಲ್ಲಿ ನಿಂತು, ಎಲ್ಲ ಭೇದಗಳನ್ನು ಮರೆತು, ತಾನೇ ತಾನಾಗಿರಲು ಅಲ್ಲೇ ಬ್ರಹ್ಮ ಸಾಕ್ಷಾತ್ಕರಿಸುವನು (೨೮೨). ಜೀವಿಗಳಿಗೇ ಅಜ್ಞಾನ ರೂಪವಾದ ಮಾಯೆ ಇರುವುದಷ್ಟೆ ಆತನಿಗಲ್ಲ (೨೮೭). ತನ್ನನ್ನು ತಾನು ಅರಿತಾಗ ತನ್ನ ಮಾಯೆ ನಶಿಸಿಹೋಗುವುದು (೩೦೬).

ಹೀಗೆ ಜೀವ ಬ್ರಹ್ಮಗಳಿಗಿರುವ ಭೇದವೆ ಈತನ ಅನುಭವಕ್ಕೆ ಬಂದಿದೆಯಷ್ಟೇ, ವೇಮನನ ಹಾಗೆ ಪರಿಪೂರ್ಣಾದ್ವೈತಾನುಭವ ಆದಂತೆ ತೋರುವುದಿಲ್ಲ. ಶಿವಪಕ್ಷಪಾತ ಮೊದಲು ಉಂಟಾದರೂ ಕೊನೆಗೆ “ಮುಗ್ಗುರಿಕಂದನಿ ಮೂಲಮೂರ್ತಿಯೊಕಂಡು” (೩೦೩) ಎಂದು ಹೇಳಿ “ತನ್ನು ತಾನೆಟೆಗಿನ ತಾನೆಪೋ ಬ್ರಹ್ಮಂಬು” (೧೭೮೨) ಎಂದ ವೇಮನನ ಹಾಗೆ ನಿಶ್ಚಯವಾಗಿ ಈತ ಹೇಳಲಾಗಲಿಲ್ಲ. ಆತನ ಹಾಗೆ ಅತೃಪ್ತಿಯಿಂದ ಮುಂದೆ ಮುಂದೆ ಇನ್ನೂ ಕಾಣಬೇಕು ಎಂಬ ಆಶೆಯಿಲ್ಲದೆ, ಕೊಂಚಮಟ್ಟಿಗೆ ಸಿಕ್ಕಿದಷ್ಟಕ್ಕೆ ಸಂತೋಷ ಪಡುವ ಸ್ವಭಾವದವನಾಗಿರುವುದೇ ಇದಕ್ಕೆ ಕಾರಣವೆಂದು ತಿಳಿಯುತ್ತಿದ್ದೇನೆ. ಪರಮ ಫಲವಾದ ಅದ್ವೈತಾವಸ್ಥೆಯು ಲಭಿಸದಿದ್ದರೂ, ಹಠ ರಾಜಯೋಗಗಳ ಅಭ್ಯಾಸದಿಂದಾಗಿ ಈತನಿಗೆ ವೇಮನನಿಗೆ ಉಂಟಾದ ಇತರ ಫಲಗಳೆಲ್ಲವು - ಸರ್ವಸಮ್ಮತ, ಬಹಿರಂಗ ದ್ವೇಷ ಮುಂತಾದವು - ಲಭಿಸಿದವು. ಮತ್ತು ಬ್ರಹ್ಮಾದ್ವೈತವನ್ನು ಸಾಧಿಸಬೇಕೆಂದು ಈತ ಪ್ರಯತ್ನಿಸಲೇ ಇಲ್ಲವೆಂದು ಹೇಳಬಹುದು:

"ಅದ್ವೈತ ಕೋಡಾಡಿ ಯಿದ್ದುದನು ಹೋಗಾಡಿ
ಉದ್ದನ ಮರದ ತುದಿಗೇರಿ, ಕೈಜಾರಿ
ಬಿದ್ದು ಸತ್ತಂತೆ ಸರ್ವಜ್ಞ." (೨೮೫)

'ಅದ್ವೈತಕ್ಕಾಗಿ ಅಲೆದು ಇದ್ದುದನ್ನು ಕಳೆದುಕೊಳ್ಳುವುದು, ಉದ್ದನೆಯ ಮರದ ತುದಿಗೇರಿ ಕೈಜಾರಿ ಬಿದ್ದು ಸತ್ತಂತೆ' ಎಂದು ತಿಳಿದು ಕೊಂಡವನೀತ. ಆದರೆ ಈತನಿಗೆ ಜೀವಾದ್ವೈತ - ಅಂದರೆ, ಪ್ರಾಣವಿರುವ ಎಲ್ಲರೂ ಒಂದೇ ಎಂಬುದು - ಸಿದ್ಧಿಸಿದೆ. 'ತಾನದ್ವೈತನಾದನಂತರ ಯಾರೊಂದಿಗೆ ಕಲಹವಾಡಬೇಕು? ಬುದ್ಧಿಯಲ್ಲಿ ತನ್ನನ್ನರಿತವನಿಗೆ ಲೋಕದ ಜಗಳಗಳಿಲ್ಲ.' (೩೩೭.) ಆದ್ದರಿಂದ ನಿಜವಾದ ಯೋಗಿಯು ವೇಷ, ತಿಂಡಿ ಇತ್ಯಾದಿಗಳ ಬಗ್ಗೆ ಚಿಂತಿಸದೆ, ಸಿಕ್ಕಿದ್ದನ್ನು ತಿಂದು ಸಿಗದಿದ್ದರೂ ಸುಮ್ಮನಿದ್ದು, ಯಾವುದೋ ಮನೆಯ ಪಡಸಾಲೆಯಲ್ಲೋ ಮರದ ಕೆಳಗೊ ಮಲಗಿದ್ದು, ಸದಾ ಶಿವಧ್ಯಾನಾನಂದವನ್ನನುಭವಿಸುತ್ತಾ, ಸಾವು ಬಂದಾಗ ಸಂತೋಷವಾಗಿ ಎದ್ದು ಹೊರಡಲು ಸಿದ್ಧವಾಗಿರಬೇಕೇ ಹೊರತು, ಸಂಸಾರದಲ್ಲಿ ಬಿದ್ದು ಹೆಂಡತಿ ಮಕ್ಕಳೊಂದಿಗಿದ್ದರೆ ಕೈಲಾಸ ಸಿಗುವುದಿಲ್ಲವೆಂದೇ ಸರ್ವಜ್ಞ ತಿಳಿದಿದ್ದನು. ವೇಮನನಂತೇ ಈತನಿಗೂ ಕಾಡುಮೇಡುಗಳಲ್ಲಿ ಬಿದ್ದಿರುವುದು ಅಸಹ್ಯ. ಮನಸಿನಲ್ಲಿ ಧ್ಯಾನಿಸುವವನಿಗೆ ಮನೆ, ಮಠ, ಕಾಡು, ಬೆಟ್ಟ ಎಲ್ಲವೂ ಒಂದೇ ಎಂದೂ, ಅದಿಲ್ಲದವನು ದೇವಳದ ಗರ್ಭಗುಡಿಯಲ್ಲಿದ್ದರೂ, ಬೆಟ್ಟ ಕಣಿವೆಯಲ್ಲಿದ್ದರೂ ಒಂದೇ ಎಂಬುದು ಈತನ ಅಭಿಪ್ರಾಯ (೨೦೭). ಈತ ತನ್ನ ಜೀವನವನ್ನು ಹೀಗೆಯೇ ಕಳೆದಿದ್ದಾನೆಂಬುದರಲ್ಲಿ ಸಂದೇಹವಿಲ್ಲ. ಆದರೆ ಅದಕ್ಕಿಂತಲೂ ಹೆಚ್ಚಿನದು ತಿಳಿಯದು.

ವೇಮನನಂತೆಯೇ ಈತನೂ ಸಾವಿರ ಸಂಖ್ಯೆಯಲ್ಲಿ ಪದ್ಯಗಳನ್ನು ಹೇಳಿದವನು. ಸಮಯ ಸಿಕ್ಕಾಗಲೆಲ್ಲ ಮಾತುಗಳಿಗೆ ಬದಲಾಗಿ ಹಾಡುಗಳನ್ನೇ ಉಪಯೋಗಿಸಿದವನು. ಈ ವಿಷಯ ಅವಿಷಯವೆನ್ನದೆ ಸಿಕ್ಕಿದರ ಮೇಲೆಲ್ಲ ಪದಕಟ್ಟಿ ಎಸೆದವನು. ಹೀಗೆ ಹಾಗೆ ಎನ್ನದೆ ಮನ ಬಂದಂತೆಲ್ಲ ಒದರುವ ಬಾಯಿಯೀತನದು ಶಬ್ದಗಳು ಸಹ್ಯವಾಗಿಲ್ಲದಿರಬಹುದು. ಅರ್ಥವ ನ್ಯಾಯವಾಗಬಹುದು. ಆದರೆ ಅಶಕ್ತ ಮಾತುಗಳು, ಸ್ಪರ್ಶಿಸದ ಭಾವಗಳು ಈತನ ಬಾಯಿಂದ ಹೊರಬೀಳವು. ವೇಮನನಂತೆ ಈತನೂ ದೇಶಸಂಚಾರ ಮಾಡಿ ತನಗೆ ತಿಳಿದ ತತ್ವ ನೀತಿ ಧರ್ಮಗಳನ್ನು ಪ್ರಾಸ್ತಾವಿಕವಾಗಿ ಜನರಿಗೆ ಬೋಧಿಸಿದವನೇ. ಆದರೆ ಆತನಿಗಿಂತಲೂ ಈತನಿಗೆ ಲೌಕಿಕ ಹೆಚ್ಚು. ತನ್ನ ಮಾತುಗಳನ್ನು ಆಲಿಸದ ಮೂರ್ಖರನ್ನಾತ ದನಗಳು, ಗುಲಾಮರು, ಕತ್ತೆಗಳು ಎಂದು ಬಯ್ದುವನು. ಈತನೂ ಅಂತಹ ಮೊಲದ ಕಾಲುಗಳವಾದದವರನ್ನು ಎದುರಿಸದೆಯಿಲ್ಲ. ಆದರೆ ಅವರೊಂದಿಗೆ ಕಲಹಿಸುವುದಕ್ಕಿಷ್ಟ ಪಡಲಿಲ್ಲ: ಫಲವಿಲ್ಲವಾದ್ದರಿಂದ. ಅಂತಹವರನ್ನು ಕುರಿತು ಈತನೇನೆಂದಿರುವನೋ ಕೇಳಿರಿ.

"ನೆಲವನ್ನು ಮುಗಿಲನ್ನು ಹೊಲಿವರುಂಟೆಂದರೆ
ಹೊಲಿವರು ಹೊಲಿವರೆನಬೇಕು ಮೂರ್ಖನಲಿ
ಕಲಹವೇ ಬೇಡ ಸರ್ವಜ್ಞ." (೯೪೦)

'ಆದ್ದರಿಂದ ಮೂರ್ಖನು ಅಂದಂತೆ ಅನ್ನಿ' ಎಂದು ಈತ ಬೋಧಿಸಿದ್ದಾನೆ (೯೪೩) ತೊಡಕಿಲ್ಲದ ಧಾರಾಳವಾದ ಶೈಲಿ, ಎಲ್ಲರಿಗು ಅರ್ಥವಾಗುವ ಭಾಷೆ, ಎಲ್ಲರು ಅನುಭವಿಸಿ ತಿಳಿದಿರುವ ಉಪಮಾನಗಳು, ಮರೆಯಿಲ್ಲದ ಮಾತುಗಳು, ನಕ್ಕುನಗಿಸುವ ಹಾಸ್ಯ - ಇವು ಈತನ ಕಾವ್ಯದ ಮುಖ್ಯಾಂಶಗಳು. ಜ್ಯೋತಿಷ್ಯ, ಹಾಸ್ಯ, ಶಕುನಶಾಸ್ತ್ರ, ಕಾಮಶಾಸ್ತ್ರ ಮುಂತಾದವುಗಳಲ್ಲಿ ಈತನಿಗೆ ವೇಮನನಿಗಿಂತಲೂ ಹೆಚ್ಚು ಪ್ರವೇಶವಿತ್ತು. ರಸವಾದ ದಲ್ಲಿಯೂ ಆತನಿಗಿದ್ದಷ್ಟು ನಂಬಿಕೆ ಮತ್ತು ಅನುಭವವಿತ್ತು. ಆಸಭ್ಯ ವಿಷಯಗಳ ಬಗ್ಗೆ ಇಬ್ಬರಿಗೂ ಎಗ್ಗಿಲ್ಲ. ಇಬ್ಬರೂ ಅರ್ಥವಾಗದ 'ಕೂಟ' ಪದ್ಯಗಳನ್ನು ಆಗಾಗ ಬರೆದವರೇ. ಹೀಗೆ, ಸ್ವಭಾವದಲ್ಲಿನ ಅಲ್ಪಭೇದದಿಂದಾಗಿ ದೃಷ್ಟಿಕೋನದಲ್ಲಿ ಇಬ್ಬರಿಗೂ ಸ್ವಲ್ಪ ಭೇದ ಕಂಡುಬಂದರೂ, ಒಟ್ಟಾರೆ ಇಬ್ಬರೂ ಪರಸ್ಪರ ಮತ್ತೊಬ್ಬರಿಂದ ರೂಪುಗೊಂಡ ಪ್ರತಿಮೆಗಳೆನ್ನಬಹುದು.

ಇದಲ್ಲದೆ ಇಬ್ಬರೂ ಪರಸ್ಪರ ಮಾತಾಡಿಕೊಂಡು ಬರೆದಂತಿರುವ ಪದ್ಯಗಳೂ ಕೆಲವಿವೆ. ನೋಡಿರಿ-

೧. "ಕಟ್ಟಲೂ ಬಿಡಲು ಶಿವ ಬಟ್ಟಲವ ಕದ್ದನೇ?
ಕಟ್ಟಲೂ ಬೇಡ, ಬಿಡಬೇಡ, ಕಣ್ಮನವ ಕಟ್ಟಿದರೆ ಸಾಕು ಸರ್ವಜ್ಞ" (೧೪೮)

* "ಆ. ಬಂದೆತಾಳ್ಳುದೆಚ್ಚಿ ಬಂಧಿಂಚಿ ಕಟ್ಟಂಗ
ಲಿಂಗಡೇಮಿ ದೊಂಗಲಿಂಚಿನಾಡೊ
ಆತ್ಮ ಲಿಂಗಮುನಕು ನರ್ಚಿಂಪನೇರ ರೋ?" (೨೬೮೫)

೨. "ಒಡಲ ದಂಡಿಸಿ ಮುಕ್ತಿ ಪಡೆವೆನೆಂಬುವ ಹೆಡ್ಡ
ಬಡಿಗೆಯಲಿ ಹುತ್ತ ಹೊಡಿಯಲಡಗಿಹ ಸರ್ಪ,
ಮಡಿಯುವದೆ ಹೇಳು ಸರ್ವಜ್ಞ." (೫೧೦)

"ಆ. ಒಡಲು ಬಡಲಜೇಸಿ ಯೋಗುಲಮನುವಾರು
ಮನಸು ಕಲ್ಮಷಂಬು ಮಾನ್ಪಲೇರು
ಪುಟ್ಟಮೀದ ಗೊಟ್ಟ ಭುಜಗಂಬು ಚಚ್ಚುನಾ? ..." (೮೦೬)

೩. "ಕೊಟ್ಟ ಬಹ ಕಾಲದಲಿ ಕೊಟ್ಟಣಲಿ ಕರಿಯದೇ
ಹುಟ್ಟಿಯ ಒಳಗೆ ಜೇನಿಕ್ಕಿ, ಪರರಿಂಗೆ ಕೊಟ್ಟು ಹೋದಂತೆ ಸರ್ವಜ್ಞ," (೯೦೫)
"ಆ. ಧನಮು ಗೊಡಬೆಟ್ಟಿ ಧರ್ಮಂಬು ಸೇಯಕ
ತಾನು ಲೆಸ್ಸದಿನಕ ದಾಚು ಲೋಭಿ
ತೇನೆ ನೀಗಗೂರ್ಚಿ ತೆರುವರಿಕೆಯ್ಯದಾ" (೨೧೦೭)

೪. "ಕಲ್ಲುಪ್ಪು ಕರ್ಪುರವು ಸೊಲ್ಲೆರಡು ಧಾತೊಂದು
ಖುಲ್ಲನೊಳ್ಳಿದನ ರೂಪೊಂದು, ಗುಣದೊಳಗೆ,
ಎಲ್ಲ ಅಂತರವು ಸರ್ವಜ್ಞ" (೭೨೭)
"ಆ. ಉಪ್ಪು ಕಪ್ಪುರಂಬು ನೊಕ್ಕಪೋಲಿಕನುಂಡು
ಚೂಡ ಜೂಡ ರುಜಾಲ ಜಾಡವೇರು
ಪುರಷಲಂದು ಪುಣ್ಯ ಪುರುಷುಲು ವೇಱಯಾ..." (೫೩೪)

ಇಂಥವು ಇನ್ನೂ ಇವೆ. ಈ ಹೋಲಿಕೆಗಳು ಕೇವಲ ಆಕಸ್ಮಿಕವೋ ಇಲ್ಲವೆ ಒಬ್ಬರನ್ನು ಮತ್ತೊಬ್ಬರು ನೋಡಿ ಬರೆಯಲ್ಪಟ್ಟಿರುವವೋ ಎಂಬ ಚರ್ಚೆಗೆ ಕೈಹಾಕಿ ಫಲವಿಲ್ಲ. ಅಸಲು ಇಬ್ಬರ ಕಾಲವೇ ಸ್ಪಷ್ಟವಾಗಿ ನಿರ್ಣಯವಾಗಿಲ್ಲ. ಆದ್ದರಿಂದ ಇಬ್ಬರಲ್ಲಿ ಯಾರು ಮೊದಲನೆಯವರೋ ಹೇಳಲಾರೆವು. ಉತ್ತಂಗಿ ಚೆನ್ನಪ್ಪನವರು ಭಾವಿಸಿರುವ ಹಾಗೆ ಸರ್ವಜ್ಞ ಹದಿನಾರನೇ ಶತಮಾನದವನಾಗಿಯೂ, ವೇಮನ ನಾವು ತಿಳಿದಿರುವ ಹಾಗೆ ಹದಿನೇಳನೇ ಶತಕದ ಕೊನೆಯ ಭಾಗದವನೇ ಆಗಿದ್ದರೆ ವೇಮನನೇ ಈತನನ್ನು ಅನುಸರಿಸಿದ್ದಾನೆ ಎನ್ನಬಹುದು. ಆದರೆ ವೇಮನ ಕನ್ನಡನಾಡಿನ ಸಮೀಪವಿದ್ದವನಾದರೂ, ತೆಲುಗು ಮತ್ತು ತಮಿಳುನಾಡುಗಳಲ್ಲಿ ಅಲೆದಂತೆ ಕಂಡುಬರುತ್ತದೆಯೇ ಹೊರತು,ಕನ್ನಡಿಗರ ಸಹವಾಸ ಲಭಿಸಿತ್ತೆಂದು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ತೆಲುಗುನಾಡಿನಲ್ಲಿ ಸರ್ವಜ್ಞನ ಪದಗಳಿಗೆ ವ್ಯಾಪ್ತಿ ಕಂಡುಬರುವುದಿಲ್ಲವಾದರೂ, ಈತ ಇಲ್ಲಿ ಕೊಂಚ ಸಂಚರಿಸಿದಂತಿದೆ. ತೆಲುಗಿನವರನ್ನು ಈತ ಬಯ್ದು ಬರೆದ ಪದ್ಯಗಳು ಇವೆ. (೧೭೫೪-೫೫) ಶ್ರೀರಾಮನು ಲಂಕೆಯನ್ನು ಗೆದ್ದ ನಂತರ ಲಂಕೆಯಲ್ಲಿನ ಸ್ತ್ರೀಯರಿಗೂ ಕಿಷ್ಕಿಂದಾ ಪಟ್ಟಣದ ಪುರುಷರಿಗೂ ನಡೆದ ಸಂಘ ಸಂಸ್ಕಾರ ವಿವಾಹಗಳ ಫಲವೆ ತೆಲುಗಿನವರೆಂಬುದು ಈತನ ಮನುಷ್ಯ ಶಾಸ್ತ್ರ ಸಿದ್ಧಾಂತ (೧೭೫೫) ! ಮತ್ತು, ಕನ್ನಡನಾಡಿಗೆ ವಲಸೆ ಬಂದು ನೆಲೆಸಿರುವ ಆಂಧ್ರರು ಅನೇಕರಿದ್ದಾರೆ. ಮುಲಕನಾಡು ಬ್ರಹ್ಮಣರು, ಕೋಮಟಿಗರು, ಕ್ಷೌರಿಕರು, ಭಟ್ಟರಾಜರು ಮೊದಲಾದ ತೆಲುಗರನೇಕರು ಮೈಸೂರು ಸೀಮೆಯಲ್ಲಿ ಇಂದಿಗೂ ಇದ್ದಾರೆ. ಆದರೆ ಕನ್ನಡಿಗರು ಆಂಧ್ರದಲ್ಲಿ ಬಹಳ ಕಡಿಮೆ. ಹೀಗಾಗಿಯೇ ವೇಮನ ಪದ್ಯಗಳಿಗೆ ಕನ್ನಡ ಸೀಮೆಯಲ್ಲಿ ಕೊಂಚ ಮಟ್ಟಿಗೆ ಪ್ರಚಾರವಿದೆ. ಇದರಿಂದ ವೇಮನನ ವಾಸನೆಯೇ ಸರ್ವಜ್ಞನಿಗೆ ತಗುಲಿರಬಹುದೇ ಎಂಬ ಸಂದೇಹ ಕೂಡ ಉಂಟಾಗಬಹುದು. ಆದರೆ ಇದಕ್ಕಿಂತಲೂ ಹೆಚ್ಚು ದೂರ ಈ ವಿಷಯವನ್ನು ನಿರ್ಧರಿಸುವುದು ಸಾಹಸದ ಕೆಲಸ ಮತ್ತು ಈ ಇಬ್ಬರೂ ಕೂಡ ಪರಸ್ಪರ ಯಾರಿಗೆ ಯಾರು ಬೇಕಾದರೂ ಗುರುವಾಗಬಹುದಾದ ಸಾಮರ್ಥ್ಯವುಳ್ಳವರೆಂಬುದರಲ್ಲಿ ಸಂದೇಹವೇ ಇಲ್ಲ.

**ತಿರುವಳ್ಳುವರ್**

ನಮ್ಮ ಮತ್ತೊಂದು ನೆರೆಮನೆಯವರಾದಂತಹ ತಮಿಳರಲ್ಲಿ ಬಹಳ ಪ್ರಸಿದ್ಧವಾಗಿರುವ ತಿರುವಳ್ಳುವರ್ ನಾಯನ್ಮಾರರ 'ತಿರುಕ್ಕುರಳ್' ಎಂಬ ಕೃತಿಯೊಂದಿಗೆ ವೇಮನ ಪದ್ಯಗಳನ್ನು

ಇಟ್ಟು ನೋಡಬೇಕೆನ್ನುವುದು ಪ್ರಕೃತ ಉಪನ್ಯಾಸ ನಿಬಂಧನೆಗಳಲ್ಲೊಂದು. ಆದರೆ ಈ ಇಬ್ಬರಿಗೂ ಹೋಲಿಕೆ ಬಹಳ ಕಡಿಮೆ. ನನಗೆ ದ್ರಾವಿಡ (ತಮಿಳು) ಭಾಷಾಜ್ಞಾನ ಅದಕ್ಕಿಂತಲೂ ಕಡಿಮೆ. ಆದರೂ ತಿಳಿದಮಟ್ಟಿಗೆ ಆತನನ್ನು ಕುರಿತು ಸ್ವಲ್ಪ ಮಟ್ಟಿಗೆ ಸಂಕ್ಷಿಪ್ತವಾಗಿ ಹೇಳಬಯಸುತ್ತೇನೆ.

ತಿರುವಳ್ಳುವರ್ ಬಹಳ ಪ್ರಾಚೀನ ವ್ಯಕ್ತಿ. ಈತನ ಕಾಲವನ್ನು ಕ್ರಿ.ಶ.ದ ಮೊದಲನೆಯ ಶತಮಾನವೆಂದು ಅನೇಕರು ತಿಳಿದಿದ್ದಾರೆ. ಮದರಾಸಿನ ಮೈಲಾಪುರದಲ್ಲಿದ್ದವನು. ಭಗವಂತನೆಂಬ ಬ್ರಾಹ್ಮಣನಿಗೂ 'ಆದಿ' ಎಂಬ ಚಂಡಾಲ ಸ್ತ್ರೀಗೂ ಜನಿಸಿದವನೆಂದು ಕಥೆ.* ವಳ್ಳುವರ್ ಎನ್ನುವವರು ಒಂದು ಗುಂಪಿನ ಮಾದಿಗರೇ ಆಗಿರುವುದರಿಂದ ಈತನ ಹೆಸರ ಮೇಲಿನ ಕಥೆಯಲ್ಲಿ ಸ್ವಲ್ಪ ಸತ್ಯವಿದೆಯೆಂದು ಸೂಚನೆಯಿದೆ. ಈತನ ನಿಜವಾದ ಹೆಸರೇನೋ ಗೊತ್ತಿಲ್ಲ. ನೇಯ್ಗೆ ವೃತ್ತಿ ಮಾಡುತ್ತಿದ್ದವನು. ಈತನ ಹೆಂಡತಿ ವಾಸುಕಿ. ಇವರಿಬ್ಬರ ದಾಂಪತ್ಯ ಅಪೂರ್ವವಾಗಿ ಬಹಳ ಸೌಖ್ಯಾವಹವಾಗಿತ್ತಂತೆ.

ಈತನು ಬರೆದ ಗ್ರಂಥ 'ಕುರಳ್'. ಕುರಳ್ ಎಂದರೆ ಒಂದು ವಿಧವಾದ ಚಿಕ್ಕ ಛಂದಸ್ಸು; ಅಟವೆಲದಿಯಲ್ಲಿ ಹೆಚ್ಚು ಕಡಿಮೆ ಅರ್ಧದಷ್ಟು. ಈತನ ಪದ್ಯಗಳೆಲ್ಲವು ಈ ಛಂದಸ್ಸಿನಲ್ಲಿಯೇ ಇವೆ. ಇದು ಧರ್ಮ, ಅರ್ಥ, ಕಾಮ ಎಂಬ ಮೂರು ಪುರುಷಾರ್ಥಗಳನ್ನು ಕುರಿತು ಮೂರು ಭಾಗಗಳಲ್ಲಿ ಬರೆಯಲ್ಪಟ್ಟಿರುವ ಉಪದೇಶ ಶಾಸ್ತ್ರ. ತಾನು ಬ್ರಾಹ್ಮಣನಲ್ಲದಿರುವುದರಿಂದ ಅಧಿಕಾರವಿಲ್ಲವೆಂದು ಈತ ಮೋಕ್ಷವನ್ನು ಕುರಿತು ಬರೆಯಲಿಲ್ಲವೆಂದೂ ಒಂದು ಕಥೆ. ಆದರೆ ಉಪೋದ್ಘಾತದಲ್ಲಿನ ಪದ್ಯಗಳಲ್ಲಿಯೂ, ಸನ್ಯಾಸಧರ್ಮ ಪ್ರಕರಣದಲ್ಲಿಯೂ ಭಗವಂತನನ್ನು ಕುರಿತು, ಮೋಕ್ಷೋಪಾಯಗಳನ್ನು ಕುರಿತು ಸಂಗ್ರಹವಾಗಿಯಾದರೂ ಬರೆದೇ ಇದ್ದನಾದ್ದರಿಂದ ಆ ಕಥೆಯನ್ನು ನಾವು ನಂಬಬೇಕಾಗಿಲ್ಲ. ಈತ ಸುಖಿಯಾದ ಸಂಸಾರಿಯಾಗಿದ್ದು, ಗೃಹಸ್ಥ ಧರ್ಮಗಳಾದ ಅತಿಥಿ ಪೂಜೆ ಮುಂತಾದುವುಗಳನ್ನು ಮಾಡುವ ಕರ್ಮನಿಷ್ಠನಾಗಿ, ಸತ್ಯ, ನೀತಿ ಮೊದಲಾದ ಸಾಮಾನ್ಯ ಲೌಕಿಕ ಧರ್ಮಗಳನ್ನು ಅತ್ಯಂತ ಶ್ರದ್ಧೆಯಿಂದ ಪಾಲಿಸುತ್ತಾ, ದೃಢನಾದ ದೈವಭಕ್ತಿಯುಳ್ಳವನಾಗಿದ್ದನೇ ಹೊರತು ವೇದಾಂತ ವಿಷಯಗಳನ್ನು ಹೆಚ್ಚಾಗಿ ಪರಿಶೀಲಿಸಿದವನಲ್ಲದಿರಬಹುದು. ಈತ ಮೇಲಿನ ಧರ್ಮಾರ್ಥ ಕಾಮಗಳಲ್ಲಿ ಪ್ರತಿಯೊಂದನ್ನೂ ಪ್ರತ್ಯೇಕವಾಗಿ ವಿಭಾಗಿಸಿ ಪ್ರತಿಯೊಂದು ವಿಷಯಕ್ಕೂ ಹತ್ತು ಪದ್ಯಗಳ ಪ್ರಕಾರ ಒಟ್ಟು ೧೩೩೦ ಪದ್ಯಗಳನ್ನು ರಚಿಸಿದ್ದಾನೆ. ಕೃತಿಕಾರನ ವಿಷಯ ವಿಭಾಗ ಶಕ್ತಿಯನ್ನು ಸೂಕ್ಷ್ಮದೃಷ್ಟಿಯನ್ನು ಇದರಲ್ಲಿ ಕಾಣಬಹುದು.

ಇದಕ್ಕೆ ಜೊತೆಯಾಗಿ ಒಳ್ಳೆಯ ಕವಿತಾಶಕ್ತಿಯೂ ಇದೆ. ಅಂದರೆ ವೇಮನನಂಥ ಆಶುಧಾರೆಯಲ್ಲ. ತಿಕ್ಕನನಂತೆ ತಾಳ್ಮೆಯಿಂದ ಕಡೆದು ರೂಪಿಸಿದ ರಚನೆ ಈತನದು. ಭಾವದಲ್ಲಿಯೂ ಆತನ ಉದ್ರೇಕ ಈತನಿಗಿಲ್ಲ. ಮಾರ್ದವತೆ, ತಾಳ್ಮೆ, ಸಹನೆ ಇವುಗಳನ್ನಿಲ್ಲಿ ಕಾಣಬಹುದು. ಹೀಗಾಗಿ ವೇಮನನ ಪದ್ಯಗಳ ಹಾಗೆ ಒಂದು ಸಲ ಕೇಳಿದೊಡನೆ ಇದು ಬಾಣದ ಹಾಗೆ ಎದೆಯಲ್ಲಿ ನಾಟದು. ಸೂತ್ರದ ಹಾಗೆ ಹಲವು ಸಲ ಮನನಮಾಡಬೇಕು.

ಹಿಂದೂದೇಶದ ಎಲ್ಲ ಧರ್ಮಶಾಸ್ತ್ರ ಗ್ರಂಥಗಳಲ್ಲಿಯೂ ಕಂಡುಬರುವ ಅಹಿಂಸೆ, ಸತ್ಯ, ವೈರಾಗ್ಯ, ಶಾಂತಿ, ದಾಂತಿ, ಆತಿಥ್ಯ, ರಾಜಧರ್ಮ ಮುಂತಾದವುಗಳನ್ನು ಕುರಿತು ಎಲ್ಲರೂ ಆಚರಿಸಬಹುದಾದ ಸಾಮಾನ್ಯ ನೀತಿಗಳನ್ನು ಈತ ಬರೆದನೇ ಹೊರತು ಇದರಲ್ಲಿ ಹೊಸದೇನೂ ಇಲ್ಲ. ಆದರೆ ಅವುಗಳನ್ನೀತ ಸಂಗ್ರಹಿಸಿ, ಸರಿಯಾದ ಕ್ರಮದಲ್ಲಿ ಇಟ್ಟು, ಚಿತ್ರಕಾರ ಬೊಂಬೆಯನ್ನು ಮಾಡಿದ ಹಾಗೆ, ಸುತ್ತಲೂ ನಿಧಾನವಾಗಿ ಪರಿಶೀಲಿಸಿ, ಏರುಪೇರುಗಳನ್ನು ತಿದ್ದಿ, ತೀಡಿ, ಸಾವಧಾನವಾಗಿ ಕಾವ್ಯದ ಮೆರುಗನ್ನು ಕೊಟ್ಟು, ಪರಿಪೂರ್ಣವಾಗಿ ಪ್ರಕಟ ಪಡಿಸಿದವನು. ಆದರೆ, ಎಲ್ಲ ಪ್ರಾಚೀನರ ಹಾಗೆ ಮೇಲಿನ ವಿಷಯಗಳನ್ನು ಮಿತಿಮೀರಿ ಸಣ್ಣಸಣ್ಣದಾಗಿ ವಿಭಜಿಸತೊಡಗಿದ್ದರಿಂದ, ಪ್ರತಿಯೊಂದು ವಿಷಯದ ಮೇಲೆಯು ಹತ್ತು ಪದ್ಯಗಳನ್ನು ತಪ್ಪದೆ ಬರೆಯಬೇಕೆಂಬ ನಿಯಮದಿಂದಾಗಿಯೂ, ಅಲ್ಲಲ್ಲಿ ಕಾವ್ಯಶಿಲ್ಪ ತೆಳುವಾಗಿ ಸಪ್ಪೆಯಾಗಿರುವುದು ಕಂಡುಬರುತ್ತದೆ.

ವೇಮನ ವಿರಕ್ತ ಕವಿ. ಈತ ಸಂಸಾರಿ ಕವಿ. ಆದ್ದರಿಂದಲೇ ಆತ ಚಿಕ್ಕ ಮಕ್ಕಳನ್ನು, 'ಹೊಲಸು ಮುದ್ದೆ'ಗಳೆಂದು 'ಮುದ್ದೆಯನ್ನು ಸೊಂಟದಲ್ಲಿಟ್ಟುಕೊಂಡು ಮುದ್ದಾಡುವುದೇತಕ್ಕೊ?' (ವೇ.ಜ್ಞಾ ೧೧೧೨) ಎಂದು ಅಸಹ್ಯ ಪಟ್ಟುಕೊಂಡು ಮುಖವನ್ನು ಮೂಲೆಗೆ ತಿರುಗಿಸಿಕೊಂಡರೆ, ಈತ -

ಪುಟ್ಟ ಮಕ್ಕಳು ತಮ್ಮ ಕಿರುಬೆರಳುಗಳಿಂದ ಚೆಲ್ಲಾಡಿದ
ಕೂಳು ಅಮೃತಕ್ಕಿಂತಲೂ ಸವಿಯಾದುದಲ್ಲವೆ

(ಕುರುಳ್, ಅರತ್ತುಪಾಲ್, ಪುದಲ್ವರೈಪ್ಪೆರುದಲ್೪)

ಎಂದಿದ್ದಾನೆ. ಮೇಮನ ಸ್ತ್ರೀಯನ್ನು ತಿರಸ್ಕರಿಸಿ ವಿಧಿಯಿಲ್ಲದೆ ಅದಕ್ಕೆ ಶರಣಾದಂತೆ ಕಂಡುಬರುತ್ತದೆ; ತಿರುವಳ್ಳುವರು ಸ್ತ್ರೀಯ ಬಗ್ಗೆ ಬಹಳ ಗೌರವ ಅಭಿಮಾನಗಳನ್ನಿಟ್ಟುಕೊಂಡಿದ್ದವರು. "ತಮಗೆ ಪ್ರಿಯರಾದವರ ಅಪ್ಪುಗೆಗಿಂತಲೂ ತಾವರೆ ಕಣ್ಣಿನ ದೇವರ ಲೋಕದಲ್ಲಿ ಇನ್ನೇನು ಸುಖವಿದೆ."? ಎಂಬುದು ಈತನ ಪ್ರಶ್ನೆ (ಕುರಲ್, ಕಾಮತ್ತುಪಾಲ್, ಪುಣರ್ಪಿ ಮಹಿಳ್ದಲ್ ೩) ಈ ಕಾರಣದಿಂದಾಗಿಯೇ ಈತನನ್ನು ತಿರಸ್ಕರಿಸಿದವರಾರೂ ಇಲ್ಲದೆ ಹೋಗಿರುವುದೊಂದು ಕಡೆಯಿದ್ದರೆ ಅನೇಕ ಪಂಡಿತರು ಇದನ್ನು ಹೊಗಳಿ ವ್ಯಾಖ್ಯಾನಗಳನ್ನೂ ಬರೆದರು. ಇದು ಪ್ರಮಾಣ ಗ್ರಂಥವಾಯಿತು. 'ಉತ್ತರವೇದ' ವೆಂದೂ 'ದೈವನೂಲೆಂ'ದೂ ಇದಕ್ಕೆ ಹೆಸರುಗಳು ಬಂದವು. ಸುಮತಿಶತಕದ ಕರ್ತೃವಾದರೂ 'ಶ್ರೀರಾಮನ ದಯೆಯಿಂದ' ಎಂದು ಉಪಕ್ರಮಿಸಿದ್ದರಿಂದ ಶ್ರೀರಾಮ ದ್ವೇಷಿಗಳ್ಯಾರಾದರು ಅದನ್ನು ತಿರಸ್ಕರಿಸಬಹುದಾದರೂ, ಈತ, 'ನಾಮಲಿಂಗಾನು ಶಾಸನ'ವನ್ನು ಬರೆದ ಯವರನ ಹಾಗೆ, ಯಾವೊಬ್ಬ ದೇವರನ್ನು ಹೆಸರಿಟ್ಟು ಕರೆಯದೆ, 'ಆದಿಭಗವಂತನಿಗೆ' ನಮಸ್ಕರಿಸಿ ಗ್ರಂಥವನ್ನುಪಕರಿ, ಅಲ್ಲಿ ಯಾವ ಮತ ಪಕ್ಷಪಾತವನ್ನು ತೋರದೆ, ಸರ್ವಮತಗಳಲ್ಲೂ ಸಾಧಾರಣವಾಗಿರುವಂತಹ ಶಾಶ್ವತ ನೀತಿಗಳನ್ನು ಕುರಿತು ಮಾತ್ರ ಬರೆದಿದ್ದರಿಂದ, ಎಲ್ಲರಿಗೂ ಬೇಕಾದವನಾದನು. ಆದ್ದರಿಂದಲೇ ಈ ಕೃತಿಯನ್ನು ೧೫೦ ವರ್ಷಗಳ ಹಿಂದೆಯೇ 'ಲ್ಯಾಟಿನ್'

ಭಾಷೆಗೆ, ನಂತರ ಜರ್ಮನ್, ಫ್ರೆಂಚ್, ಇಂಗ್ಲೀಷ್ ಭಾಷೆಗಳಿಗೆ ಪಾಶ್ಚಾತ್ಯರು ಪರಿವರ್ತಿಸಿಕೊಂಡರಂತೆ.[೭] ಇಂದಿಗೆ (೧೯೨೫) ನಲವತ್ತು ವರ್ಷಗಳಷ್ಟು ಹಿಂದೆಯೇ 'ತ್ರಿವರ್ಗ ದೀಪಿಕ' ಎಂಬ ಹೆಸರಿನಲ್ಲಿ ಕನುಪರ್ತಿ ವೆಂಕಟರಾಮ ಶ್ರೀ ವಿದ್ಯಾನಂದರೆಂಬುವರು ಇದನ್ನು ತೆಲುಗಿನಲ್ಲಿ ಮೊದಲ ಎರಡು ಧರ್ಮಾರ್ಥ ಕಾಂಡಗಳನ್ನು ಪರಿವರ್ತಿಸಿ ಪ್ರಕಟಿಸಿದರು. ಆಂಧ್ರರು ಅದನ್ನು ಹೆಚ್ಚು ಗಮನಿಸಿದಂತೆ ಕಂಡುಬರುವುದಿಲ್ಲ ಸಹಜವೇ. ಏಕೆಂದರೆ, ಆಂಧ್ರೀಕರಿಸಿದವರಿಗೇ ಅದು ಇತರರಿಗರ್ಥವಾಗದೆಂಬ ಗಟ್ಟಿ ನಂಬಿಕೆಯುಂಟಾದ್ದರಿಂದ, ಅವರೇ ಅದಕ್ಕೆ ವ್ಯಾಖ್ಯೆ, ತಾತ್ಪರ್ಯ ಬರೆಯಬೇಕಾಯಿತು. ಹೀಗೆ ವ್ಯಾಖ್ಯೆಯೊಂದಿಗೆ ಆಂಧ್ರೀಕರಣವನ್ನೂ ಅದರೊಂದಿಗೆ ಮೂಲವನ್ನು ಅರ್ಥಮಾಡಿಕೊಳ್ಳುವವರೆಗೆ ನಿಂತಿರುವಂತಹ ಕಾವ್ಯವನ್ನು ರಚಿಸುವಂತಹವನು ಈ ಪ್ರಪಂಚದಲ್ಲಿ ಇನ್ನೂ ಹುಟ್ಟಿಲ್ಲ. ಇದಲ್ಲದೆ ಶ್ರೀ ಗರಿಮಳ್ಳ ಸತ್ಯನಾರಾಯಣರೂ ತೆಲುಗಿಗೆ ಅನುವಾದಿಸಿದ್ದಾರಂತೆಯಾದರೂ ಇನ್ನೂ ಅದು ಬರಹದಲ್ಲೇ ಇದ್ದಂತಿದೆ? ಇದರ ಒಳ್ಳೆಯ ಆಂಧ್ರೀಕರಣವೊಂದನ್ನು ತೆಲುಗು ಭಾಷೆಗೆ ಸದ್ಯದಲ್ಲೇ ತಂದು ಕೊಳ್ಳುವ ಭಾರ ನಮ್ಮ ಮೇಲಿದೆ.

ಸಾಮಾನ್ಯವಾದ ನೀತಿಗಳ ವಿಷಯದ ಹೊರತು ವೇಮನನಿಗೂ ಈತನಿಗೂ ಹೋಲಿಕೆಗಳು ಸಾಲವು. ಆತ ದುರ್ನೀತಿಯನ್ನು ಹೆಚ್ಚಾಗಿ ಖಂಡಿಸಿದವನು. ಈತ ನೀತಿಯೆಂಥದೆಂದು ಹೇಳಿದವನು; ಆತನದು ವಿರಕ್ತಿ; ಈತನದು ರಕ್ತಿ. ಹಾಗಲ್ಲದೆ ವೇಮನ ಅನ್ವಯ ಮಾರ್ಗದಲ್ಲಿ ಹೇಳಿದ್ದರೆ ಈತನ ಹಾಗೇ ಹೇಳುತ್ತಿದ್ದ. ಆದರೂ ಈ ಹೋಲಿಕೆ ಇಬ್ಬರು ಮನುಷ್ಯರಿಗೆ ಮನುಷ್ಯತ್ವದನ್ವಯ ಹೋಲಿಕೆಯಿದ್ದಂತೆ. ಅಪಕಾರ ಮಾಡಿದವನಿಗೂ ಉಪಕಾರ ಮಾಡುವುದೇ ಒಳ್ಳೆಯದು. ಮನೆಗೆ ಬಂದ ಅತಿಥಿಯನ್ನು ಉಪಚರಿಸಬೇಕು; ಅಸತ್ಯವನ್ನಾಡ ಬಾರದು - ಇತ್ಯಾದಿ ವಿಷಯಗಳಲ್ಲಿ ಯಾವ ನೀತಿ ಶಾಸ್ತ್ರಕಾರನೂ ಕೂಡ ಬೇರೆ ವಿಧವಾಗಿ ಹೇಳನು. ಅದ್ದರಿಂದ ಇಂಥದರಲ್ಲಿ ಇಬ್ಬರನ್ನೂ ಹೋಲಿಸಿ ನೋಡುವುದಕ್ಕಿಂತಲೂ ತಿರುವಳ್ಳುವರ ಕೆಲವು ಪದ್ಯಗಳನ್ನು ಯಥಾಶಕ್ತಿ ಅನುವಾದಿಸಿ ಹೇಳಿ ಈತನ ವಿಷಯವನ್ನು ಸಾಕುಮಾಡುತ್ತೇನೆ.

**ನಿಷ್ಕಲ್ಮಷತ್ವ**

"ಮನದಲ್ಲಿ ನಿರ್ಮಲನಾದರೆ ಅದೇ ಧರ್ಮ
ಮತ್ತೆಲ್ಲವೂ ಬರಿಯ ಆಡಂಬರ"

(ಅಱತ್ತುಪಾಲ್, ಅಱನ್‌ವಲಿಯುರುತ್ತಲ್, ಪ.೩)

**ಆತಿಥ್ಯ**

"ಅತಿಥಿಗಳನ್ನುಪಚರಿಸಿ, ಉಣಬಡಿಸಿ ಮಿಕ್ಕುದನ್ನು ತಾನುಣ್ಣುವವನ
ಹೊಲಗಳಲ್ಲಿ ಬೀಜಗಳನ್ನು ಬಿತ್ತಲೇಕೆ"

(ಅಱತ್ತುಪಾಲ್, ವಿರುಂದೊಂಬಲ್, ಪ.೫)

**ಶಾಂತಿ**

"ತಾಳಿಕೊಳ್ಳಬೇಕು ಕೆಟ್ಟನಡವಳಿಕೆಯನ್ನು ಎಂದಿಗೂ
ಅದನ್ನು ಮರೆತು ಬಿಡುವುದು ಅದಕ್ಕಿಂತಲೂ ಒಳ್ಳೆಯದು"
(ಅಱ. ಪೊರೈಯುಡೈಮೈ. ಪ. ೬)

**ಸ್ತ್ರೀವರ್ಣನೆ**

"ಕಂಡು ಕೇಳಿ ಉಂಡು ಆಘ್ರಾಣಿಸಿ ಸ್ಪರ್ಶಿಸಿ ಪಡೆಯಬಹುದಾದ
ಐದಿಂದ್ರಿಯಗಳ ಸುಖವೆಲ್ಲವೂ ತುಂಬಿದೆ
ಮಿನುಗುವ ಬಳೆಗಳ ಈ ಚೆಲುವೆಯಲ್ಲಿ"
(ಕಾಮತ್ತುಪಾಲ್, ಪುಣರ್ಚ್ಚಿ ಮಹಿಳ್ದಲ್, ಪ.೧)

## ಟಿಪ್ಪಣಿಗಳು

೧. ಈ ಪದ್ಯ ವೇಮನ ಪದ್ಯಗಳಲ್ಲಿಯೂ ಇದೆ, ೩೫೯
೨. ನೋ. ಧಾರವಾಡ ಉತ್ತಂಗಿ ಚೆನ್ನಪ್ಪನವರು ಪ್ರಕಟಿಸಿರುವ 'ಸರ್ವಜ್ಞ ಪದಗಳು' ಪೀಠಿಕಾ ಪ್ರಕರಣ.
೩. ನೋ. ಪ. ೨ - ೧೪
೪. ನೋ. ಸರ್ವಜ್ಞ, ಪೀಠಿಕೆ, ಪು. ೩೯
೫. ನೋ. ಲೇಸು ಪದ್ಧತಿ, ಅನ್ನಪದ್ಧತಿ.
೬. ನೋ. ರಾಜನೀತಿ ಪದ್ಧತಿ.
೭. 'ಕುರಳ್' ತೆಲುಗಿನ 'ತ್ರಿವರ್ಗ ದೀಪಿಕ'ದ ಪೀಠಿಕೆಗಳಲ್ಲಿ, ಅತ್ಯದ್ಭುತವಾದ ಕಥೆಗಳು ಈತನ ಬಗ್ಗೆ ಇವೆಯಾದರೂ ಅದು ಶುದ್ಧಪುರಾಣ.
೮. ನೋ. V.V.S Iyer's preface
೯. Vide, **Maxims of Thiruvallurar** by V.V.S.Iyer

# ನಮ್ಮ ಲೇಖಕರು

೧. ಪ್ರೊ. ಎಸ್. ಎಸ್. ಹಿರೇಮಠ, ಕನ್ನಡ ಪ್ರಾಧ್ಯಾಪಕರು, ಎಸ್.ವಿ.ಡಿ. ಪ್ರಥಮದರ್ಜೆ ಕಾಲೇಜು, ಹರಪನಹಳ್ಳಿ

೨. ಪ್ರೊ. ವೆಂಕಟರಾಜ ಪುಣಿಂಚತ್ತಾಯ, ಬೆಳ್ಳೂರು ಮನೆ ಮತ್ತು ಅಂಚೆ, ಮುಳ್ಳೆರಿಯಾ, ಕಾಸರಗೋಡು ಜಿ., ಕೇರಳ

೩. ಡಾ. ಮೋಹನ ಕುಂಟಾರ್, ಪ್ರವಾಚಕರು, ಭಾಷಾಂತರ ವಿಭಾಗ, ಕನ್ನಡ ವಿಶ್ವವಿದ್ಯಾಲಯ-ಹಂಪಿ., ವಿದ್ಯಾರಣ್ಯ

೪. ಡಾ. ಬಿ.ಪಿ.ರಾಮಯ್ಯ, ಕನ್ನಡ ಪ್ರಾಧ್ಯಾಪಕರು, ಎ.ವಿ.ಬಾಳಿಗ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಕುಮಟ-೫೮೩ ೩೪೩

೫. ಡಾ. ಸಾಂಬಮೂರ್ತಿ, ಉಪನ್ಯಾಸಕರು ಮತ್ತು ಮುಖ್ಯಸ್ಥರು, ಕನ್ನಡ ಭಾಷಾಭಿವೃದ್ಧಿ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ., ವಿದ್ಯಾರಣ್ಯ

೬. ಡಾ. ಮಾಧವ ಪೆರಾಜೆ, ಉಪನ್ಯಾಸಕರು, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ., ವಿದ್ಯಾರಣ್ಯ

೭. ಡಾ.ಎ.ಸುಬ್ಬಣ್ಣ ರೈ, ಪ್ರವಾಚಕರು ಮತ್ತು ಮುಖ್ಯಸ್ಥರು ,.ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ., ವಿದ್ಯಾರಣ್ಯ

೮. ಶ್ರೀ ಸಿ. ವೆಂಕಟೇಶ, ಉಪನ್ಯಾಸರು, ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ., ವಿದ್ಯಾರಣ್ಯ

ದ್ರಾವಿಡ ಅಧ್ಯಯನ ವಿಭಾಗವು ಒಂದೇ ಮೂಲದಿಂದ ಹೊರಟು ಭಿನ್ನ ಭಿನ್ನ ನೆಲೆಗಳನ್ನು ಸ್ಥಾಪಿಸಿಕೊಂಡರೂ ಮತ್ತೆ ಏಕಮುಖಿಯಾಗುವ ಆಂತರಿಕ ತುಡಿತ ಮತ್ತು ಸಾಂಸ್ಕೃತಿಕ ಆಶಯಗಳನ್ನು ಈ ಪರಿಕಲ್ಪನೆಗಳ ಮೂಲಕ ಜಿಜ್ಞಾಸೆಗೆ ಒಳಪಡಿಸುವ ಕಾರ್ಯವನ್ನು ದ್ರಾವಿಡಶಾಸ್ತ್ರ ಕೃತಿಯ ಮೂಲಕ ಪ್ರಾಯೋಗಿಕವಾಗಿ ಪ್ರಸ್ತುತ ಪಡಿಸುತ್ತಿದೆ. ದ್ರಾವಿಡ ಭಾಷೆಗಳ ಅಕ್ಷರ ವ್ಯವಸ್ಥೆಯಿಂದ ಹಿಡಿದು, ಅದರ ಪ್ರಧಾನ ಮತ್ತು ಉಪಭಾಷೆಗಳ ವೈಶಿಷ್ಟ್ಯಗಳನ್ನು, ಆರ್ಯ ದ್ರಾವಿಡರ ಪರಿಕಲ್ಪನೆಯ ವಿಶ್ಲೇಷಣೆಯನ್ನು, ದ್ರಾವಿಡ ಸಂಸ್ಕೃತಿಯ ವಿಶಿಷ್ಟ ಮತ್ತು ಅನನ್ಯ ಆಯಾಮಗಳನ್ನು, ಈ ಸಂಸ್ಕೃತಿ ಚಿಂತನೆಯ ತಾತ್ವಿಕ ಹಿನ್ನೆಲೆಯನ್ನು, ಆರ್ಯ ದ್ರಾವಿಡ ಪರಿಕಲ್ಪನೆಯ ಸ್ವರೂಪವನ್ನು ಇಲ್ಲಿ ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿರುವುದು ಮಾತ್ರವಲ್ಲದೆ ದ್ರಾವಿಡ ಡೆಕ್ಕನ್ ದಕ್ಷಿಣ ಭಾರತ ಇವುಗಳ ಸಾರೂಪ್ಯ ಮತ್ತು ವಿಶೇಷತೆಗಳನ್ನು, ದ್ರಾವಿಡ ಜನಾಂಗ ಮತ್ತು ಸಂಸ್ಕೃತಿಗಳ ಅಧ್ಯಯನ ಸಾಹಸಿಗಳಾದ ಜರ್ಮನಿಯ ವಿದ್ವಾಂಸರನ್ನು, ದಕ್ಷಿಣ ಭಾರತದಲ್ಲಿ ನಡೆದ ಸಾಮಾಜಿಕ ಭಾಷಾವಿಜ್ಞಾನದ ಸಂಶೋಧನೆಯ ಸಾಧನೆ ಮತ್ತು ಸಾಧ್ಯತೆಗಳನ್ನು ಇಲ್ಲಿ ವಿವರಿಸಲಾಗಿದೆ. ದ್ರಾವಿಡ ಅಧ್ಯಯನಕ್ಕೆ ಈ ಸಂಪುಟದ ಲೇಖನಗಳು ವಿಶೇಷ ಆಯಾಮಗಳನ್ನು ಒದಗಿಸಿಕೊಡುತ್ತವೆ ಮತ್ತು ಪ್ರಬುದ್ಧವಾದ ಅಧ್ಯಯನ ಮತ್ತು ಆಲೋಚನೆಗಳ ಫಲವಾಗಿ ಈ ಲೇಖನಗಳು ಮೈದಳೆದಿರುವುದರಿಂದ ಇವು ಎತ್ತುವ ಪ್ರಶ್ನೆಗಳು, ಗುರುತಿಸಿರುವ ಹೊಸ ಅಂಶಗಳು ಈ ದಿಸೆಯಲ್ಲಿ ದ್ರಾವಿಡ ಸಂಸ್ಕೃತಿಯ ಹೊಸ ರೀತಿಯ ವಾಗ್ವಾದವನ್ನು ಹುಟ್ಟಿಹಾಕಬಲ್ಲಷ್ಟು ಸಮರ್ಥವಾಗಿವೆ. ಸಂಪಾದಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರು ಈ ಕೃತಿಗೆ ಬರೆದಿರುವ ವಿಸ್ತಾರವಾದ ಪ್ರಸ್ತಾವನೆ ಅವರ ಆಳವಾದ ಅಧ್ಯಯನ ಮತ್ತು ಸೂಕ್ಷ್ಮವಾದ ಒಳನೋಟಗಳ ಪ್ರತೀಕವಾಗಿದ್ದು ಈ ಕೃತಿಯ ಮೌಲ್ಯವನ್ನು ಅಧಿಕಗೊಳಿಸಿದೆ. ಇಂಥದೊಂದು ಕೃತಿಯನ್ನು ದ್ರಾವಿಡ ಅಧ್ಯಯನ ವಿಭಾಗದ ಮೂಲಕ ದೊರಕಿಸಿಕೊಟ್ಟ ಸಂಪಾದಕರಿಗೆ ಮತ್ತು ಹೊಸ ರೀತಿಯ ಸಂಶೋಧನೆಯ ನೆಲೆಗಟ್ಟಿನ ಅಭ್ಯಾಸಪೂರ್ಣ ಲೇಖನಗಳನ್ನು ಬರೆದಿರುವ ಲೇಖಕರಿಗೆ ನನ್ನ ಅಭಿನಂದನೆಗಳು ಸಲ್ಲುತ್ತವೆ.

**ಡಾ. ಎಚ್.ಜೆ. ಲಕ್ಕಪ್ಪಗೌಡ**
ಕುಲಪತಿಯವರು

ದ್ರಾವಿಡಶಾಸ್ತ್ರ